# ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ

## (ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿಯನ್ನು ಅನುಲಕ್ಷಿಸಿ)

(ವಾಣಿಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು
ರಾಜೇಶ್ವರಿ ಜಿ.

ಮಾರ್ಗದರ್ಶಕರು
ಡಾ. ಎಂ.ಚಂದ್ರ ಪೂಜಾರಿ
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ




ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ

## (ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿಯನ್ನು ಅನುಲಕ್ಷಿಸಿ)

(ವಾಣಿಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ )



ಸಂಶೋಧಕರು

**ರಾಜೇಶ್ವರಿ ಜಿ.**

ಮಾರ್ಗದರ್ಶಕರು

**ಡಾ. ಎಂ.ಚಂದ್ರ ಪೂಜಾರಿ**

ಪ್ರಾಧ್ಯಾಪಕರು

ಅಭಿವೃದ್ಧಿ ಅಧ್ಯಯನ ವಿಭಾಗ



ಅಭಿವೃದ್ಧಿ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

ರಾಜೇಶ್ವರಿ ಜಿ. ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿದ **ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ (ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿಯನ್ನು ಅನುಲಕ್ಷಿಸಿ)**ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಎಂ.ಚಂದ್ರ ಪೂಜಾರಿ**
ಪ್ರಾಧ್ಯಾಪಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 17/09/18

# ಸಂಶೋಧಕರ ಘೋಷಣಾ ಪತ್ರ

**ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ (ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿಯನ್ನು ಅನುಲಕ್ಷಿಸಿ)**ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಎಂ.ಚಂದ್ರ ಪೂಜಾರಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ರಾಜೇಶ್ವರಿ ಜಿ.**

ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ

**ಅಭಿವೃದ್ಧಿ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ: 17/09/18

# ಪರಿವಿಡಿ

# ಕೋಷ್ಟಕಗಳು

# ಪ್ರಸ್ತಾವನೆ

ಪೀಠಿಕೆ

ಸಮಸ್ಯೀಕರಣ

ಅಧ್ಯಯನದ ಉದ್ದೇಶಗಳು

ಅಧ್ಯಯನದ ವಿಧಾನ

ಅಧ್ಯಯನದ ಮಿತಿಗಳು

ಅಧ್ಯಾಯಗಳ ವಿನ್ಯಾಸ

# ಪ್ರಸ್ತಾವನೆ

## ಪೀಠಿಕೆ

ಭಾರತದಲ್ಲಿ ಕರ್ನಾಟವು ಆರ್ಥಿಕ ಅಭಿವೃದ್ಧಿಯಲ್ಲಿ ತನ್ನದೇ ಆದ ಮಹತ್ತರ ಸ್ಥಾನವನ್ನು ಹೊಂದಿದೆ. 2011–2012ರ ಹಣಕಾಸಿನ ವರ್ಷದಲ್ಲಿ ಶೇ.8.2ರಷ್ಟು ಜಿ.ಎಸ್.ಡಿ.ಪಿ(ಗ್ರಾಸ್ ಸ್ಟೇಟ್ ಡೊಮೆಸ್ಟಿಕ್ ಪ್ರೋಡಕ್ಟ್)ಯನ್ನು ಕರ್ನಾಟಕವು ತನ್ನ ಪಾಲನ್ನು ನೀಡಿದೆ. ಕರ್ನಾಟಕದಲ್ಲಿ, ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ರೈತರು ಪ್ರಮುಖವಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ, ಒಟ್ಟು 1,23,100 ಕಿ.ಮೀ ಭೂಮಿಯಲ್ಲಿ ಕೃಷಿನಿರತ ಜನರಿದ್ದಾರೆ ಮತ್ತು 2001ರ ಜನಗಣತಿಯ ಪ್ರಕಾರ ಶೇ.56ರಷ್ಟು ಜನರು ಕೃಷಿಯಲ್ಲಿ ತಮ್ಮ ಜೀವನವನ್ನು ಕಂಡುಕೊಂಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಬಹುಮುಖ್ಯವಾಗಿ ಜೋಳ, ರಾಗಿ, ಭತ್ತ, ಮೆಕ್ಕೆಜೋಳ, ಧಾನ್ಯಗಳನ್ನು, ಎಣ್ಣೆಕಾಳುಗಳನ್ನು, ಮಸಾಲೆ ಸಾಮಗ್ರಿಗಳನ್ನು, ಗೋಡಂಬಿಯಂತಹ ಬೆಳೆಗಳನ್ನು ಬೆಳೆಯುತ್ತಾರೆ. ರಾಜ್ಯವು ದೇಶದಲ್ಲಿಯೇ ಕಾಫಿ, ಮತ್ತು ಟಮೊಟೋ ಬೆಳೆಗಳಲ್ಲಿ ಎರಡನೇ ಸ್ಥಾನವನ್ನು ಹೊಂದಿದೆ. ಅಲ್ಲದೆ ರಾಜ್ಯದಲ್ಲಿ ಶೇ.40ರಷ್ಟು ಆದಾಯವು ತೋಟಗಾರಿಕೆ ಕೃಷಿಯಿಂದ ಬರುತ್ತಿದ್ದು, ಇದು ಶೇ.7ರಷ್ಟು ದೇಶದ ಜಿಡಿಪಿಯನ್ನು ನಿಡುತ್ತಿದೆ. ಹಾಗೆಯೇ ಫ್ಲೋರಿಕಲ್ಚರ್‌ನಲ್ಲಿ ಕರ್ನಾಟಕವು ದೇಶದಲ್ಲಿ ಎರಡನೇ ಸ್ಥಾನವನ್ನು ಹೊಂದಿದ್ದು, 2004–2005ರ ವರದಿ ಪ್ರಕಾರ 700 ಟನ್‌ಗಳಷ್ಟು ಉತ್ಪಾದನೆಯನ್ನು ಮಾಡಿದೆ.

ಬಳ್ಳಾರಿಯು ಕರ್ನಾಟಕದ ಜಿಲ್ಲೆಯಾಗಿದ್ದು, ಇಂದಿಗೂ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯನ್ನೇ ಮೂಲಕಸುಬನ್ನಾಗಿಸಿ ಮಾಡಿಕೊಂಡಿದ್ದಾರೆ. ಜಿಲ್ಲೆಯ ಪ್ರದೇಶಗಳಲ್ಲಿ ಪ್ರಮುಖವಾಗಿ ಬೆಳೆಯುವ ಬೆಳೆಗಳು, ಹತ್ತಿ, ಶೇಂಗಾ, ಜೋಳ, ಸೂರ್ಯಕಾಂತಿ, ಮೆಕ್ಕೆಜೋಳ, ಭತ್ತ ಮತ್ತು ತೋಟಗಾರಿಕೆ ಬೆಳೆಗಳು ಹಣ್ಣುಗಳಾದ ದಾಳಿಂಬೆ, ಬಾಳೆಹಣ್ಣು, ಪಪ್ಪಾಯಿ, ಅಂಜೂರ, ಸಪೋಟ ಮತ್ತು ತರಕಾರಿ ಹಾಗೂ ಹೂವುಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದಾರೆ.[1] ಜಿಲ್ಲೆಯಲ್ಲಿ ಒಟ್ಟು ಶೇಕಡ 37ರಷ್ಟು ಭೂಮಿಯಲ್ಲಿ ಜನರು ಕೃಷಿಯನ್ನು ಮಾಡುತ್ತಿದ್ದಾರೆ. ಒಟ್ಟಾರೆ ಹೇಳುವುದಾದರೆ ಜಿಲ್ಲೆಯಲ್ಲಿ ಹೆಚ್ಚಿನ ಗ್ರಾಮೀಣ ಪ್ರದೇಶಗಳು ಇಂದಿಗೂ ಕೃಷಿಯನ್ನೇ

ಅವಲಂಬಿಸಿದ್ದು, ಕೃಷಿಯಲ್ಲೆ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಹೀಗಾಗಿ ರೈತರು ಬೀಜ, ಗೊಬ್ಬರ, ಕ್ರಿಮಿನಾಶಕಗಳನ್ನು ಇತ್ಯಾದಿ ಕೃಷಿ ಸಲಕರಣೆಗಳನ್ನು ಕೊಳ್ಳುವುದರಿಂದ ಹಿಡಿದು, ಇವುಗಳೆಲ್ಲವನ್ನು ಬಳಸಿಕೊಂಡು ಉತ್ಪನ್ನಗಳನ್ನು ಉತ್ಪಾದಿಸಲು ಇರುವ ಯೋಜನೆಗಳಿಂದ ಮತ್ತು ರೈತರು ಬೆಳೆದ ಉತ್ಪನ್ನಗಳನ್ನು ಮಾರಾಟ ಮಾಡಲು ಇರುವ ಹಲವು ಹಂತದ ಯೋಜನೆಗಳವರೆಗೆ ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಭಾರತದಲ್ಲಿ ಇಂದಿಗೂ ಕೃಷಿಯಲ್ಲಿ ಹೆಚ್ಚಿನ ಸಂಖ್ಯೆಯ ಜನರು ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ ಇದರಿಂದ ಆರ್ಥಿಕ ಸ್ಥಿರತೆಯನ್ನು ತಕ್ಕ ಮಟ್ಟಿಗೆ ಕಂಡುಕೊಂಡಿದ್ದಾರೆ. 2013ರ ಜಿಡಿಪಿಯಲ್ಲಿ ಹೇಳುವಂತೆ ಭಾರತ ಕೃಷಿಯೂ, ಕೃಷಿ ಉತ್ಪನ್ನಗಳ ಉತ್ಪಾದನೆಯಲ್ಲಿ ವಿಶ್ವಾದ್ಯಂತ ಎರಡನೇ ಸ್ಥಾನದಲ್ಲಿದ್ದು, ಒಟ್ಟಾರೆ ದುಡಿಮೆಯ ಕಾರ್ಯಪಡೆಯಲ್ಲಿ, ಕೃಷಿಯಲ್ಲಿ ಸುಮಾರು ಅರ್ಧದಷ್ಟು ಅಂದರೆ, ಶೇಕಡ. 50%ರಷ್ಟು ರೈತರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಮತ್ತು ಇಂದಿಗೂ ಮೂಲಕಸುಬಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ.[2] ಹಾಗೆಯೇ ಜಿಡಿಪಿಯ ಪ್ರಕಾರ ಅರಣ್ಯ ಅಭಿವೃದ್ಧಿ ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಕ್ಷೇತ್ರಗಳಾದ ಮೀನುಗಾರಿಕೆ(ಒಟ್ಟು ದೇಶೀಯ ಉತ್ಪನ್ನ)ಯಲ್ಲಿ ಶೇ.13.7ರಷ್ಟು ಪ್ರಸ್ತುತ ವರ್ಷದಲ್ಲಿ ಉತ್ಪಾದನೆಯಾಗಿದೆ. ದೇಶದಲ್ಲಿ ಕೃಷಿಯೂ ಆರ್ಥಿಕ ಬೆಳವಣಿಗೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ ಎನ್ನುವುದನ್ನು ನಾವು ಸ್ಥಿರವಾಗಿ ಜಿಡಿಪಿಗೆ ಕೃಷಿಯು ಕೊಡುತ್ತಿರುವ ಕೊಡುಗೆಯನ್ನು ನೋಡಿ ತಿಳಿಯ ಬಹುದಾಗಿದೆ.[3] ಭಾರತವು 2013ರಲ್ಲಿ 39 ಶತಕೋಟಿ ಡಾಲರ್ ಮೌಲ್ಯದ ಕೃಷಿ ಉತ್ಪನ್ನಗಳನ್ನು ರಫ್ತು ಮಾಡಿದ್ದು, ವಿಶ್ವದಲ್ಲೇ ಕೃಷಿ ಉತ್ಪನ್ನಗಳನ್ನು ರಫ್ತು ಮಾಡಿದ ಏಳನೆ ಅತಿ ದೊಡ್ಡ ರಾಷ್ಟ್ರವಾಗಿದೆ. ಭಾರತದಿಂದ ಕೃಷಿ ಉತ್ಪನ್ನಗಳು ಮತ್ತು ತೋಟಗಾರಿಕೆ ಬೆಳೆಗಳನ್ನು ಆಗ್ನೇಯ ಏಷ್ಯಾ, ದೇಶಗಳು(ಸಾರ್ಕ್ ದೇಶಗಳು) ಮತ್ತು ಯುನೈಟೆಡ್ ಸ್ಟೇಟ್ಸ್, ಮೊದಲಾದ 100ಕ್ಕೂ ಹೆಚ್ಚು ದೇಶಗಳಿಗೆ ರಫ್ತು ಮಾಡುತ್ತಿದೆ.

ಕೃಷಿ ಮಾರುಕಟ್ಟೆಯು, ರೈತರು ಉತ್ಪಾದಿಸಿದ ಕೃಷಿ ಉತ್ಪನ್ನಗಳನ್ನು ರೈತರಿಂದ ನೇರವಾಗಿ ಗ್ರಾಹಕರಿಗೆ ತಲುಪಿಸುವ ಮಹತ್ತರವಾದ ಕಾರ್ಯವನ್ನು ಮಾಡುತ್ತದೆ. ರೈತರಿಂದ ಉತ್ಪನ್ನಗಳನ್ನು ಗ್ರಾಹಕರಿಗೆ ತಲುಪಿಸುವಲ್ಲಿ ಮಾರುಕಟ್ಟೆಯು ವಿವಿಧ ಹಂತಗಳನ್ನು ಹೊಂದಿದೆ. ಅವುಗಳಲ್ಲಿ ಪ್ರಮುಖವಾಗಿ ಯೋಜನೆಗಳನ್ನು ರೂಪಿಸುವುದು, ಸಂಘಟಿಸುವುದು, ನಿರ್ದೇಶಿಸುವುದು ಮತ್ತು ಇವೆಲ್ಲ ಹಂತಗಳನ್ನು ಸರಿಯಾಗಿ ನಿಭಾಯಿಸಿ ರೈತರನ್ನು, ಮಾರಾಟಗಾರರನ್ನು ಮತ್ತು ಗ್ರಾಹಕರನ್ನು ತೃಪ್ತಿಪಡಿಸುವುದಾಗಿದೆ. ಉತ್ಪನ್ನಗಳು ಗ್ರಾಹಕರ ಕೈಗೆ ತಲುಪಲು ಅನೇಕ ಹಂತಗಳನ್ನು ದಾಟಬೇಕಾಗಿದೆ. ಮೊದಲನೆಯದಾಗಿ ಉತ್ಪನ್ನಗಳನ್ನು ಉತ್ಪಾದಿಸಲು ಸರಿಯಾದ ಯೋಜನೆಯನ್ನು

ರೂಪಿಸಿಕೊಳ್ಳುವುದು, ಉತ್ಪನ್ನಗಳು ಬೆಳೆದ ನಂತರ ಕಟಾವು ಮಾಡುವುದು, ಉತ್ಪನ್ನಗಳಿಗೆ ಗ್ರೇಡಿಂಗ್ ಕೊಡುವುದು, ಉತ್ಪನ್ನಗಳ ಪ್ಯಾಕಿಂಗ್ ಮಾಡುವುದು, ಉತ್ಪನ್ನಗಳ ಸಾಗಣಿಕೆ ವ್ಯವಸ್ಥೆ, ದಾಸ್ತಾನುಗಳ ವ್ಯವಸ್ಥೆ, ಆಹಾರ ಸಂಸ್ಕರಣೆ ಮಾಡುವುದು, ಉತ್ಪನ್ನಗಳನ್ನು ವಿತರಣೆ ಮಾಡಬೇಕು ಮತ್ತು ಸರಿಯಾದ ಜಾಹಿರಾತುಗಳನ್ನು ಉತ್ಪಗಳ ಮಾರಾಟಕ್ಕೆ ಅನುಕೂಲವಾಗುವಂತೆ ಮಾಡಬೇಕು. ಹೀಗೆ ಮಾರಾಟವೂ ವಿವಿಧ ಹಂತದ ಮಾರಾಟದ ಕೊಂಡಿ(ಸಪ್ಲೈ ಚೈನ್)ಗಳನ್ನು ಹೊಂದಿದೆ. ದಿನಾಂಕ 26/1/2015ರಂದು TNN (the national network) ಹೊಸದಿಲ್ಲಿಯ ವರದಿಯನ್ನು ಆಧರಿಸಿ ಪತ್ರಿಕೆಯ ಪ್ರಕಾರ ಭಾರತವೂ ತೋಟಗಾರಿಕೆ ಉತ್ಪಾದನೆಯಲ್ಲಿ ಎರಡನೆ ಸ್ಥಾನವನ್ನು ಹೊಂದಿದೆ. (2010) (ಎಫ್‌ಎಒ) FAO (food and agriculture organisation) ವಿಶ್ವ ಕೃಷಿ ಅಂಕಿ–ಅಂಶಗಳ ಪ್ರಕಾರ ಬಾರತವು ಅನೇಕ ತಾಜಾ ಹಣ್ಣುಗಳು ಮತ್ತು ತರಕಾರಿ ಬೆಳೆಗಳನ್ನು ಹಾಗೂ ಹಾಲು ಮತ್ತು ಪ್ರಮುಖ ಮಸಾಲೆ ಉತ್ಪನ್ನಗಳನ್ನು ವಿಶ್ವದ ಅನೇಕ ರಾಷ್ಟ್ರಗಳಿಗೆ ರಫ್ತು ಮಾಡುತ್ತದೆ. ಹೀಗೆ ಅಂಕಿ ಅಂಶಗಳನ್ನು ನೊಡುವುದಾದರೆ ಭಾರತದಲ್ಲಿ ಕೃಷಿಯಲ್ಲಿಯ ಅಭಿವೃದ್ಧಿಯು ವರ್ಷದಿಂದ ವರ್ಷಕ್ಕೆ ಅಭಿವೃದ್ಧಿ ಹೊಂದಿದೆ ಮತ್ತು ಹೊಂದುತ್ತಿದೆ ಎನ್ನಲಾಗುತ್ತದೆ. ಅದಕ್ಕೆ ತಕ್ಕಂತೆ ಪ್ರತಿ ಬಜೆಟ್ ಮಂಡನೆಯಲ್ಲೂ ಕೃಷಿಗೆ ಹೆಚ್ಚಿನ ಆದ್ಯತೆ ನೀಡಿ ಎಲ್ಲ ಕ್ಷೇತ್ರಕ್ಕಿಂತಲೂ ಸ್ವಲ್ಪ ಜಾಸ್ತಿಯೇ ರೈತರ ಉದ್ಧಾರಕ್ಕಾಗಿ ಹಣವನ್ನು ಬಿಡುಗಡೆ ಮಾಡುತ್ತಾರೆ 2017–18ರ ಸಾಲಿನಲ್ಲಿ ಕೃಷಿ ಕ್ಷೇತ್ರಕ್ಕೆ, ರೈತರಿಗೆ ಸಾಲ ನೀಡುವುದಕ್ಕಾಗಿ 10 ಲಕ್ಷ ಕೋಟಿ ರೂಪಾಯಿ ಅನುದಾನ ನೀಡಲಾಗಿದೆ. ಆದರೂ ರೈತರು ಸಾಲ ತೀರಿಸಲಾಗದೆ ಮಾಡಿಕೊಳ್ಳುತ್ತಿರುವ ಆತ್ಮಹತ್ಯೆಗಳೇನು ಕಡಿಮೆ ಇಲ್ಲ. ಹಾಗೆಯೇ ಸರ್ಕಾರವು ನೀಡುತ್ತಿರುವ ಆಶ್ವಾಸನೆಗಳಿಗೂ ಕೊರತೆ ಇಲ್ಲ.

ಒಟ್ಟಿನಲ್ಲಿ ರೈತರ ಕುರಿತು, ಕೃಷಿಯ ಕುರಿತು ಪ್ರತಿ ವರ್ಷವೂ, ಹಳ್ಳಿಯಿಂದ ಹಿಡಿದು ಡೆಲ್ಲಿಯವರೆಗೆ, ಎನ್ನುವ ಮಾತಿನಂತೆ ರಾಜ್ಯದಿಂದ ಹಿಡಿದು ರಾಷ್ಟ್ರದವರೆಗೂ ಪ್ರತಿಯೊಬ್ಬರೂ ಮಾತನಾಡುತ್ತಾರೆ. ಆದರೆ ಸಂಪೂರ್ಣವಾಗಿ ಯಾವ ರಾಜ್ಯದಲ್ಲಿಯೂ ಕೃಷಿ ಮಾಡಿದ ರೈತರು, ಕೃಷಿಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಂದ ಹೊರ ಬರಲಾಗುತ್ತಿಲ್ಲ ಮತ್ತು ರಾಷ್ಟ್ರದಲ್ಲಾಗುತ್ತಿರುವ ರೈತರ ಆತ್ಮಹತ್ಯೆಗಳ ಸಂಖ್ಯೆಯೂ ಕಡಿಮೆಯಾಗುತ್ತಿಲ್ಲ ಇವೆಲ್ಲ ಸಂಗತಿಗಳನ್ನು ಪರಿಗಣಿಸಿ ಸಂಶೋಧನ ಅಧ್ಯಯನದ ವಿಷಯವನ್ನು ಸರ್ಕಾರದ ಕೃಷಿ ಯೋಜನೆಗಳ ಅನುಷ್ಠಾನ ಮತ್ತು ರೈತರಿಗೆ ಅವುಗಳಿಂದಾಗುತ್ತಿರುವ ಪ್ರಯೋಜನಗಳ ಕುರಿತಾಗಿದೆ.

ಡಿಸೆಂಬರ್ 1 ಮತ್ತು 2ನೇ ತಾರೀಖಿನಂದು ಬೆಂಗಳೂರಿನಲ್ಲಿ ನಡೆದ ಕೃಷಿ ಶೃಂಗಸಭೆಗೆ ಪೂರಕವಾಗಿ ಕರ್ನಾಟಕ ಸರ್ಕಾರವು ಕೃಷಿಕ್ಷೇತ್ರವನ್ನು ಸುಸ್ಥಿರಗೊಳಿಸಿ ಅಹಾರ ಉತ್ಪಾದನೆಯನ್ನು ಹೆಚ್ಚಿಸುವ ಕುರಿತು ತನ್ನ ಉದ್ದೇಶವನ್ನು ಪ್ರಕಟಪಡಿಸಿತು(ಡಿಸೆಂಬರ್ 1, 2011ರ ಪ್ರಜಾವಾಣಿ).[4]

ರೇಷ್ಮೆ ತೋಟಗಾರಿಕೆ ಮೀನು ಜೇನು ಸಾಕಾಣಿಕ ಹೈನುಗಾರಿಕೆ ಕ್ಷೇತ್ರಕ್ಕೆ ಹೆಚ್ಚಿನ ಒತ್ತು ನೀಡಲಾಗುವುದೆಂದು ಪ್ರಕಟಪಡಿಸಿತು. ಇಸ್ರೇಲ್, ನೆದರ್‌ಲ್ಯಾಂಡ್, ಫ್ರಾನ್ಸ್, ಕೆನಡಾ ದೇಶಗಳ ಆಧುನಿಕ ತಂತ್ರಜ್ಞಾನ ರಾಜ್ಯದ ರೈತರಿಗೆ ತಲುಪಬೇಕು ಎಂಬುದು ಸರ್ಕಾರದ ಉದ್ದೇಶ. ಕೃಷಿ ಮೂಲ ಸೌಕರ್ಯಗಳ ಉನ್ನತೀಕರಣ, ಆಧುನೀಕರಣ, ಸಂಸ್ಕರಣೆ, ಕೃಷಿ, ತೋಟಗಾರಿಕೆ ಪ್ರವಾಸೋದ್ಯಮ ಮತ್ತಿತರ ಕ್ಷೇತ್ರಗಳ ಬಂಡವಾಳ ಹೂಡಿಕೆಯನ್ನು ನಿರೀಕ್ಷಿಸಲಾಗಿದೆ.

ಸರ್ಕಾರದ ಈ ರೀತಿಯ ಹೇಳಿಕೆಗಳು ತುಂಬಾ ಹಿಂದಿನಿಂದಲೂ ಪ್ರಕಟಗೊಳ್ಳುತ್ತಲೇ ಇರುತ್ತವೆ. ಆದರೆ ಯಾವ ಯೋಜನೆಗಳೂ ಸಮರ್ಪಕವಾಗಿ ಜಾರಿಗೆ ಬಂದುದಿಲ್ಲ. ಇದೇ ಸಂದರ್ಭದಲ್ಲಿ ಕೇಂದ್ರ ಸರ್ಕಾರವು ಚಿಲ್ಲರೆ ವಹಿವಾಟಿನಲ್ಲಿ ವಿದೇಶಿ ಬೃಹತ್ ಸರಣಿ ಮಾರಾಟ ಸಂಸ್ಥೆಗಳಿಗೆ ಅವಕಾಶ ಮಾಡಿಕೊಡುವ ನಿರ್ಧಾರವು ತೀವ್ರ ವಿವಾದಕ್ಕೆ ಎಡೆ ಮಾಡಿಕೊಟ್ಟಿದೆ. ಕೇಂದ್ರ ಸರ್ಕಾರದ ಈ ನಿರ್ಧಾರ ಜಾರಿಗೆ ಬರಲಿ ಬಿಡಲಿ, ಇದಂತೂ ರೈತರ ಅಭಿವೃದ್ಧಿ ಪರವಾದ ಚರ್ಚೆಯನ್ನು ಹುಟ್ಟು ಹಾಕಿರುವುದು ಅರ್ಥಪೂರ್ಣವಾಗಿದೆ. ಕೇಂದ್ರ ಸರ್ಕಾರ ಜಾರಿಗೆ ತರಲಿಚ್ಛಿಸಿದ ಚಿಲ್ಲರೆ ವಹಿವಾಟಿನಿಂದ ರೈತರಿಗಾಗುವ ಉಪಯೋಗಗಳನ್ನು ಈ ರೀತಿ ವಿವರಿಸಲಾಗುತ್ತದೆ. ಮೊದಲನೆಯದಾಗಿ, ರೈತರು ಮತ್ತು ವ್ಯಾಪಾರಿಗಳ ಮಧ್ಯೆ ವ್ಯವಹರಿಸುತ್ತಿರುವ ಮಧ್ಯವರ್ತಿಗಳ ಹಾವಳಿಗೆ ಕೊನೆ ಹಾಡಿದರೆ ಕೃಷಿಕರ ಉತ್ಪನ್ನಕ್ಕೆ ಹೆಚ್ಚು ಬೆಲೆ ದೊರೆಯಲಿದೆ. ಎರಡನೆಯದಾಗಿ, ಚಿಲ್ಲರೆ ವಹಿವಾಟಿನ ಸರಕುಗಳ ಬೆಲೆ ತಗ್ಗಿಸಿ ಹಣದುಬ್ಬರಕ್ಕೆ ಕಡಿವಾಣ ಹಾಕಲಿದೆ. ಮೂರನೆಯದಾಗಿ, ಬೃಹತ್ ಸರಣಿ ಮಾರಾಟ ಸಂಸ್ಥೆಗಳು ತಮ್ಮ ಹೂಡಿಕೆಯ ಶೇ. 50ರಷ್ಟನ್ನು ಶೈತ್ಯಾಗಾರ, ಉಗ್ರಾಣದಂತಹ ಸರಕುಗಳ ಪೂರೈಕೆಯ ಮೂಲಸೌಕರ್ಯಕ್ಕೆ ವೆಚ್ಚ ಮಾಡುವುದರಿಂದ ತ್ವರಿತವಾಗಿ ನಾಶವಾಗುವ ಹಣ್ಣು ಮತ್ತು ತರಕಾರಿಗಳ ತ್ಯಾಜ್ಯದ ಪ್ರಮಾಣ ಶೇ.40ರಿಂದ 50ರಷ್ಟು ಕಡಿಮೆಯಾಗಲಿದೆ.[5] ನಾಲ್ಕನೆಯದಾಗಿ, ಚಿಲ್ಲರೆ ವಹಿವಾಟುದಾರರು ತಮ್ಮ ಅಗತ್ಯದ ಶೇಕಡ 50ರಷ್ಟನ್ನು ಸಣ್ಣ ಮತ್ತು ಮಧ್ಯಮ ಕೈಗಾರಿಗಳಿಂದಲೇ ಖರೀದಿಸಬೇಕು. ಇದರಿಂದ ಎಸ್.ಎಂ.ಇ.ಗಳಿಗೆ ದೊಡ್ಡ ಮಾರುಕಟ್ಟೆ ಸೃಷ್ಟಿಯಾಗಲಿದ್ದು ಉತ್ತಮ ತಂತ್ರಜ್ಞಾನದ ಜತೆಗೆ ಹರಿದುಬರಲಿದೆ. ಐದನೆಯದು, ಹತ್ತು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ನಗರಗಳಲ್ಲಿ ಮಾತ್ರ ಬೃಹತ್ ಮಳಿಗೆಗಳಿಗೆ ಅವಕಾಶ ಕಲ್ಪಿಸುವುದರಿಂದ ಇತರ ನಗರ ಪಟ್ಟಣಗಳಲ್ಲಿ ಚಿಕ್ಕ ಪುಟ್ಟ ಮಳಿಗೆಗಳ ಅಸ್ತಿತ್ವಕ್ಕೆ ಯಾವುದೇ ಧಕ್ಕೆ ಇಲ್ಲ. ಬದಲಿಗೆ ಹೊಸ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಲಿವೆ. ಆರನೆಯದಾಗಿ, ಮಾರುಕಟ್ಟೆಯಲ್ಲಿ ಆರೋಗ್ಯಕರ ಸ್ಪರ್ಧೆ ಉತ್ತೇಜಿಸುವುದರಿಂದ ಉತ್ಪಾದಕರು ಮತ್ತು ಗ್ರಾಹಕರಿಗೆ ಲಾಭ ದೊರೆಯಲಿದೆ ಎಂದು ಪ್ರತಿಪಾದಿಸಲಾಗುತ್ತಿದೆ.

ಇದಕ್ಕೆ ಒಂದು ವರ್ಗದಿಂದ ವ್ಯಾಪಕವಾದ ವಿರೋಧವೂ ವ್ಯಕ್ತವಾಗುತ್ತಿದೆ. ಪ್ರಸ್ತುತ

ದೇಶದಲ್ಲಿ ಚರ್ಚೆಗೆ ಗ್ರಾಸವಾಗಿರುವ ಈ ಅಂಶವು ನನ್ನ ಅಧ್ಯಯನಕ್ಕೆ ವಿನೂತನವಾದ ಆಯಾಮವೊಂದನ್ನು ಒದಗಿಸುತ್ತದೆ. ಯಾಕೆಂದರೆ ನಿಜಕ್ಕೂ ಈ ಚಿಲ್ಲರೆ ವಹಿವಾಟವನ್ನು ವಿದೇಶಿ ಬಂಡವಾಳಿಗರಿಗೆ ವಹಿಸುವುದರಿಂದ ನಮ್ಮ ರೈತರ ಉತ್ಪಾದನೆಗೆ ನ್ಯಾಯವಾದ ಬೆಲೆ ದೊರೆತರೆ ಅದು ಸ್ವಾಗತಾರ್ಹವೇ. ಇದರಿಂದಾಗಿ ಭಾರತೀಯ ರೈತರಿಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ವೈಜ್ಞಾನಿಕ ಬೆಲೆ ಸಿಗುವಂತಾದರೆ ದೇಶೀಯ ಬಂಡವಾಳಿಗರ, ಮಧ್ಯವರ್ತಿಗಳ, ದಲ್ಲಾಳಿಗಳ, ವ್ಯಾಪಾರಿಗಳ ಶೋಷಣೆಯಿಂದ ಪಾರಾಗುವ ಅವಕಾಶ ಸಿಕ್ಕಂತೆಯೇ ಸರಿ. ಈ ಚಿಲ್ಲರೆ ವ್ಯವಹಾರದಿಂದ ಯಾರಿಗೆ ಉಪಯೋಗಕರವೋ ಎಂಬುದು ಇನ್ನೂ ನಿಗೂಢವೇ ಆದರೂ ಈ ಅಂಶವು ರೈತರ ನಿಜವಾದ ಸಮಸ್ಯೆಗಳನ್ನು ರಾಷ್ಟ್ರೀಯ ಮುನ್ನೆಲೆಗೆ ತಂದುದಂತೂ ಸತ್ಯ. ದೇಶದಲ್ಲಿ ರೈತರು ನಿಜಕ್ಕೂ ಕೊನೆಯೇ ಇಲ್ಲದ ಶೋಷಣೆಗೆ ತುತ್ತಾಗುತ್ತಾರೆಂಬ ಸಂಗತಿಯನ್ನು ಸರ್ಕಾರ ಆದಿಯಾಗಿ ಎಲ್ಲರೂ ಒಪ್ಪಿಕೊಂಡಂತೆಯೇ ಆಗುತ್ತದೆ. ಇಂತಹ ಸಮಕಾಲೀನ ಸಂದರ್ಭವು ಅಧ್ಯಯನದ ಮಹತ್ವವನ್ನು ಮತ್ತು ಜವಾಬ್ದಾರಿಯನ್ನು ಮತ್ತಷ್ಟು ಹೆಚ್ಚಿಸಿದೆಯೆಂದರೆ ತಪ್ಪಾಗಲಿಕ್ಕಿಲ್ಲ.

ಸ್ವರೂಪದಲ್ಲಿ ಬಯಲು ಸೀಮೆಯ ಜಿಲ್ಲೆಯಾಗಿರುವ ಬಳ್ಳಾರಿ ಜಿಲ್ಲೆಯ ಗ್ರಾಮಾಂತರ ಮಾರುಕಟ್ಟೆ ಸ್ವರೂಪಕ್ಕೂ ಮತ್ತು ಭೌಗೋಳಿಕವಾಗಿ ಹಾಗೂ ಪ್ರಾಕೃತಿಕ ಭಿನ್ನತೆಯೊಂದಿಗೆ ಜಿಲ್ಲೆಯ ಇತರೆ ತಾಲೂಕುಗಳೊಡನೆ ಗ್ರಾಮಾಂತರ ಮಾರುಕಟ್ಟೆಗಳ ಸ್ವರೂಪಕ್ಕೆ ಹೋಲಿಸಿ ವ್ಯಾಖ್ಯಾನಿಸಲು ಪ್ರಯತ್ನಿಸಲಾಗುತ್ತದೆ. ಅಲ್ಲದೆ ಈ ಕುರಿತಾಗಿ ನಡೆದ ಅಧ್ಯಯನಗಳನ್ನು ಸಮೀಕ್ಷಿಸಿ ಪ್ರಸ್ತುತ ಅಧ್ಯಯನದ ಸ್ವರೂಪ ಮತ್ತು ವಿನ್ಯಾಸವನ್ನು ನಿರ್ಧರಿಸಲಾಗುತ್ತದೆ. ಅದರಲ್ಲಿ ಪ್ರಮುಖವಾಗಿ ತೋಟಗಾರಿಕೆ ಎಂದರೇನು? ಗ್ರಾಮ ಎಂದರೇನು? ಕೃಷಿ ಎಂದರೇನು? ಮಾರುಕಟ್ಟೆ ಎಂದರೇನು? ಇತ್ಯಾದಿ ಪ್ರಶ್ನೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ತೋಟಗಾರಿಕೆ ಕೃಷಿಯು ವಿಜ್ಞಾನ ಮತ್ತು ಕಲೆ ಎರಡನ್ನು ಹೊಂದಿದ ವ್ಯವಸಾಯ ಪದ್ಧತಿಯಾಗಿದೆ. ಮುಖ್ಯವಾಗಿ ತೋಟಗಾರಿಕೆ ಬೆಳೆಗಳಲ್ಲಿ ಹಣ್ಣುಗಳು, ತರಕಾರಿಗಳು, ಹೂವುಗಳು ಮತ್ತು ಯಾವುದೇ ಇತರೆ ತಳಿಗಳನ್ನು ಕೂಡ ಬೆಳೆಯಬಹುದಾಗಿದೆ. ತೋಟಗಾರಿಕೆ ಕೃಷಿಯು ಸಸ್ಯ ಸಂರಕ್ಷಣೆ, ಭೂಸವಕಳಿಯನ್ನು ತಪ್ಪಿಸುವುದು, ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವುದು, ಮಣ್ಣಿನ ನಿರ್ವಹಣೆ, ಉದ್ಯಾನವನಗಳ ಸಂರಕ್ಷಣೆ ಮತ್ತು ವಿನ್ಯಾಸ, ನಿರ್ಮಾಣ ನಿರ್ವಹಣೆ ಮತ್ತು ಆರ್ಬೋರ್‌ಕಲ್ಚರ್‌ಗಳನ್ನು ಸಹ ಒಳಗೊಂಡಿದೆ. ತೋಟಗಾರಿಕೆ ಬೆಳೆಯು ಕೃಷಿಯಲ್ಲಿ ಮಾಡುವಂತೆ ದೊಡ್ಡ ಪ್ರಮಾಣದ ಬೆಳೆ ಉತ್ಪಾದನೆ ಅಥವಾ ಪಶು ಸಂಗೋಪನೆಯನ್ನು ಒಳಗೊಂಡಿರುವುದಿಲ್ಲ. ಅಲ್ಲದೆ ಮಾನವ ಆಹಾರ ಮತ್ತು ಆಹಾರೇತರ ಬಳಕೆಗಾಗಿ ಮತ್ತು

ವೈಯಕ್ತಿಕ ಅಥವಾ ಸಾಮಾಜಿಕ ಅಗತ್ಯಗಳಿಗಾಗಿ ತೀವ್ರವಾಗಿ ಉತ್ಪತ್ತಿಯಾಗುವ ಸಸ್ಯಗಳನ್ನು ಬೆಳೆಯಲು ಬಳಸಲಾಗುವ ರೈತರ ಜ್ಞಾನ, ಕೌಶಲ್ಯಗಳು ಮತ್ತು ತಂತ್ರಜ್ಞಾನಗಳನ್ನು ಸಹ ತೋಟಗಾರಿಕೆ ಕೃಷಿ ಎಂದು ಹೇಳಲಾಗುತ್ತದೆ. ಇದರೊಂದಿಗೆ ಸಸ್ಯಗಳ ಬೆಳವಣಿಗೆ, ಇಳುವರಿ, ಗುಣಮಟ್ಟ, ಪೌಷ್ಟಿಕಾಂಶದ ಮೌಲ್ಯ ಮತ್ತು ಕೀಟಗಳು, ಕಾಯಿಲೆಗಳು ಮತ್ತು ಪರಿಸರ ಒತ್ತಡಗಳಿಗೆ ಪ್ರತಿರೋಧವನ್ನು ಹೆಚ್ಚಿಸುವ ಗುರಿಯೊಂದಿಗೆ ಸಸ್ಯ ವರ್ಗಾವಣೆ ಮತ್ತು ಸಾಗುವಳಿಯೂ ತೋಟಗಾರಿಕೆ ಕೃಷಿಯೇ ಆಗಿದೆ. ತೋಟಗಾರಿಕೆ ಅಥವಾ ತೋಟದಲ್ಲಿ ಸಸ್ಯಗಳನ್ನು ಬೆಳೆಯುವುದು, ಮತ್ತು ತೋಟಗಾರಿಕೆ ಕೃಷಿಗೆ ತೋಟಗಾರರು, ಬೆಳೆಗಾರರು, ಚಿಕಿತ್ಸಕರು, ವಿನ್ಯಾಸಕಾರರು ಮತ್ತು ತಾಂತ್ರಿಕ ಸಲಹಕಾರರಾಗಿ ಕಾರ್ಯ ನಿರ್ವಹಿಸುತ್ತಾರೋ ಅವರೆಲ್ಲರೂ ಸಹ ತೋಟಗಾರಿಕೆ ಕ್ಷೇತ್ರಗಳಿಗೆ ಸಂಬಂಧಿಸಿದವರೇ ಆಗಿದ್ದಾರೆ.

ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಮುಖ್ಯ ಮಾರುಕಟ್ಟೆಯಾಗಿ ನಿರ್ಧರಿಸಲು ಅದರಲ್ಲಿ ವ್ಯವಹರಿಸುವ ಉತ್ಪನ್ನಗಳ ಮೌಲ್ಯ, ಆವಕದ ಪ್ರಮಾಣ ಮತ್ತು ಪಾವತಿಸಿದ ಸುಂಕಗಳನ್ನು ಆಧಾರವೆಂದು ಪರಿಗಣಿಸಲಾಗುತ್ತದೆ.[6] ಈ ಮುಖ್ಯ ಮಾರುಕಟ್ಟೆಯು ಕ್ಷೇತ್ರದಲ್ಲಿ ಬರುವ ಇತರೆ ಮಾರುಕಟ್ಟೆಗಳನ್ನು ಉಪಮಾರುಕಟ್ಟೆಗಳು ಹಾಗೂ ಗ್ರಾಮೀಣ ಮಾರುಕಟ್ಟೆಗಳೆಂದು ವಿಂಗಡಣೆ ಮಾಡಲಾಗುತ್ತದೆ. ರೈತನ ಮತ್ತು ಅಂತಿಮ ಅನುಭೋಗಿಯ ನಡುವೆ ನಡೆಯುವ ಮಾರಾಟಕ್ಕೆ ಅನುಗುಣವಾಗಿ ಎಲ್ಲ ಮಾರುಕಟ್ಟೆಗಳನ್ನು ಸ್ಥಳೀಯವಾಗಿ ಒಟ್ಟುಗೂಡಿಸುವ ಮತ್ತು ಸಂಸ್ಕರಿಸುವ ಮಾರುಕಟ್ಟೆ, ಜಿಲ್ಲಾ ಕೇಂದ್ರೀಕೃತ ಮತ್ತು ಸಂಸ್ಕರಣಾ ಮಾರುಕಟ್ಟೆ, ಕೇಂದ್ರೀಯ ಮಾರುಕಟ್ಟೆಗಳು, ಸಮುದ್ರ ತೀರದ ಮಾರುಕಟ್ಟೆಗಳು ಹಾಗೂ ಸಗಟು ವಿತರಣಾ ಮಾರುಕಟ್ಟೆಗಳೆಂದು ವಿಂಗಡಣೆ ಮಾಡಬಹುದು. ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ ಎಂಬ ಗ್ರಂಥದಲ್ಲಿ ಎಚ್. ನಾಗರಾಜ್ ಶೆಟ್ಟಿಯವರು, ಒಟ್ಟು ಆವಕ ಪ್ರಾಂಗಣಗಳ ಸಂಖ್ಯೆ, ಕ್ಷೇತ್ರದಲ್ಲಿರುವ ಗ್ರಾಮೀಣ ಸಂತೆಗಳ ಸಂಖ್ಯೆ ಮಾರುಕಟ್ಟೆಯಲ್ಲಿನ ಪೇಟೆ ಕಾರ್ಯಕರ್ತರ ಸಂಖ್ಯೆ, ಆವಕದ ಪ್ರಮಾಣ ಮತ್ತು ಆವಕವಾಗುತ್ತಿರುವ ಉತ್ಪನ್ನದ ಮೌಲ್ಯಗಳಿಗೆ ಸೂಚ್ಯಂಕ ಕೊಟ್ಟು ಎ.ಬಿ.ಸಿ.ಡಿ.ಈ.ಎಫ್.ಜಿ ಮತ್ತು ಎಚ್. ಎಂಬ ಎಂಟು ವರ್ಗಗಳಾಗಿ ಪೇಟೆಗಳನ್ನು ವಿಂಗಡಣೆ ಮಾಡಿದ್ದಾರೆ.

## ಸಮಷ್ಟೀಕರಣ

ಹಿಂದು ಪತ್ರಿಕೆಯಲ್ಲಿ 2010ರಲ್ಲಿ 'ಸಾರಾ ಹ್ಯೂಮನ್ ಇನ್‌ಕಮ್–ಜನರೇಟಿಂಗ್ ಪ್ರೋಜೆಕ್ಟ್ಸ್ ಇನ್ ರೂರಲ್ ಕಮ್ಯುನಿಟಿಸ್ ಥಿಯರಿ ಟು ಪ್ರಾಕ್ಟೀಸ್' ಎನ್ನುವ ಅಧ್ಯಯನದಲ್ಲಿ ಹೇಳುವಂತೆ ಜಾಗತೀಕರಣ ಪ್ರಭಾವದಿಂದಾಗಿ ಬೇರೆ ದೇಶಗಳ ಸರಕುಗಳ ಇಂದು ಗ್ರಾಮೀಣ ಮಾರುಕಟ್ಟೆಯನ್ನು

ಪ್ರವೇಶಿಸಿದೆ.[7] ಇಂದು ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಭಾರತದ ಈ ಗ್ರಾಮೀಣ ಮಾರುಕಟ್ಟೆಯು ಉತ್ತಮ ಅವಕಾಶಗಳನ್ನು ಒದಗಿಸುತ್ತದೆ ಎಂಬ ಸಂಗತಿಯನ್ನು ಗುರುತಿಸಿವೆ. ಹಿಂದೂ ಪತ್ರಿಕೆಯ ಬರಹಗಾರರಾದ ಶಾಂತಿ ಕನ್ನನ್ ಅವರ ಪ್ರಕಾರ ಗ್ರಾಮೀಣ ಮಾರುಕಟ್ಟೆಯು ನಗರದ ಮಾರುಕಟ್ಟೆಗಿಂತ ದುಪ್ಪಟ್ಟು ಅವಕಾಶಗಳನ್ನು ಒದಗಿಸುತ್ತದೆಂಬುದಾಗಿಯೂ ಮತ್ತು ಬಹುರಾಷ್ಟ್ರೀಯ ಕಂಪನಿಗಳು ಇಂತಲ್ಲಿ ಜಾಣತನದಿಂದ ತಮ್ಮ ಯಶಸ್ಸು ಮತ್ತು ವೈಫಲ್ಯಗಳೆರಡರಿಂದಲೂ ಪಾಠ ಕಲಿಯಬೇಕಾದ ಅಂಶವನ್ನು ವಿವರಿಸುತ್ತಾರೆ.

ಮೇಲಿನ ಅಧ್ಯಯನದಲ್ಲಿನ ಅಂಶಗಳನ್ನು ಅಧ್ಯಯನದ ಸಮಸ್ಯೀಕರಣಕ್ಕೆ ಅಳವಡಿಸಿಕೊಳ್ಳ ಬಹುದಾಗಿದೆ. ಮೇಲೆಯೇ ವಿವರಿಸಿದಂತೆ ಜಾಗತೀಕರಣವು ಗ್ರಾಮೀಣ ಮಾರುಕಟ್ಟೆಯನ್ನು ಹೇಗೆ ಪ್ರಭಾವಿಸಿದೆ ಎಂಬ ಪ್ರಶ್ನೆಯನ್ನು ಕೇಳಿಕೊಳ್ಳುವುದರೊಂದಿಗೆ ಇನ್ನೂ ಹಲವು ತಾತ್ವಿಕ ಅಂಶಗಳನ್ನು ವಿಶ್ಲೇಷಿಸಬಹುದಾಗಿದೆ. ವಿಶ್ವ ವಾಣಿಜ್ಯ ಒಪ್ಪಂದದ ಫಲವಾಗಿ ಮಾರುಕಟ್ಟೆಗೆ ಲಗ್ಗೆಯಿಟ್ಟ ಸರಕುಗಳನ್ನು ಕೊಳ್ಳುವ ಸಾಮರ್ಥ್ಯವಿರುವವರು ಯಾರು? ಕೊಳ್ಳಲು ಸಾಧ್ಯವಾಗದ ವರ್ಗ ಯಾವುದು ಮತ್ತೆ ಏಕೆ ಕೊಳ್ಳಲು ಸಾಧ್ಯವಾಗುತ್ತಿಲ್ಲ? ಜನರ ಈ ಕೊಳ್ಳುವ ಅಥವಾ ಕೊಳ್ಳದಿರುವ ಸಾಮರ್ಥ್ಯಕ್ಕೆ ವರ್ಗ, ಜಾತಿ, ಸಾಮಾಜಿಕ ಶ್ರೇಣಿಗಳೇನಾದರೂ ಕಾರಣವೇ ಎನ್ನುವ ವಿಶ್ಲೇಷಣೆಯೊಂದಿಗೆ ವ್ಯವಸ್ಥೆಯ ಸ್ವರೂಪವೇ ಬಟ್ಟಬಯಲಾಗುತ್ತದೆ. ಗ್ರಾಮೀಣ ಮಾರುಕಟ್ಟೆಗೆ ಪ್ರಧಾನ ಆಕರವಾದ ಕೃಷಿ ಹುಟ್ಟುವಳಿಗೆ ಸಂಬಂಧಿಸಿದಂತೆ ಬೆಂಬಲ ಬೆಲೆಯಂತಹ ಸಂಗತಿಗಳಿಗೆ ಸ್ವಲ್ಪಮಟ್ಟಿಗೆ ರೈತಾಪಿವರ್ಗವು ಸಂಘಟಿತವಾಗಿ ಹೋರಾಟವನ್ನು ಸಹ ನಡೆಸಬಹುದು. ಆದರೆ ಆ ಕೃಷಿ ಹುಟ್ಟುವಳಿಗೆ ಮೂಲಭೂತವಾಗಿ ಶ್ರಮವನ್ನು ಧಾರೆ ಎರೆದ ಶ್ರಮಿಕ ವರ್ಗಕ್ಕೆ ನ್ಯಾಯವಾದ ಕೂಲಿ ಸಿಗುತ್ತದೆಯೇ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕಾಗುತ್ತದೆ. ಈ ಶ್ರಮಿಕ ವರ್ಗದ ಮೇಲ್‌ಸ್ತರದಲ್ಲಿರುವ ರೈತರೇ ತಾವು ಬೆಳೆದ ಬೆಳೆಯನ್ನು ರಸ್ತೆಗೆ ಚೆಲ್ಲಿ ಪ್ರತಿಭಟಿಸುವ ಹೀನಾಯ ಸ್ಥಿತಿಯಲ್ಲಿರಬೇಕಾದರೆ ಇನ್ನು ಕೂಲಿಕಾರಿ ವರ್ಗದ ಸ್ಥಿತಿ ಹೇಗಿರಬಹುದು ಎಂಬುದು ಊಹೆಗೆ ಬಿಟ್ಟ ಸಂಗತಿ. ಒಟ್ಟಾರೆ ಗ್ರಾಮೀಣ ಮಾರುಕಟ್ಟೆಯು ಪಿರಮಿಡ್ಡಿನ ರಚನೆಯಲ್ಲಿ ಬುನಾದಿಯ ಹಂತದಲ್ಲಿದ್ದು ಅತ್ಯಂತ ಮೇಲಸ್ತರದಲ್ಲಿ ವಿಶ್ವಮಾರುಕಟ್ಟೆಯ ವಿಸ್ತೃತ ಜಾಲವು ಹರಡಿಕೊಂಡಿದೆ. ಇಂತಹ ಕೆಳ ಹಂತದ ಗ್ರಾಮೀಣ ಮಾರುಕಟ್ಟೆಯ ತಾತ್ವಿಕತೆಯನ್ನು ಮತ್ತು ಅದರ ವಾಸ್ತವಾಂಶಗಳನ್ನು ಅಧ್ಯಯನ ಮಾಡುವುದರ ಮೂಲಕ ಒಟ್ಟಾರೆ ಮಾರುಕಟ್ಟೆಯ ಸಿದ್ಧಾಂತದ ಕುರಿತಾಗಿ ಪ್ರಸ್ತುತ ಚಾಲ್ತಿಯಲ್ಲಿರುವ ಸಿದ್ಧಾಂತಗಳ ಕುರಿತಾಗಿ ಪುನರಾಲೋಚಿಸಲು ಸಾಧ್ಯವಾಗುತ್ತದೆ. ಅಧ್ಯಯನಕ್ಕೆ ಸಂಬಂಧಿಸಿದ ಈಗಾಗಲೇ ಆದ ಅಧ್ಯಯನಗಳ ವಿಮರ್ಶೆಯೂ ಈ ಕೆಳಗಿನಂತಿದೆ:

ಮೆಸೇಜ್ ಆಫ್ ದಿ ಮಾರ್ಕೆಟ್, ರಾನ್ ಇನ್‌ಸಾನ್(2000) ಅಧ್ಯಯನದಲ್ಲಿ ಗ್ರಾಮೀಣ ಮಾರುಕಟ್ಟೆಯು ಕೇವಲ ಉತ್ಪಾದನೆ ಮಾರುಕಟ್ಟೆ ಮಾತ್ರವಲ್ಲ, ಅದು ಹಿಂದಿಗಿಂತಲೂ ಸ್ವರೂಪದಲ್ಲಿ ಈಗ ತುಂಬಾ ಬದಲಾಗಿದೆಯೆಂಬುದನ್ನು ಸ್ಪಷ್ಟಪಡಿಸಲಾಗಿದೆ.[8] ಜನರ ಆದಾಯವೂ ಹೆಚ್ಚುತ್ತಿರುವುದರಿಂದ ಅವರ ಕೊಳ್ಳುವ ಸಾಮರ್ಥ್ಯವೂ ಹೆಚ್ಚಾಗುತ್ತಿದೆ. ಹೀಗಾಗಿ ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸಲು ಕಂಪನಿಗಳು ವಿಶೇಷ ಯೋಜನೆಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಯಾಕೆಂದರೆ ರೈತರು ಮುಂದುವರಿದ ತಂತ್ರಜ್ಞಾನವನ್ನು ಬಳಸಿಕೊಂಡು ಹಿಂದಿಗಿಂತಲೂ ಹೆಚ್ಚಿನ ಆದಾಯವನ್ನು ಗಳಿಸುತ್ತಾರೆ. ಆದ್ದರಿಂದ ಅವರ ಬೇಡಿಕೆಗಳು ಹೆಚ್ಚಾಗುತ್ತಿದೆ. ಇಂತಹ ಸಂದರ್ಭದಲ್ಲಿ ಈ ಬಗೆಯ ಮಾರುಕಟ್ಟೆಗಳೊಂದಿಗೆ ಉತ್ತಮ ಸಂಪರ್ಕ ಜಾಲವನ್ನು ಉತ್ತಮಪಡಿಸಿಕೊಳ್ಳುವ ಅಗತ್ಯವನ್ನು ಒತ್ತಿ ಹೇಳಲಾಗಿದೆ.

ಇನ್ನೋವೇಶನ್ ಇನ್ ರೂರಲ್ ಮಾರ್ಕೆಟಿಂಗ್ ಪಂಕಜ್ ಅರೋರ(2005) ಅಧ್ಯಯನವು ದೇಶದ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಕುರಿತು ಚರ್ಚಿಸುತ್ತದೆ. ಜಾಗತೀಕರಣದ ಪ್ರಭಾವದಿಂದಾಗಿ ಗ್ರಾಮೀಣ ಮಾರುಕಟ್ಟೆಯ ಮೇಲೆ ಪರಿಣಾಮ ಬೀರುತ್ತಿದೆ.[9] ಈಗ ಗ್ರಾಮೀಣ ಮಾರುಕಟ್ಟೆಯ ಕುರಿತಾಗಿ ಇರುವ ಸಿದ್ಧಾಂತಗಳು ಹಳೆಯ ಮಾದರಿ ಮತ್ತು ಪರಿಕಲ್ಪನೆಗಳನ್ನು ಹೊಂದಿದ್ದು ಹೊಸ ಸಂದರ್ಭಕ್ಕೆ ಅಗತ್ಯ ಒಳನೋಟಗಳನ್ನು ನೀಡುತ್ತಿಲ್ಲ. ಹಾಗಾಗಿ ಗ್ರಾಮೀಣ ಮಾರುಕಟ್ಟೆಗೆ ಸಂಬಂಧಿಸಿದಂತೆ ಆಧುನಿಕ ತಂತ್ರಜ್ಞಾನವನ್ನು ಪರಿಣಾಮಕಾರಿಯಾಗಿ ಅಳವಡಿಸುವ ಅಗತ್ಯತೆಯನ್ನು ಪಂಕಜ್ ಅರೋರ ಅವರು ವಿವರಿಸುತ್ತಾರೆ. ಗ್ರಾಮೀಣ ಸರಕುಗಳಿಗೆ ವಿಸ್ತೃತ ಮಾರುಕಟ್ಟೆಯನ್ನು ಸೃಷ್ಟಿಸುವ ಅಗತ್ಯದ ಕುರಿತು ಪ್ರಸ್ತಾಪಿಸುತ್ತಾರೆ. ಇದಕ್ಕೆ ಮಾಹಿತಿ ತಂತ್ರಜ್ಞಾನವನ್ನು ಸಹ ಬಳಸಿಕೊಳ್ಳಬಹುದಾಗಿದೆಯೆಂಬುದನ್ನು ಅಧ್ಯಯನದಲ್ಲಿ ವಿವರಿಸಿದ್ದಾರೆ. ಅಧ್ಯಯನದಲ್ಲಿ, ಕೇವಲ ಗ್ರಾಮೀಣ ಮಾರುಕಟ್ಟೆಯಲ್ಲಿ ಸರಕುಗಳನ್ನು ಮಾರಲು ವಿಸ್ತೃತ ಮಾರುಕಟ್ಟೆಯನ್ನು ಸೃಷ್ಟಿಸುವ ಅಗತ್ಯತೆಯನ್ನು ಉಲ್ಲೇಖಿಸುತ್ತಾರೆಯೇ ಹೊರತು, ಪ್ರಸ್ತುತ ಗ್ರಾಮೀಣ ಭಾಗದಲ್ಲಿ ರೈತರು ಎದುರಿಸುತ್ತಿರುವ ಸವಾಲುಗಳನ್ನು ಚರ್ಚಿಸಿರುವುದಿಲ್ಲ.

ಸ್ಟ್ರಕ್ಚರ್ ಆಫ್ ರೂರಲ್ ಮಾರ್ಕೆಟ್ಸ್ ಫಾರ್ ಅಚೀವಿಂಗ್ ವರ್ಟಿಕಲ್ ಕೋಆರ್ಡೀಶನ್ ಇನ್ ದಿ ಇಂಡಿಯನ್ ಫುಡ್ ಚೈನ್, ಸಡ್‌ಪ್ಯನ್ ರೈ(2000) ಮೇಲಿನ ಅಧ್ಯಯನದಲ್ಲಿ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ವಿಶ್ಲೇಷಿಸಿದರೆ, ಈ ಅಧ್ಯಯನದಲ್ಲಿ ಭಾರತೀಯ ಆಹಾರ ಮಾರುಕಟ್ಟೆಯು ಅತ್ಯಂತ ವಿಶಾಲವಾಗಿದೆ. ಅದರಲ್ಲಿ ಕೊಳ್ಳುವವರು ಮತ್ತು ಮಾರುವವರಿಗೂ ಮಧ್ಯ ಮಧ್ಯವರ್ತಿಗಳ ದೊಡ್ಡ ಹಿಂಡೇ ಕಾರ್ಯ ನಿರ್ವಹಿಸುತ್ತಿರುತ್ತದೆ.[10] ಕೃಷಿ ಹಿಡುವಳಿಯಲ್ಲಿ ಈ ಮಧ್ಯವರ್ತಿಗಳ ಪಾತ್ರ ಅಧಿಕವಾಗಿರುವುದರಿಂದ ಆಹಾರ ಉತ್ಪಾದನೆಯ

ಗುಣಮಟ್ಟಕ್ಕಿಂತಲೂ ಆಹಾರ ಸರಕುಗಳ ಬೆಲೆ ಹೆಚ್ಚಳಕ್ಕೆ ಕಾರಣವಾಗಿರುವ ಅಂಶವನ್ನು ವಿಶ್ಲೇಷಿಸುತ್ತಾರೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಯುನೈಟೆಡ್ ಕಿಂಗ್‌ಡಮ್, ಅಮೆರಿಕ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಾದ ಥೈಲ್ಯಾಂಡ್ ಇಂಡೋನೇಶ್ಯಾದಂತಹ ರಾಷ್ಟ್ರಗಳು ಆಹಾರ ಉತ್ಪಾದನೆಯ ಅಭಿವೃದ್ಧಿಯಲ್ಲಿ ಬೀಜ ಕಂಪನಿಗಳು ಬಂಡವಾಳ ಹೂಡುವುದರ ಮೂಲಕ ಮಹತ್ವದ ಪಾತ್ರವನ್ನು ವಹಿಸುತ್ತಿವೆ. ಈ ಅಧ್ಯಯನದಲ್ಲಿ ವಿವಿಧ ದೇಶಗಳಲ್ಲಿ ಹೇಗೆ ರೈತರು ದೊಡ್ಡ ಕಂಪನಿಗಳ ಬಂಡವಾಳ ವಾಗಿದ್ದಾರೆ ಎನ್ನುವುದನ್ನು ಎತ್ತಿ ಹಿಡಿದಂತಿದೆ. ಈ ಅಧ್ಯಯನದಲ್ಲಿ ಎಲ್ಲಿಯೂ ರೈತರ ಕಂಪನಿಗಳ ಬೀಜ ಗೊಬ್ಬರಗಳನ್ನು ಕೊಳ್ಳಲು ಪಡುತ್ತಿರುವ ಕಷ್ಟವನ್ನು ಮತ್ತು ಉತ್ಪಾದನೆಯಾದ ಉತ್ಪನ್ನಗಳ ಮಾರಾಟವನ್ನು ಚರ್ಚಿಸಿಲ್ಲ. ಈ ಅಂಶವೂ ಅಧ್ಯಯನಕ್ಕೆ ಸಮಸ್ಯೆಯನ್ನು ಸೃಷ್ಟಿಸುತ್ತದೆ.

ಮಾರ್ಕೆಟ್-ಡ್ರೈವೆನ್ ಇನ್ನೋವೇಶನ್ ಫಾರ್ ರೂರಲ್ ಪೆನಟ್ರೇಶನ್: ಸೂಭೂ ಚಟ್ಟೋಪಾಧ್ಯಾಯ ಮತ್ತು ಎ.ಕೆ. ಸರ್ಕಾರ್-(2011) ಮೇಲಿನ ಅಧ್ಯಯನದಲ್ಲಿ, ಭಾರತದಲ್ಲಿ ಮಾರುಕಟ್ಟೆ, ಬೀಜಗಳ ಕಂಪನಿ, ಮಧ್ಯವರ್ತಿಗಳ ಕುರಿತು ಚರ್ಚಿಸಲಾಗಿದೆ. ಈ ಅಧ್ಯಯನವು ಗ್ರಾಮೀಣ ಮಾರುಕಟ್ಟೆಯ ಕೆಳ ಸ್ತರದಿಂದ ಹೇಗೆ ಹೊಸ ಅನ್ವೇಷಣೆಗಳಿಂದ ಪ್ರವೇಶಿಸಿ ಅದನ್ನು ಸಕ್ರಿಯವಾಗಿಸಬಹುದೆಂಬುದನ್ನು ಅರ್ಥಪೂರ್ಣವಾಗಿ ವಿವರಿಸುತ್ತದೆ. ಹೀಗೆ ನೂತನ ವಿಧಾನಗಳಿಂದ ಗ್ರಾಮೀಣ ಮಾರುಕಟ್ಟೆಯಲ್ಲಿ ಹೊಸ ಬಗೆಯ ಸಂಚಲನವನ್ನು ಸೃಷ್ಟಿಸಬಹುದಲ್ಲದೆ ಆಧುನಿಕ ಕಂಪೆನಿಗಳ ವಿಸ್ತರಣೆಗೂ ಅನುಕೂಲವಾಗುತ್ತದೆ[11] ಎಂಬುದನ್ನು ವಿವರಿಸಿದ್ದಾರೆ. ನಗರೀಕೃತ ವ್ಯವಸ್ಥೆಯಲ್ಲಿ ಬಳಕೆದಾರರು ಆಧುನಿಕ ತಂತ್ರಜ್ಞಾನದಿಂದ ಆವಿಷ್ಕರಣೆಗೊಂಡ ಅಥವಾ ಪರಿಷ್ಕೃತಗೊಂಡ ಉತ್ತಮ ಗುಣಮಟ್ಟದ ಸರಕು ಮತ್ತು ಸೇವೆಗಳನ್ನು ಕೊಳ್ಳುವ ಸುಧಾರಿತ ವ್ಯವಸ್ಥೆ ಇರುತ್ತದೆ. ಈ ಬಗೆಯಲ್ಲಿ ಗ್ರಾಮೀಣ ಮಾರುಕಟ್ಟೆಯನ್ನು ಉನ್ನತೀಕರಿಸುವುದರಿಂದ ಅದರ ವ್ಯಾಪ್ತಿಯನ್ನು ಹಿಗ್ಗಿಸಬಹುದೆಂಬುದಾಗಿ ಲೇಖಕರು ಅಭಿಪ್ರಾಯ ಪಡುತ್ತಾರೆ.

ರೂರಲ್ ಮಾರ್ಕೆಟಿಂಗ್ ರಿಸರ್ಚ್, ಪಾನ್‌ರ್ ಕೆ.ಬಿ.(2002) ನಗರೀಕೃತ ಮಾರುಕಟ್ಟೆಯ ಗ್ರಾಹಕರಿಗೂ ಮತ್ತು ಗ್ರಾಮೀಣ ಮಾರುಕಟ್ಟೆಯ ಗ್ರಾಹಕರಿಗೂ ಇರುವ ಮನಸ್ಥಿತಿಗಳನ್ನು ಅರ್ಥೈಸಿದಾಗ ಮಾತ್ರ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಅರ್ಥೈಸಲು ಸಾಧ್ಯವಾಗುತ್ತ ಧೆಂಬುದನ್ನು ಈ ಅಧ್ಯಯನದಲ್ಲಿ ವಿವರಿಸುತ್ತಾರೆ.[12] ಗ್ರಾಮೀಣ ಮಾರುಕಟ್ಟೆಯನ್ನು ಅವಲಂಬಿಸಿರುವ ಗ್ರಾಹಕವರ್ಗವು ಅವರ ವೃತ್ತಿ ಆದಾಯ ಮತ್ತು ಆದಾಯದ ಹರಿವು ಮತ್ತು ಹೆಚ್ಚಿನ ಮಟ್ಟದ

ಆಂತರಿಕ ಅವಲಂಬನೆಯ ಮೇಲೆ ಅವರ ಮನಸ್ಥಿತಿಯು ಆಧಾರವಾಗಿರುತ್ತದೆ. ಗ್ರಾಮೀಣ ಗ್ರಾಹಕರ ವರ್ತನೆಗಳು ನಗರದ ಗ್ರಾಹಕರಿಗಿಂತಲೂ ಭಿನ್ನವಾಗಿರುತ್ತದೆಯೆಂಬುದನ್ನು ಅಧ್ಯಯನವು ವಿಶ್ಲೇಷಿಸುತ್ತದೆ. ಹಾಗಾಗಿ ಗ್ರಾಮೀಣ ಮಾರುಕಟ್ಟೆಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವ ಅಗತ್ಯವನ್ನು ವಿವರಿಸುತ್ತದೆ.

ಸ್ಟ್ರಾಟಜಿಸ್ ಫಾರ್ ರೂರಲ್ ಮಾರ್ಕೆಟಿಂಗ್ ಬೈ ಯಾನ್ ಅರ್ಗನೈಜೇಶನ್ ರಿಪೋರ್ಟ್: (2008) ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸಲು ಅಗತ್ಯವಾದ ಪೂರ್ವಭಾವಿ ಸಿದ್ಧತೆಗಳನ್ನು ಹಾಗೂ ಯೋಜನೆಗಳ ಅಗತ್ಯವಿರುವುದನ್ನು ವ್ಯಾಪಾರಿ ಕಂಪನಿಗಳು ಕಂಡುಕೊಂಡಿವೆಯೆಂಬ ಅಂಶವನ್ನು ಈ ವರದಿಯ ಸ್ಪಷ್ಟಪಡಿಸುತ್ತದೆ.[13] ಯಾಕೆಂದರೆ ಗ್ರಾಮೀಣ ಪ್ರದೇಶದಲ್ಲಿ ತಲಾವರಮಾನದಲ್ಲಿ ಹೆಚ್ಚಳ ಕಂಡುಬರುತ್ತಿದ್ದು ಗ್ರಾಹಕರ ಕೊಳ್ಳುವ ಸಾಮರ್ಥ್ಯವೂ ಕೂಡ ಹೆಚ್ಚಿದೆಯೆಂಬ ಅಂಶವನ್ನು ಪರಿಗಣಿಸಿ ಮಾರುಕಟ್ಟೆಯನ್ನು ವಿಸ್ತರಿಸಲು ಅಗತ್ಯ ಅಧ್ಯಯನ ಅವಶ್ಯಕತೆಯನ್ನು ಮನಗಂಡಿವೆ ಎಂಬ ಸಂಗತಿಯನ್ನು ಪ್ರಸ್ತುತ ವರದಿಯು ವಿವರಿಸುತ್ತದೆ.

ಟಾಪಿಂಗ್ ಇಂಡಿಯನ್ ರೂರಲ್ ಮಾರ್ಕೆಟ್, ಸಾರ್ ಹ್ಯೂಮನ್(2012) ಜಾಗತೀಕರಣದ ಪ್ರಭಾವದಿಂದಾಗಿ ಬೇರೆ ದೇಶಗಳ ಸರಕುಗಳು ಇಂದು ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸಿವೆ. ಇಂದು ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಭಾರತದ ಈ ಗ್ರಾಮೀಣ ಮಾರುಕಟ್ಟೆಯು ಉತ್ತಮ ಅವಕಾಶಗಳನ್ನು ಒದಗಿಸುತ್ತವೆ ಎಂಬ ಸಂಗತಿಯನ್ನು ಗುರುತಿಸಿವೆ.[14] ಹಿಂದೂ ಪತ್ರಿಕೆಯ ಬರಹಗಾರರಾದ ಶಾಂತಿ ಕನ್ನನ್ ಅವರ ಪ್ರಕಾರ ಗ್ರಾಮೀಣ ಮಾರುಕಟ್ಟೆಯು ನಗರದ ಮಾರುಕಟ್ಟೆಗಿಂತ ದುಪ್ಪಟ್ಟು ಅವಕಾಶಗಳನ್ನು ಒದಗಿಸುತ್ತದೆಂಬುದಾಗಿ ಮತ್ತು ಬಹುರಾಷ್ಟ್ರೀಯ ಕಂಪೆನಿಗಳು ಇಂತಲ್ಲಿ ಜಾಣತನದಿಂದ ತಮ್ಮ ಯಶಸ್ಸು ಮತ್ತು ವೈಫಲ್ಯಗಳೆರಡರಿಂದಲೂ ಪಾಠ ಕಲಿಯಬೇಕಾದ ಅಂಶವನ್ನು ವಿವರಿಸುತ್ತಾರೆ.

ರೂರಲ್ ಮಾರ್ಕೆಟಿಂಗ್, ಅರ್.ವಿ.ಬೆಡಿ ಮತ್ತು ಎನ್.ವಿ.ಬೇಡಿ(1980) ಅಧ್ಯಯನದಲ್ಲಿ, ಗ್ರಾಮೀಣ ಮಾರುಕಟ್ಟೆಯ ಕುರಿತು ವಿಶ್ಲೇಷಿಸುತ್ತಾ, ಭಾರತದಲ್ಲಿ ಗ್ರಾಮೀಣ ಮಾರುಕಟ್ಟೆಯೇ ಶೇಕಡ 60ರಷ್ಟು ಇದ್ದು, ವಿಶ್ವದ ಮಾರುಕಟ್ಟೆಯಲ್ಲೇ ಭಾರತದ ಮಾರುಕಟ್ಟೆಯೂ ಬಹು ಮುಖ್ಯ ಪಾತ್ರ ವಹಿಸುತ್ತಿದೆ ಎಂದು ತಿಳಿಸಿದ್ದಾರೆ. ಅಲ್ಲದೆ ಪ್ರಸ್ತುತ ಲೇಖನದಲ್ಲಿ ಲೇಖಕರು ಗ್ರಾಮೀಣ ಮಾರುಕಟ್ಟೆಯು ಏಕೆ ಮತ್ತು ಹೇಗೆ ಭಾರತದಲ್ಲಿ ಪ್ರಮುಖವಾಗಿದೆ ಎನ್ನುವ ಪರಿಕಲ್ಪನೆಯನ್ನು ನೀಡುತ್ತಾರೆ.[15] ಗ್ರಾಮೀಣ ಮಾರುಕಟ್ಟೆಯ ಸಿದ್ಧಾಂತಗಳಾದ ರೈತರು ಬೆಳೆದ

ಬೆಳೆಗಳನ್ನು ಹೇಗೆ ಮಾರಾಟ ಮಾಡುತ್ತಾರೆ ಹಾಗೂ ರೈತರು ಕೃಷಿಗೆ ಬೇಕಾದ ಪರಿಕರಗಳನ್ನು ಹೇಗೆ ಖರೀದಿಸುತ್ತಾರೆ, ರೈತರಿಗೆ ಅವಶ್ಯವಿರುವ ಕೃಷಿಯ ಹಣಕಾಸಿನ ಮೂಲಗಳೇನು, ಮಾರುಕಟ್ಟೆಗೆ ಬರಲು ಇರುವ ಸಾರಿಗೆ(ರಸ್ತೆಗಳ) ವ್ಯವಸ್ಥೆ, ವಿಯರ್ ಹೌಸ್‌ಗಳ ಅನುಕೂಲ, ಸ್ಟೋರೇಜ್ ರೂಮ್ಸ್, ಶೀತಲೀಕರಣ ಘಟಕಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಲೇಖಕರು ವಿಶ್ಲೇಷಿಸಿದ್ದಾರೆ.

ಈ ಅಧ್ಯಯನದಲ್ಲಿ ಹಸಿರುಕ್ರಾಂತಿಯ ಕುರಿತು, ಹಸಿರುಕ್ರಾಂತಿಯಾದ ನಂತರ ಗ್ರಾಮಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತಕ್ಕ ಮಟ್ಟಿಗೆ ಅಭಿವೃದ್ಧಿಯಾಗುತ್ತಿದ್ದಾರೆ. ಯಾಕೆಂದರೆ ರೈತರಿಗೆ ಮಾರುಕಟ್ಟೆಯ ಮಾಹಿತಿಗಳು ದೊರೆಯುತ್ತಿವೆ. ಇತ್ತಿಚೆಗೆ ರೈತರು ಕೃಷಿಗಾಗಿ ಗೊಬ್ಬರಗಳು, ನೀರಾವರಿ ಸೌಲಭ್ಯ, ಕ್ರಿಮಿನಾಶಕಗಳು, ಸುಧಾರಿತ ಬೀಜಗಳು, ಆಧುನಿಕ ಬೇಸಾಯದ ಉಪಕರಣಗಳು ಇವುಗಳೆಲ್ಲವುಗಳ ಮೊರೆ ಹೊಗುತ್ತಿದ್ದಾರೆ. ಆದ್ದರಿಂದ ರೈತರ ಕೃಷಿ ಸಲಕರಣೆಗಳ ಬೇಡಿಕೆಗಳು ಹೆಚ್ಚಾಗಿವೆ. ಈ ಕಾರಣದಿಂದ ಗ್ರಾಮೀಣ ಮಾರುಕಟ್ಟೆಯು ಹೆಚ್ಚು ಸ್ಥಿರವಾಗಿಲ್ಲ ಎಂದು ಗ್ರಾಮೀಣ ಮಾರುಕಟ್ಟೆಯ ಏರಿಳಿತಗಳ ವಿಚಾರವನ್ನು ಈ ಅಧ್ಯಯನದಲ್ಲಿ ಪ್ರಸ್ತಾಪಿಸಿದ್ದಾರೆ. ಒಟ್ಟಾರೆ ಹೇಳುವುದಾದರೆ ಈ ಕೃತಿಯಲ್ಲಿ ಲೇಖಕರು ಗ್ರಾಮೀಣ ಮಾರುಕಟ್ಟೆಯ ರಚನೆ ಮತ್ತು ಹೇಗೆ ನಾವು ಹಳ್ಳಿಗಳ ಮಾರುಕಟ್ಟೆಯ ಗುಣಮಟ್ಟವನ್ನು ಹೆಚ್ಚಿಸಬಹುದೆಂಬುದನ್ನು ವಿಶ್ಲೇಷಿಸಲಾಗಿದೆ. ಪ್ರಸ್ತುತ ಕೃತಿಯಲ್ಲಿ ಲೇಖಕರು ಕೇವಲ ಭಾರತದಲ್ಲಿ ಗ್ರಾಮೀಣ ಮಾರುಕಟ್ಟೆಯ ಪ್ರಾಮುಖ್ಯತೆ ವಿವರಿಸಿದ್ದಾರೆಯೇ ಹೊರತು ಗ್ರಾಮೀಣ ಮಾರುಕಟ್ಟೆಯಲ್ಲಿ ರೈತರು ಎದುರಿಸುತ್ತಿರುವ ಸಮಸ್ಯೆಗಳನ್ನು ಎಲ್ಲಿಯೂ ಚರ್ಚಿಸಿಲ್ಲ.

ಸೋಶಿಯಲ್ ಮಾರ್ಕೆಟಿಂಗ್ ಸ್ಟ್ರಾಟಜಿಸ್ ಫಾರ್ ಚೇಂಜಿಂಗ್ ಪಬ್ಲಿಕ್ ಬಿಹೇವಿಯರ್ (2009) ಅಧ್ಯಯನದಲ್ಲಿ ಕೇಂದ್ರ ಸರ್ಕಾರವು ಗ್ರಾಮೀಣ ಯೋಜನೆಗಳ ಮೂಲಕ ಆ ಪ್ರದೇಶಗಳಿಗೆ ಹೆಚ್ಚಿನ ನೆರವನ್ನು ಕೊಟ್ಟಿದ್ದರ ಕುರಿತು ಮತ್ತು ಆ ಯೋಜನೆಗಳ ಅನುಷ್ಠಾನಗಳ ಕುರಿತು ಚರ್ಚಿಸಲಾಗಿದೆ. ಉದಾಹರಣೆಗೆ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಕುರಿತು ವಿಶ್ಲೇಷಿಸಲಾಗಿದೆ.[16] ಈ ಯೋಜನೆಯ ಕಾರ್ಯರೂಪಕ್ಕೆ 18000 ಕೋಟಿ ಬಂಡವಾಳ ಬೇಕಾಗಿರುತ್ತದೆ. ಹಾಗೆಯೇ ಈ ಮೊತ್ತವನ್ನು ಯೋಜನೆಯಡಿಯಲ್ಲಿ ಸರಿಯಾಗಿ ಹಂಚಿಕೆ ಮಾಡಬೇಕಾಗಿರುತ್ತದೆ. ಗ್ರಾಮೀಣ ಪ್ರದೇಶಗಳ ರಸ್ತೆಗಳ ಮತ್ತು ಮಾರುಕಟ್ಟೆ ಯಾರ್ಡ್‌ಗಳ ನಿರ್ಮಾಣಗಳಿಂದ ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಬಹುದೆಂಬುದನ್ನು ವಿವರಿಸಲಾಗಿದೆ.

ಲಾವಂಡ್ ಅವರು (2004) ಲೋ ಪ್ರೊಡಕ್ಟವಿಟಿ ಆಫ್ ಆನಿಯನ್ ಇನ್ ಇಂಡಿಯಾ ಯಾಸ್ ಕಂಪೇರ್ಡ್ ಟು ಚೈನಾ ಯು.ಎಸ್.ಎ. ಮತ್ತು ನೆದರ್‌ಲ್ಯಾಂಡ್, ಅಧ್ಯಯನದಲ್ಲಿ ಭಾರತದಲ್ಲಿ ಈರುಳ್ಳಿ ಬೆಳೆಯ ಇಳುವರಿಯು ಕಡಿಮೆಯಾಗಿರುವುದಕ್ಕೆ ಕಾರಣಗಳನ್ನು ಶೋಧಿಸುತ್ತಾ ಈರುಳ್ಳಿ ಬೆಳೆಯಲ್ಲಿ ಗಣನೀಯವಾಗಿ ಇಳುವರಿ ಕಡಿಮೆಯಾಗಲು ಒಂದು ಒಳ್ಳೆಯ ಗುಣಮಟ್ಟದ ಬೀಜಗಳ ಕೊರತೆ, ಎಫ್ 1 ಹೈಬ್ರಿಡ್, ನೀರಿನ ಕೊರತೆ ಮತ್ತು ಮಾರುಕಟ್ಟೆಯಲ್ಲಿ ಈರುಳ್ಳಿ ಬೆಲೆಯಲ್ಲಾಗುತ್ತಿರುವ ಏರಿಳಿತಗಳು, ಈರುಳ್ಳಿ ಬೆಳೆಯ ಉತ್ಪಾದನೆಯು ಕಡಿಮೆಯಾಗಲು ಕಾರಣವಾಗುತ್ತಿವೆ.[17] ಭಾರತದಲ್ಲಿ ಪ್ರಸ್ತುತ ಉತ್ಪಾದಿಸುತ್ತಿರುವ ಈರುಳ್ಳಿಯು ಅವಶ್ಯಕತೆಗೆ ಪೂರಕವಾಗಿ ಉತ್ಪಾದಿಸಲಾಗುತ್ತಿಲ್ಲ, ಹಾಗಾಗಿ ಭಾರತದಲ್ಲಿ ಬೇಡಿಕೆ ಇರುವ ಈರುಳ್ಳಿಯನ್ನು ಗ್ರಾಹಕರಿಗೆ ತಲುಪಿಸಲು ಆಮದು ಮಾಡಿಕೊಳ್ಳಲಾಗುತ್ತದೆ. ಅಲ್ಲದೆ ಭಾರತದಲ್ಲಿ ಈರುಳ್ಳಿ ಉತ್ಪಾದಿಸಿದ ರೈತರು ಎದುರಿಸುತ್ತಿರುವ ಸವಾಲೆಂದರೆ ಈರುಳ್ಳಿಯನ್ನು ಕಟಾವು ಮಾಡಿದ ನಂತರ, ಉತ್ಪನ್ನಗಳ ಸಂರಕ್ಷಣೆಯಲ್ಲಿಯೇ ಶೇಕಡ 50%ರಷ್ಟು ಹಾಳಾಗುತ್ತಿವೆ. ಇತ್ತೀಚಿನ ದಿನಗಳಲ್ಲಿ ಈರುಳ್ಳಿ ಉತ್ಪನ್ನವನ್ನು ಸಂರಕ್ಷಣೆ ಮಾಡಲು ಸರ್ಕಾರವು ವಿವಿಧ ರೀತಿಯ ತಂತ್ರಜ್ಞಾನಗಳನ್ನು ಬಳಸಿ ಶೇ.20%ರಿಂದ ಶೇ.30%ರಷ್ಟು ಕಡಿಮೆಗೊಳಿಸಲಾಗಿದೆ. ಈ ಅಧ್ಯಯನದಲ್ಲಿ ಸಂಶೋಧಕರು ಈರುಳ್ಳಿ ಬೆಳೆಯನ್ನು ಹೆಚ್ಚಿಸಲು ಸಂರಕ್ಷಿಸಲು ದೇಶದಲ್ಲಿಯೇ ವ್ಯವಸ್ಥೆಯನ್ನು ಮಾಡಬೇಕು ಮತ್ತು ಈರುಳ್ಳಿಯನ್ನು ಸಂಗ್ರಹಿಸಲು ರೈತರಿಗೆ ಕಡಿಮೆ ಬೆಲೆಯಲ್ಲಿ ದೊರೆಯುವಂತೆ ದಾಸ್ತಾನುಗಳ ವ್ಯವಸ್ಥೆ ಮಾಡಬೇಕು. ಹಾಗೆಯೇ ಬಹುಮುಖ್ಯವಾಗಿ, ಮಾರುಕಟ್ಟೆಯಲ್ಲಿಯೂ ರೈತರಿಗೆ ಬೇಕಾದ ಮೂಲಸೌಕರ್ಯಗಳನ್ನು ಒದಗಿಸಲು ಗರಿಷ್ಠ ಮಟ್ಟದ ಪ್ರಯತ್ನವನ್ನು ಕೈಗೊಳ್ಳಬೇಕು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಅಧ್ಯಯನದಲ್ಲಿ ಕೇವಲ ಈರುಳ್ಳಿ ಬೆಳೆಯನ್ನು ಮಾತ್ರವೇ ತೆಗೆದುಕೊಂಡಿದ್ದಾರೆ. ಇದು ಸಂಪೂರ್ಣ ಭಾರತದ ಅಧ್ಯಯನವನ್ನು ಹೊರದೇಶಗಳೊಂದಿಗೆ ಹೋಲಿಕೆ ಮಾಡಲಾಗಿದೆ.

ಬಿಲ್ಡಿಂಗ್ ಅಪ್ ಎಫಿಶಿಯಂಟ್ ಮಾರ್ಕೆಟಿಂಗ್ ಸಿಸ್ಟಮ್ ಟು ಒಬಿವೆಟ್ ದಿ ನೀಡ್ ಫಾರ್ ಲಾರ್ಜ್ ಸ್ಟೇಟ್ ಇನ್‌ಟರ್‌ವೆನಶನ್ ಇನ್ ಮಹಾರಾಷ್ಟ್ರ(2009) ಅಧ್ಯಯನದಲ್ಲಿ ಹತ್ತಿ, ಕಬ್ಬು ಮತ್ತು ಈರುಳ್ಳಿ ಬೆಳೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ವಿಸ್ತಾರವಾಗಿ ರಾಜ್ಯದಲ್ಲಿ ಈ ಮೂರು ಬೆಳೆಗಳಿಗಿರುವ ಮಾರುಕಟ್ಟೆಯ ವಿವಿದ ಮಾರ್ಗಗಳನ್ನು ಅಧ್ಯಯನ ಮಾಡಲಾಗಿದೆ.[18] ಈರುಳ್ಳಿ ಬೆಳೆಯಲ್ಲಿ ಮಾರುಕಟ್ಟೆಯ ವೆಚ್ಚ ಮತ್ತು ಕನಿಷ್ಠ ಬೆಲೆಯು 40.67% ಮತ್ತು 14.% ಯೂ ಲಾಸ್ ಲಾಗ್‌ನಲ್ಲಿ ಪೈಸೆಯಲ್ಲಿ ಇದು 42.42 ಮತ್ತು 15.17 ರಷ್ಟು ಇರುತ್ತದೆ. ಒಟ್ಟಾರೆ ರೈತರಿಗೆ ಚಿಲ್ಲರೆ ಬೆಲೆಯ ಅರ್ಧದಷ್ಟು ಸಹ ತಮ್ಮ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ಬೆಲೆ ನಿಗದಿಯಾಗಿರುವುದಿಲ್ಲ ಎನ್ನುವ ಅಂಶವನ್ನು ಸಂಶೋಧಕರು ಕಂಡುಕೊಂಡಿದ್ದಾರೆ.

ಹಂಮ್ಜಾ ಆಲ್ವಿ(1975) ಅವರು ಇಂಡಿಯಾ ಆ್ಯಂಡ್ ದಿ ಕೋಲೋನಿಯಲ್ ಮೋಡ್ ಆಫ್ ಪ್ರೊಡಕ್ಷನ್‌ದಲ್ಲಿ" ಸ್ವಾತಂತ್ರ್ಯ ನಂತರದ ಎರಡು ದಶಕಗಳಲ್ಲಿ ಭಾರತದ ವ್ಯವಸಾಯ ಕ್ಷೇತ್ರದಲ್ಲಿ ಬಹಳ ನಿರ್ಣಾಯಕವಾದ ಉಳಿಗಮಾನ್ಯ ಸ್ಥಿತಿಯಿಂದ ಬಂಡವಾಳಶಾಹಿ ಪದ್ಧತಿಗೆ ಬದಲಾವಣೆಯಾಗುವುದರಲ್ಲಿ ಒಂದು ದೊಡ್ಡ ಮಟ್ಟದ ಅಂದೋಲನವಾಯಿತು. ಇದರಿಂದಾಗಿ ಕೃಷಿಯಲ್ಲಿ ಬಂಡವಾಳ ಹೂಡುವವರ ಸಂಖ್ಯೆಯೂ ಹೆಚ್ಚಾಯಿತು. ಹಾಗಾಗಿ 1950ರ ದಶಕದ ಕೊನೆಯ ವರ್ಷಗಳಲ್ಲಿ, ಕೃಷಿ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಯೋಜನೆಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಯಾಗತೊಡಗಿತ್ತು.[19] ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ದೊಡ್ಡ ಜಮೀನುದಾರರನ್ನು ಹೊರತುಪಡಿಸಿ ಸಮಾಜದಲ್ಲಿರುವ ಎಲ್ಲ ಮಧ್ಯಮ ಮತ್ತು ಕೆಳವರ್ಗಗಳನ್ನು ತನ್ನ ಬಿಗಿ ಹಿಡಿತದಲ್ಲಿ ಇಟ್ಟುಕೊಂಡಿತ್ತು. ಏಕೆಂದರೆ ಇವರೆಲ್ಲರೂ ಬ್ರಿಟಿಷ್ ಆಡಳಿತದ ಜೊತೆಗೆ ಕೂಡಿಕೊಂಡಿದ್ದರು. ಆದರೆ ಕಾಂಗ್ರೆಸ್ ಪಕ್ಷದ ನಾಯಕತ್ವವು ಸಂಪೂರ್ಣವಾಗಿ ವೃತ್ತಿಪರ ಮಧ್ಯಮವರ್ಗದವರ ಕೈಯಲ್ಲಿತ್ತು ಏಕೆಂದರೆ ಮಧ್ಯಮವರ್ಗದವರಿಗೆ ಹೊಸದಾಗಿ ಹುಟ್ಟಿಕೊಳ್ಳುತ್ತಿರುವ ಆರ್ಥಿಕವಾಗಿ ಸದೃಢವಾದ ಸಮುದಾಯದ ಬೆಂಬಲವಿತ್ತು. ಕಾಂಗ್ರೆಸ್ ನಾಯಕತ್ವವು ಹೊಸ ರಾಜಕೀಯ ಕೊಂಡಿಗಳನ್ನು ಒತ್ತಾಯಪೂರ್ವಕವಾಗಿ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಸ್ಥಳೀಯವಾಗಿ ಅಥವಾ ಕೆಳಮಟ್ಟದಲ್ಲಿ ಅಧಿಕಾರವನ್ನು ಹೊಂದಿದ ವರ್ಗವನ್ನು ಉತ್ತೇಜಿಸಿತ್ತು. ಏಕೆಂದರೆ ಇವರು ಗ್ರಾಮೀಣ ಭಾಗದಲ್ಲಿ ಬಲಾಢ್ಯರಾಗಿದ್ದರು. ಸ್ವಾತಂತ್ರ್ಯದ ನಂತರದ ಭಾರತದಲ್ಲಿ ಅನೇಕ ಭೂ ಒಡೆಯರು ಮತ್ತು ಜಮೀನುದಾರರು ಹಲವಾರು ಕಾಯಿದೆಗಳಿಂದ ಬಹಳ ಪ್ರಮುಖವಾಗಿ ಭೂಸುಧಾರಣೆಯಿಂದ ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುವುದಕ್ಕೋಸ್ಕರ ಕಾಂಗ್ರೆಸ್ ಪಕ್ಷವನ್ನು ಸೇರಿಕೊಂಡು ಚುನಾವಣೆಗಳನ್ನು ಎದುರಿಸಿ ನೀತಿನಿಯಮಗಳನ್ನು ರೂಪಿಸುವ ಶಾಸಕಾಂಗಕ್ಕೆ ಪ್ರವೇಶ ಪಡೆದರು. ಭೂಸುಧಾರಣೆ ಕಾಯಿದೆಯನ್ನು ತಮ್ಮ ಇಚ್ಛೆಗೆ ತಕ್ಕಂತೆ ರೂಪಿಸಿಕೊಂಡರು. ಇದು ರಾಷ್ಟ್ರಿಯ ಮಟ್ಟದಲ್ಲಿ ಅಲ್ಲದೆ ಇನ್ನೂ ಕೆಳಸ್ತರದ ಮಟ್ಟದಲ್ಲಿ, ಅಂದರೆ ಗ್ರಾಮೀಣ ಭಾಗದಲ್ಲಿ ಬಲಾಢ್ಯರಾದವರ ಕೈಗೆ ಇನ್ನೂ ಹೆಚ್ಚಿನ ಅಧಿಕಾರವನ್ನು ಪಡೆಯಲು ಸಹಾಯಕವಾಯಿತು. ಭೂ ಸುಧಾರಣೆ ಕಾಯಿದೆಯಿಂದ ಆಗಬಹುದಾದ ನಷ್ಟವನ್ನು ತಪ್ಪಿಸಿಕೊಂಡರು ಮತ್ತು ಬಲಾಢ್ಯರು ಮತ್ತು ಭೂ ಒಡೆಯರು ಸೇರಿಕೊಂಡು ಒಂದು ಹೊಸ ವರ್ಗವನ್ನು ಸೃಷ್ಟಿಸಿಕೊಂಡರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಹಾಗೆಯೇ ಮುಂದಿನ ಭಾಗದಲ್ಲಿ ರಾಜ್ಯದಲ್ಲಾದ ಅಧ್ಯಯಗಳನ್ನು ವಿಶ್ಲೇಷಿಸಲಾಗಿದೆ.

'ಗ್ರಾಮಗಳು ಅಂದು ಇಂದು', ಡಾ. ಚಿನ್ನಸ್ವಾಮಿ ಸೋಸಲೆ(2004) ಅಧ್ಯಯನವು ಗ್ರಾಮೀಣ ಭಾರತದ ಸ್ವರೂಪವನ್ನು ಚಾರಿತ್ರಿಕವಾಗಿ ಪರಿಭಾವಿಸುವ ನಿಟ್ಟಿನಲ್ಲಿ ರೂಪುಗೊಂಡಿದೆ.

ಇಲ್ಲಿ ಪ್ರಧಾನವಾಗಿ ಗ್ರಾಮ ಭಾರತದ ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ ಸ್ಥಿತ್ಯಂತರಗಳ ಮಾಹಿತಿಗಳನ್ನು ದಾಖಲಿಸಲಾಗಿದೆ.[20] ಹಾಗೆಯೇ ಕೃಷಿ ಮತ್ತು ಕೃಷಿಗೆ ಸಂಬಂಧಿಸಿದಂತೆ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಸಹ ಇಲ್ಲಿ ದಾಖಲಿಸಲಾಗಿದೆ. ಈ ಲೇಖನವು ಗ್ರಾಮಗಳ ವಾಸ್ತವತೆಯನ್ನು ತಿಳಿಸಿಕೊಡುತ್ತದೆ.

ವಸಾಹತುಶಾಹಿ ಮತ್ತು ನಗರೀಕರಣ, ಡಾ.ಕೆ.ಮೋಹನ್‌ಕೃಷ್ಣ ರೈ ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ(2001) ಅಧ್ಯಯನದಲ್ಲಿ ಗ್ರಾಮಗಳ ಸ್ವರೂಪ ಅರ್ಥ ಮಾಡಿಕೊಂಡರೆ, ಪ್ರಸ್ತುತ ಲೇಖನದಲ್ಲಿ ಪ್ರಧಾನವಾಗಿ ವ್ಯಾಪಾರ ಮತ್ತು ವಾಣಿಜ್ಯದ ಉದ್ದೇಶಗಳಿಗೆ ಭಾರತಕ್ಕೆ ಬಂದ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡ ಬಗೆಯನ್ನು ವಿಶ್ಲೇಷಿಸಿದ್ದಾರೆ. ಇದಕ್ಕೆ ನಗರೀಕರಣ ಪೂರಕವಾಯಿತು.[21] ಕೃಷಿಯು ವಾಣಿಜ್ಯೀಕರಣಗೊಂಡು ಮಾರುಕಟ್ಟೆ ಪ್ರವೇಶಿಸಲು ಸಾಧ್ಯವಾಯಿತು. "ಬ್ರಿಟಿಷರಿಗೆ ಭಾರತವನ್ನು ಕೈಗಾರಿಕಾ ಪ್ರದೇಶವನ್ನಾಗಿ ಪರಿವರ್ತಿಸುವುದರಲ್ಲಾಗಲಿ ಅಥವಾ ನಗರೀಕರಣ ಪ್ರಕ್ರಿಯೆಯನ್ನು ಚುರುಕುಗೊಳಿಸುವುದರಲ್ಲಾಗಲೀ ಆಸಕ್ತಿ ಇರಲಿಲ್ಲ. ಬ್ರಿಟಿಷರು ಇಂಗ್ಲೇಂಡ್‌ನಲ್ಲಿ ಈ ಎರಡೂ ವ್ಯವಸ್ಥೆಗಳನ್ನು ಅನುಭವಿಸಿದವರೇ ಅಗಿದ್ದು, ಆ ವ್ಯವಸ್ಥೆಯನ್ನು ಇನ್ನಷ್ಟು ಬಲಗೊಳಿಸಲು ಪೂರಕ ವ್ಯವಸ್ಥೆಯನ್ನು ಭಾರತದಲ್ಲಿ ನಿರ್ಮಿಸುವುದು ಅದರ ಉದ್ದೇಶವಾಗಿತ್ತು. ಅಂದರೆ, ಭಾರತದಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವುದು ಹಾಗೂ ಇಲ್ಲಿರುವ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡದೇ ಇರುವುದು, ಭಾರತದ ಕೈಗಾರಿಕಾ ಹಿಂದುಳಿದಿರುವಿಕೆ ಯನ್ನು ಬ್ರಿಟಿಷರು ಪಜ್ಞಾಪೂರ್ವಕವಾಗಿಯೇ ಪ್ರೋತ್ಸಾಹಿಸಿದರು." ಹೀಗೆ ಚಾರಿತ್ರಿಕವಾಗಿ ಭಾರತದ ಕೃಷಿ ಮಾರುಕಟ್ಟೆಯ ಕುರಿತು ವಿಶ್ಲೇಷಿಸಿದ್ದಾರೆ. ಸ್ವಾತಂತ್ರ್ಯಪೂರ್ವದ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಅರಿಯಲು ಈ ಕೃತಿ ಸಹಾಯಕವಾಗುತ್ತದೆ. ಚಿನ್ನಸ್ವಾಮಿ ಸೋಸಲೆ ಹಾಗೂ ಮೋಹನ್‌ಕೃಷ್ಣ ರೈ ಅವರ ಅಧ್ಯಯನಗಳು ಪ್ರಧಾನವಾಗಿ ಗ್ರಾಮೀಣ ಮಾರುಕಟ್ಟೆಯ ಚಾರಿತ್ರಿಕ ಪರಿಣಾಮಗಳನ್ನು ದಾಖಲಿಸುವುದಾಗಿದೆ.

ಅಗ್ರಿಕಲ್ಚರ್ ಕ್ರೆಡಿಟ್, ಸೋರ್ಸಸ್, ಪ್ರಾಬ್ಲಮ್ ಆ್ಯಂಡ್ ಎಮರ್‌ಜಿಂಗ್ ಇಶ್ಯುಸ್: ಬಲ್‌ವಿಂದರ್ ಸಿಂಗ್(1999) ಸ್ವಾತಂತ್ರ್ಯಪೂರ್ವದ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಮೇಲಿನ ಅಧ್ಯಯನದಲ್ಲಿ ಅರಿತುಕೊಂಡರೆ, ಪ್ರಸ್ತುತ ಅಧ್ಯಯನದಲ್ಲಿ ಭಾರತದಲ್ಲಿ ಕೃಷಿಯ ಸಾಲಸೌಲಭ್ಯಗಳ ಸ್ವರೂಪ ಸ್ವಾತಂತ್ರ್ಯಪೂರ್ವದ ಮತ್ತು ನಂತರದ ಸಂದರ್ಭಗಳಲ್ಲಿ ಹೇಗಿತ್ತೆಂಬುದನ್ನು ವಿಶ್ಲೇಷಿಸಲಾಗಿದೆ.[22] ಇಂದಿನ ಸಂದರ್ಭದಲ್ಲಿ ಪ್ರಾದೇಶಿಕವಾಗಿ ಅಗತ್ಯವಿರುವ ಹಣಕಾಸಿನ ವ್ಯವಸ್ಥೆ, ಇತ್ತೀಚಿನ ಸರ್ಕಾರದ ಸಂಸ್ಥೆಗಳ ಸಮೀಕ್ಷೆಗಳು ಮತ್ತು ಕೃಷಿ ಅಭಿವೃದ್ಧಿ ಸಹಕಾರಿ

ಮತ್ತು ವಾಣಿಜ್ಯ ಬ್ಯಾಂಕ್‌ಗಳು, ಅವುಗಳ ಕಾರ್ಯ ನಿರ್ವಹಣೆ, ಅವಶ್ಯಕತೆಯನ್ನು ಸಮೀಕ್ಷಿಸಲಾಗಿದೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ಕೃಷಿಗೆ ಅವಶ್ಯಕವಾದ ಸಾಲಸೌಲಭ್ಯಗಳ ಕುರಿತು ಚರ್ಚಿಸಿದ್ದಾರೆ.

ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತಾಧಿಕಾರ ಸಮಿತಿ ವರದಿ, ಡಾ.ಟಿ.ಆರ್.ಚಂದ್ರಶೇಖರ್, ಈ ಅಧ್ಯಯನವು ಗುಲಬರ್ಗಾ ಜಿಲ್ಲೆಯಲ್ಲಿ ಅನುಲಕ್ಷಿಸಿ ಕೈಗೊಂಡ ಅಧ್ಯಯನವಾಗಿದೆ. ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯೆಂಬುದು ಕರ್ನಾಟಕವನ್ನು 1956ರಿಂದಲೂ ಕಾಡುತ್ತಿದೆ.[23] ಅಸಮಾನತೆ ಕುರಿತು ವಿಶ್ಲೇಷಿಸುವಾಗ ಅವರು ಯಾವ ಆರ್ಥಿಕತೆಯಲ್ಲಿ ಕೃಷಿ ಅವಲಂಬನೆ ಅಧಿಕವಾಗುತ್ತಾ ಬಂದಿದೆಯೋ ಅಂತಹ ಅರ್ಥಿಕತೆಯು ಹಿಂದುಳಿದಿರುತ್ತದೆ ಎಂಬ ವಾದವನ್ನು ಅಭಿವೃದ್ಧಿ ಸಿದ್ಧಾಂತಗಳು ಮುಂದಿಡುತ್ತ ಬಂದಿವೆ. ಕೃಷಿ ಅವಲಂಬನೆ ಅತ್ಯಧಿಕವಾಗಿದ್ದಾಗ ಅಲ್ಲಿ ಪ್ರತಿ ತಲಾ ಉತ್ಪಾದನೆ, ತಲಾ ಕಾರ್ಮಿಕರ ಉತ್ಪನ್ನ ಅತ್ಯಂತ ಕಡಿಮೆಯಿರುತ್ತದೆ. ಇಂತಹ ಸಂದರ್ಭದಲ್ಲಿ ಬಂಡವಾಳ ಹೂಡಿಕೆ ಮತ್ತು ಕೃಷಿಯೇತರ ಚಟುವಟಿಕೆಗಳ ಬೆಳವಣಿಗೆ ಕೆಳಮಟ್ಟದಲ್ಲಿರುತ್ತದೆ. ಕೈಗಾರೀಕರಣ, ನಗರೀಕರಣ ಹಾಗೂ ಆಧುನೀಕರಣಗಳು ಅಲ್ಲಿ ಅತ್ಯಂತ ಮಂದಗತಿಯಲ್ಲಿ ನಡೆಯುತ್ತಿರುತ್ತವೆ. ಈ ಭಾಗದಲ್ಲಿ ಹೆಚ್ಚಿನವರು ಕೃಷಿ ಇಲ್ಲವೆ ಕೃಷಿ ಆಧರಿತ ಕಾರ್ಮಿಕರಾಗಿ ಜೀವನ ಸಾಗಿಸುತ್ತಿದ್ದಾರೆ ಎಂಬುದನ್ನು ವಿವರಿಸಿದ್ದಾರೆ. ಬಹುತೇಕರಿಗೆ ಸ್ವಂತ ಭೂಮಿಯಿರುವುದಿಲ್ಲ, ಇದರೊಂದಿಗೆ ಅನಕ್ಷರತೆ ಅಧಿಕವಾಗಿದೆ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ.

ರೈತ ಮತ್ತು ಆದಿವಾಸಿ ಚಳುವಳಿ(ಸ್ವಾತಂತ್ರ್ಯಪೂರ್ವ) ಡಾ.ಸಿ.ಚಂದ್ರಪ್ಪನವರು ಅಧ್ಯಯನದಲ್ಲಿ ರೈತ ಮತ್ತು ಆದಿವಾಸಿ ಚಳುವಳಿಯ ಕುರಿತು ಸ್ವಾತಂತ್ರ್ಯಪೂರ್ವದಿಂದಲೂ ಹೇಗೆ ಈ ಸಮುದಾಯಗಳು ಸಮಾಜದಲ್ಲಿ ಎದುರಾಗುವ ಎಡರುತೊಡರುಗಳನ್ನು ಚಳುವಳಿಗಳ ಮೂಲಕ ಎದುರಿಸುತ್ತಾ ಬಂದಿದ್ದಾರೆ ಹಾಗೂ ಪ್ರಸ್ತುತ ರೈತ ಮತ್ತು ಆದಿವಾಸಿ ಚಳುವಳಿಗಳು ಹೇಗೆ ತಮ್ಮ ಮೌಲ್ಯಗಳನ್ನು ಕಳೆದುಕೊಳ್ಳುತ್ತಿವೆ ಎನ್ನುವುದನ್ನು ವಿವರಿಸಿದ್ದಾರೆ.[24] ಬಹುಮುಖ್ಯವಾಗಿ ಈ ಅಧ್ಯಯನದಲ್ಲಿ ವಿಶ್ಲೇಷಿಸಿರುವ ವಿಷಯ ಈ ಅಧ್ಯಯನಕ್ಕೆ ಪೂರಕವಾಗಿರುವ ಅಂಶವು ಕೃಷಿಯೆಂದರೆ ಏನು, ರೈತರೆಂದರೆ ಯಾರು, ಕೃಷಿಯ ವ್ಯಾಪಾರೀಕರಣ ಮತ್ತು ಕೃಷಿಯಲ್ಲಿ ಬಂಡವಾಳಶಾಹಿಗಳ ಬೆಳವಣಿಗೆ ಹಾಗೂ ವಸಾಹತು ಕೃಷಿನೀತಿ, ಕೃಷಿ ಆಧುನಿಕತೆ, ಉಳಿಗಮಾನ್ಯ ಭೂವ್ಯವಸ್ಥೆ ಮತ್ತು ಅಸ್ತಿತ್ವ, ದೇಶದ ಆರ್ಥಿಕ ಸಾಮಾಜಿಕ ಹಿನ್ನಡೆಗೆ ರೈತ ಮತ್ತು ಆದಿವಾಸಿ ಸಮುದಾಯದ ನಿರ್ಲಕ್ಷವೇ ಕಾರಣ, ಈ ಜನ ಸಮುದಾಯಗಳು ಅಧಿಕಾರ, ಸಂಪತ್ತು ಮತ್ತು ಸವಲತ್ತುಗಳನ್ನು ಹೊಂದಿಲ್ಲದಿದ್ದರೂ ರಾಷ್ಟ್ರನಿರ್ಮಾಣದ ಪ್ರಕ್ರಿಯೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ ಎನ್ನುವ ಅಂಶವನ್ನು ಲೇಖಕರು ವಿವರಿಸಿದ್ದಾರೆ.

ರೈತ ಚಳುವಳಿ ಎಂಬ ಅಧ್ಯಾಯದಲ್ಲಿ ರೈತನ ಇತಿಹಾಸದ ಕುರಿತು ವಿಶ್ಲೇಷಿಸಿದ್ದಾರೆ. ಈ ಅಧ್ಯಯನದಿಂದ, ಮೂಲ ರೈತನ ಉಗಮ, ರೈತ ಎಂದರೆ ಯಾರು ಎನ್ನುವ ಪ್ರಶ್ನೆಗಳಿಗೆ ಉತ್ತರ ದೊರಕಿದೆ. ಅಧ್ಯಯನದಲ್ಲಿ ಮಾನವನ ನಾಗರಿಕತೆಯ ಇತಿಹಾಸದ ಜೊತೆ ಜೊತೆಗೆ ರೈತರ ಇತಿಹಾಸವು ಸೇರಿಕೊಂಡಿದೆ. ಪ್ರಾಚೀನ ಮಾನವನು ವ್ಯವಸಾಯವನ್ನು ಕಂಡಕೊಂಡ ನಂತರವೆ, ಜನರು ವ್ಯವಸಾಯ ಮಾಡುವ ಪ್ರದೇಶದ ಹತ್ತಿರ ನೆಲೆ ನಿಂತು, ಸಂಘಗಳಲ್ಲಿ ಬದುಕಿ–ಹೀಗೆಯೇ ನಾಗರಿಕತೆಯು ಬೆಳೆಯಲು ಕಾರಣವಾಯಿತು. ಮಾನವನು ಒಂದು ಕಡೆ ನೆಲೆ ನಿಂತು ತನೆಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದನೆ ಮಾಡಿಕೊಳ್ಳಲು ಆರಂಭಿಸಿರುವುದು ಆತನ ಭೌತಿಕ ಅವಶ್ಯಕತೆಯ ಈಡೇರಿಕೆಗೆ ಸಹಕಾರಿಯಾಯಿತು. ಕೃಷಿ ಮತ್ತು ವಸ್ತುಗಳ ಉತ್ಪಾದನೆಯು ಮಾನವನ ಬದುಕಿಗೆ ತಳಹದಿ ಮಾತ್ರವಲ್ಲದೆ ಆತನ ಸಂದರ್ಭಗಳನ್ನು ನಿರ್ವಹಿಸುವ ಅಂಶವಾಗಿದೆ. ಕೊಸಾಂಬಿಯವರ ಪ್ರಕಾರ, ಉತ್ಪನ್ನ ಶಕ್ತಿಗಳು ಹಾಗೂ ಉತ್ಪಾದನ ಸಂದರ್ಭಗಳಲ್ಲಿ ಕ್ರಮವಾಗಿ ನಡೆಯುವ ಪರಿವರ್ತನೆಗಳನ್ನು ಕಾಲಾನುಕ್ರಮದಲ್ಲಿ ವಿವರಿಸುವುದೇ ಚರಿತ್ರೆ. ಈ ವಿವರಣೆಯಲ್ಲಿ 'ಉತ್ಪಾದನಾ ಶಕ್ತಿಗಳು', ಆಹಾರವೇ ಮೊದಲಾದ ಭೌತಿಕ ಅಗತ್ಯಗಳನ್ನು ಉತ್ಪಾದಿಸಲು ಬಳಸಲಾಗಿರುವ ಸಲಕರಣೆಗಳು ಹಾಗೂ ವಿಧಾನಗಳು. 'ಉತ್ಪಾದನಾ ಶಕ್ತಿಗಳೇ ಸಂಬಂಧಗಳು'. ಉತ್ಪಾದನೆಯಾದ ವಸ್ತುಗಳಲ್ಲಿ ಶ್ರಮಿಕನು ತನ್ನ ಅಗತ್ಯಕ್ಕೆ ಬೇಕಾದಷ್ಟು ಉಳಿಸಿಕೊಂಡು, ಮಿಕ್ಕ ಉತ್ಪಾದನೆಯನ್ನು ಆಡಳಿತವರ್ಗಕ್ಕೆ ರವಾನಿಸುವ ಏರ್ಪಾಡು, ಈ ರೀತಿಯಾಗಿ ರೈತನ ಮೂಲವನ್ನು ಕೊಸಾಂಬಿಯವರು ಚರಿತ್ರೆಯ ಒಂದು ವಿವರಣೆಯ ಮೂಲಕ ವಿವರಿಸಿದ್ದಾರೆ. ಹಾಗೆಯೇ ಲೇಖಕರು ರೈತರು ಎಂದರೆ ಯಾರು ಎನ್ನುವುದನ್ನು ಈ ರೀತಿ ಹೇಳಿದ್ದಾರೆ, ವ್ಯವಸಾಯದಲ್ಲಿ ಕಾರ್ಯ ನಿರ್ವಹಿಸುವವನನ್ನು ರೈತ ಎಂದು ಸಾಮಾನ್ಯವಾಗಿ ಹೇಳಬಹುದೆ, ವಿನಾ ಆದರೆ ಕೃಷಿಕನ್ನು ವಿವರಿಸುವುದು ಜಟಿಲ ಎಂದಿದ್ದಾರೆ. ಏರಿಕ್ ವೋಲ್ಫ್ ಪ್ರಕಾರ ಬದುಕಿಗಾಗಿ ಬೆಳೆಗಳನ್ನು ಬೆಳೆಯುತ್ತಿರುವ ಅಂದರೆ ಸ್ವಾತಂತ್ರ್ಯ ಅಥವಾ ಸ್ವಾಯತ್ತತೆ ಇರುವ ವರ್ಗ.

ಥೀಯೋಡರ್ ಶಾನಿನ್ ಪ್ರಕಾರ ರೈತರೆಂದರೆ 'ಸಣ್ಣ ಕೃಷಿಕರು'. ಅನೇಕರ ಪ್ರಕಾರ ರೈತ ಸಮುದಾಯದಲ್ಲಿ ವರ್ಗಗೊಂಡಾಗ ಭೂಮಾಲೀಕ ಮತ್ತು ಜೀತ ಪರಿಕಲ್ಪನೆ ವ್ಯತ್ಯಾಸವನ್ನು ಬಹಳ ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಹಾಗೆಯೇ ಕೃಷಿಯನ್ನು ಜೀವನಕ್ಕೆ ನಂಬಿರುವವರನ್ನೆಲ್ಲ ರೈತರು ಎಂದು ಹೇಳಲಾಗದು. ಪ್ರನಾಭ್ ಬರ್ಧಾನ್ ಅವರ ಪ್ರಕಾರ, "ಅಗ್ರೇರಿಯನ್ ಕ್ಲಾಸ್ ಫಾರ್‌ಮೇಶನ್ ಇನ್ ಇಂಡಿಯಾ"(1982)' ಎಂಬ ಕೃತಿಯಲ್ಲಿ ಆರ್ಥಿಕ ಸ್ಥಿತಿ ಮತ್ತು ಭೂಮಿಯ ಮೇಲಿನ ಹಕ್ಕುಗಳ ಆಧಾರದ ಮೇಲೆ ವಿವಿಧ ಹಂತಗಳನ್ನು ಗುರುತಿಸಿದ್ದಾರೆ.

1. ಭೂಮಾಲೀಕರು (land lords)

2. ಶ್ರೀಮಂತ ವರ್ಗದ ರೈತರು (rich peasants)

3. ಸಣ್ಣ ಹಿಡುವಳಿದಾರರು(ಬಡ ರೈತರು) (poor peasants)

4. ಕೃಷಿ ಕೂಲಿಕಾರ್ಮಿಕರು (landless agriculture laboures)

ಹಾಗೆಯೇ ಈ ಅಧ್ಯಯನದಲ್ಲಿ ಮುಖ್ಯವಾಗಿ ರೈತರ ಚಳುವಳಿ ಕುರುತು ಚರ್ಚಿಸಿರುವ ಅಂಶವು ಅಧ್ಯಯನಕ್ಕೆ ತುಂಬಾ ಹತ್ತಿರವಾಗಿದೆ. ರೈತರ ಚಳುವಳಿ ಎಂದರೆ ಏನು ಎನ್ನುವ ಅಂಶಕ್ಕಿಂತ ಈ ಅಧ್ಯಯನದಲ್ಲಿ ಯಾಕೆ ರೈತರು ಚಳುವಳಿ ಮಾಡಿದರು, ಅವರು ಚಳುವಳಿ ಮಾಡಲು ಪ್ರೇರೇಪಿಸಿದ ಸನ್ನಿವೇಶಗಳು ಅಥವಾ ಅಂದಿನ ಸರ್ಕಾರದ ಕರಾರುಗಳೇನು ಎನ್ನುವು ಅಂಶವು ಅಧ್ಯಯನಕ್ಕೆ ತುಂಬಾ ಮುಖ್ಯವಾಗಿದೆ. ಬ್ರಿಟಿಷರ ಆಗಮನ ನಂತರ ಇಪ್ಪತ್ತರ ಶತಮಾನದ ರೈತ ಹಿನ್ನೆಲೆಯ ಹೋರಾಟಗಳನ್ನು ಕೆಥಲೀನ್ ಗೋ ಗುರುತಿಸಿದ್ದಾಳೆ. ಈ ರೈತ ಹೋರಾಟಗಳ ಸ್ವರೂಪವು ಒಂದೇ ಎನ್ನುವಂತಿಲ್ಲ. ಅಂದಿನ ರೈತ ಹೋರಾಟಗಳಲ್ಲಿ ಮೂರು ಮುಖ್ಯ ಮಾದರಿಗಳನ್ನು ಗಮನಿಸಬೇಕು.

- ರೈತನೇ ಭೂ ಒಡೆಯನಾಗಿದ್ದ ರೈತರಿಗೆ ಭೂಪ್ರದೇಶಗಳಲ್ಲಿ ಮಿತಿ ಮೀರಿದ ಕಂದಾಯದ ಹೊರೆ.
- ನೀರಿನ ತೆರಿಗೆಯ ಏರಿಕೆ.
- ಬರಗಾಲ ಕಾಲದಲ್ಲಿ ಕಂದಾಯದ ಕಡ್ಡಾಯ ವಸೂಲಿ.

ಇಂತಹ ಎಲ್ಲ ಸಮಸ್ಯೆಗಳೊಂದಿಗೆ, ಇನ್ನೊಂದೆಡೆ ರೈತರಿಗೆ ಎದುರಾದ ಸಮಸ್ಯೆಗಳು, ಜಮೀನ್ದಾರಿ ಪ್ರದೇಶಗಳಲ್ಲಿ ಜಮೀನ್ದಾರ ಮತ್ತು ರೈತರ ನಡುವೆ ಉತ್ಪಾದನೆಯು ಯಾವ ಪ್ರಮಾಣಗಳಲ್ಲಿ ಹಂಚಿಕೆಯಾಗಬೇಕು ಎಂಬುದು ತನ್ನ ಪಾಲನ್ನು ಹೆಚ್ಚಿಸಿಕೊಳ್ಳಲು ಜಮೀನ್ದಾರರಿಗೆ ಹಕ್ಕು ಇದೆಯೇ ಎಂಬುದು, ಒಕ್ಕಲೆಬ್ಬಿಸುವುದು, ರೈತರಿಂದ ಜಮೀನ್ದಾರ ನಿರೀಕ್ಷಿಸುತ್ತಿದ್ದ ಕಾಣಿಕೆ ಹಾಗೂ ಬಿಟ್ಟಿ ಕೆಲಸಗಳು ಮುಂತಾದವು. ಅಲ್ಲದೆ ಆಹಾರದ ಬೆಳೆಗಳನ್ನು ಮುಖ್ಯ ಬೆಳೆಗಳನ್ನು ಬೆಳೆಯುವಂತೆ ಹೇರಿದ ಒತ್ತಾಯಗಳು, ಅವರು ನೀಡುತ್ತಿದ್ದ ಅತ್ಯಲ್ಪಬೆಲೆ, ಮಾಡುತ್ತಿದ್ದ ವಂಚನೆಗಳು ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ರೈತರು ಸತತವಾಗಿ ಎದುರಿಸಿದ ಸಮಸ್ಯೆಗಳಾಗಿವೆ. ಎದುರಿಸಿದ ಸಮಸ್ಯೆಗಳಿಗೆ ಅನುಗುಣವಾಗಿ ರೈತ ತನ್ನ ಶತ್ರು ಯಾರು ಎಂದು ನಿರ್ಧರಿಸುತ್ತಿದ್ದ. ಅವರೆಂದರೆ ಸರ್ಕಾರ, ಸಾಹುಕಾರ, ಜಮೀನ್ದಾರ ಇವರೇ ಆಗಿದ್ದರು ಎಂದು ವಿವರಿಸಿದ್ದಾರೆ. ಗ್ರಾಮ ಮತ್ತು

ರೈತರು ಅಂಶದೊಂದಿಗೆ ಮುಂದಿನ ಲೇಖನದಲ್ಲಿ ಮಾರುಕಟ್ಟೆಯ ಕುರಿತು ಇರುವ ಅಂಶಗಳನ್ನು ನೋಡುವುದಾದರೆ,

ಕೃಷಿ ಮಾರುಕಟ್ಟೆ ಎಂ. ಚಂದ್ರ ಪೂಜಾರಿಯವರ ಅಧ್ಯಯನವೂ, ಪ್ರಸ್ತುತ ಸಂಶೋಧನ ಅಧ್ಯಯನದ ಉದ್ದೇಶಗಳಿಗೆ ಪೂರಕವಾಗಿದೆ. ಅಧ್ಯಯನದಲ್ಲಿ ಕೃಷಿ ನೀತಿ ನಿಯಮಗಳು ಮತ್ತು ಉದಾರೀಕರಣ, ಜಾಗತೀಕರಣಗಳಿಂದ, ರೈತರ ಮೇಲಾಗುವ ಪರಿಣಾಮವನ್ನು ವಿವರಿಸಿದ್ದಾರೆ.[25] ಈ ಲೇಖನದಲ್ಲಿ ಲೇಖಕರು ಕೃಷಿ ಮಾರುಕಟ್ಟೆಯಲ್ಲಿ ರೈತರು ಅನುಭವಿಸುವ ನಷ್ಟದ ಕುರಿತು ವಿಶ್ಲೇಷಿಸುತ್ತಾ, ಕೃಷಿ ಮಾರುಕಟ್ಟೆಯಲ್ಲಿ ರೈತರು ಕೇವಲ ಉದಾರೀಕರಣ, ಜಾಗತೀಕರಣವಲ್ಲದೆ, ಅನೇಕ ಆಂತರಿಕ ಕಾರಣಗಳಿಂದಲೂ ನಷ್ಟವನ್ನು ಅನುಭವಿಸುತ್ತಾರೆ. ಅಂತಾರಾಷ್ಟ್ರೀಯ ವ್ಯವಸ್ಥೆಯೂ ಎಷ್ಟೋ ರೈತರ ನಷ್ಟಕ್ಕೆ ಪ್ರಮುಖ ಪಾತ್ರ ವಹಿಸುತ್ತದೆಯೋ ಅಷ್ಟೇ ಪ್ರಮಾಣದಲ್ಲಿ ಆಂತರಿಕ ಕಾರಣಗಳು ಹೇಗೆ ರೈತರ ಸ್ಥಿತಿಗತಿಗಳನ್ನು ನಷ್ಟದ ಕಡೆಗೆ ಕೊಂಡೊಯ್ಯುತ್ತಿವೆ ಎನ್ನುವುದನ್ನು, ಲೇಖಕರು ಮುಖ್ಯವಾಗಿ ನಾಲ್ಕು ಅಂಶಗಳ ಮೂಲಕ ವಿವರಿಸಿದ್ದಾರೆ.

1. ಬೇಡಿಕೆ ಮತ್ತು ಪೂರೈಕೆಯ ನಡುವೆ ಸಂಬಂಧ ಇಲ್ಲದೆ ಇರುವುದು.
2. ದೋಷಪೂರಿತ ಅಭಿವೃದ್ಧಿ ನೀತಿಗಳು.
3. ಕೇಂದ್ರೀಕೃತ ಅಭಿವೃದ್ಧಿ ಸಭೆ ಕೃಷಿ ನೀತಿಗಳು.
4. ರೈತರನ್ನು ಮಾರುಕಟ್ಟೆ ವ್ಯವಸ್ಥೆಯಲ್ಲಿ ಸಿದ್ಧಪಡಿಸಲಿಕ್ಕೆ ಬೇಕಾದ ಜನರ ಕೆಲಸದಲ್ಲಿ ಮೀಸಲಾಗಿಡುವುದು.

ಈ ನಾಲ್ಕು ಅಂಶಗಳು ಅನೇಕ ರೈತರ ಲಾಭದ ಭಾಗವನ್ನು ಕಡಿಮೆಗೊಳಿಸಿ ನಷ್ಟ ಅನುಭವಿಸುವಂತಾಗಿದೆ.

ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ(1998) ಹೆಚ್. ನಾಗರಾಜ ಶೆಟ್ಟಿ ಮಾರಾಟವು ಯಾವಾಗಲೂ ಮನಸೆಳೆಯುವಂತಹ ವಿಷಯವೇ, ಆರ್ಥಿಕ ವ್ಯವಸ್ಥೆಯಲ್ಲಿ ಎಲ್ಲ ಪ್ರಯತ್ನಗಳೂ ಉತ್ಪಾದನೆಯ ಬಗೆಗಿದ್ದು, ಅದೇ ಮಾರಾಟದ ವಿಷಯಕ್ಕೆ ಬಂದಾಗ ಶುದ್ಧ ಗೊಂದಲವೇ ಏಳುತ್ತದೆ ಎಂದಿದ್ದಾರೆ.[26] ಅನಿಶ್ಚಿತತೆಗಳು ಎದ್ದು ಕಾಣುತ್ತವೆ. ಮಾರಾಟ ತತ್ವಗಳು ಮತ್ತು ಯಶಸ್ವೀ ಮಾರಾಟಕ್ಕೆ ಅನುಸರಿಸಬೇಕಾದ ನೀತಿಗಳು ಔದ್ಯೋಗಿಕ ಉತ್ಪನ್ನಗಳಿಗೆ ಹೇಗೋ ಕೃಷಿ ಉತ್ಪನ್ನಗಳನ್ನು ಸತತವಾಗಿ ಕೊಂಡುಕೊಳ್ಳುತ್ತಲೇ ಹೋಗಬೇಕಾಗುತ್ತದೆ. ಮಾರುಕಟ್ಟೆ

ಕ್ಷೇತ್ರದ ಮೂಲಭೂತ ಸೌಲಭ್ಯವು ಯಶಸ್ವೀ ಮಾರಾಟಕ್ಕೆ ಮುಖ್ಯ ಸಾಧನೆಯಾಗಿದೆ. ಅರ್ಥವ್ಯವಸ್ಥೆಯ ಜಾಗತೀಕರಣ ಹಾಗೂ ಅದು ಆರ್ಥಿಕಾಭಿವೃದ್ಧಿಯ ಮೇಲೆ ಬೀರಬಹುದಾದ ಪರಿಣಾಮದ ಹಿನ್ನೆಲೆಯಲ್ಲಿ ಕೃಷಿ ಮತ್ತು ತೋಟಗಾರಿಕೆ ಉತ್ಪನ್ನಗಳ ಮಾರಾಟಕ್ಕೆ ಅಗತ್ಯವಾದ ಮೂಲಭೂತ ಸೌಲಭ್ಯಗಳ ವಿಶ್ಲೇಷಣೆಯ ಪ್ರಯತ್ನವೊಂದನ್ನು ಈ ಕೃತಿಯಲ್ಲಿ ಮಾಡಲಾಗಿದೆ.

ಈ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಮಾರುಕಟ್ಟೆ ಇಲಾಖೆ ಮತ್ತು ಅದಕ್ಕೆ ಸಂಬಂಧಿಸಿದ ಸಂಸ್ಥೆಗಳಿಂದ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಪೂರಕವಾಗಿ ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿಯನ್ನು ಕ್ರೋಡೀಕರಿಸಿದ್ದಾರೆ. ಇವರ ಕೃತಿಯಲ್ಲಿ ಮಾರಾಟ, ಆರ್ಥಿಕ ಅಭಿವೃದ್ಧಿ, ಪೇಟೆಯ ಅಭಿವೃದ್ಧಿಗಾಗಿ ಒದಗಿಸಲಾಗುವ ಮೂಲಭೂತ ವ್ಯವಸ್ಥೆ ಮುಂತಾದವುಗಳ ವಿಶ್ಲೇಷಣೆಯನ್ನು ಸಹ ಕಾಣಬಹುದಾಗಿದೆ. ಅಲ್ಲದೆ ಈ ಕೃತಿಯಲ್ಲಿ ಭಾರತದ ಕೃಷಿ ಮಾರಾಟದ ಕುರಿತು ಐತಿಹಾಸಿಕ ಬೆಳವಣಿಗೆಯನ್ನು ವ್ಯಾಖ್ಯಾನಿಸಿರುವುದು ವಿಶೇಷ. ಮಾರಾಟದ ಧೋರಣೆ ಮತ್ತು ಕಾನೂನಿನ ಚೌಕಟ್ಟು, ಕರ್ನಾಟಕದಲ್ಲಿ ಪೇಟೆಯ ಅಭಿವೃದ್ಧಿ ಧೋರಣೆಗಳು, ಪೇಟೆಗಳ ಬೆಳವಣಿಗೆ ಮತ್ತು ವಿಕಾಸದ ವಿಶ್ಲೇಷಣೆ, ಕೃಷಿ ಮಾರಾಟಕ್ಕಾಗಿ ಸಾಂಸ್ಥಿಕ ವ್ಯವಸ್ಥೆಯ ವಿಕಸನ, ಮಾರಾಟದ ಮೂಲಭೂತ ವ್ಯವಸ್ಥೆ ಹಾಗೂ ಉತ್ಪಾದನೆ, ಉತ್ಪಾದಕತೆ ಮತ್ತು ಪೇಟೆ ಆವಕಗಳ ಮೇಲೆ ಅದರ ಪರಿಣಾಮ, ಪೇಟೆಯ ಅಭಿವೃದ್ಧಿಯ ಸವಾಲುಗಳು ಧೋರಣೆಯ ಆಯ್ಕೆಗಳು ಮುಂತಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಈಶ್ವರನ್ ಕೆ.(1976) ಅವರು ತಮ್ಮ ಸಂಶೋಧನೆಯನ್ನು ಧಾರವಾಡ ಜಿಲ್ಲೆಯಲ್ಲಿರುವ ಶಿವಪುರ ಎಂಬ ಗ್ರಾಮದಲ್ಲಿ 1961ರಲ್ಲಿ ಕೈಗೊಂಡಿದ್ದರು. ಈ ಗ್ರಾಮದಲ್ಲಿ ಹೆಚ್ಚಿನ ರೈತರು ಲಿಂಗಾಯತರು. ಬಹುಪಾಲು ಭೂ ಒಡೆಯರಾಗಿದ್ದರು. ಭೂರಹಿತರಾದ ಮುಸಲ್ಮಾನರು ಹಿಂದು ಮತ್ತು ಜೈನರ ನಡುವೆ ಸಮತೋಲನ ತರುವ ಪಾತ್ರವನ್ನು ವಹಿಸುತ್ತಿದ್ದರು.[27] ಗ್ರಾಮದಲ್ಲಿ ಒಟ್ಟು 631 ಕುಟುಂಬಗಳಲ್ಲಿ ಶೇ.40%ರಷ್ಟು ಭೂರಹಿತರಾಗಿದ್ದರು. ಗ್ರಾಮದ ಅರ್ಥವ್ಯವಸ್ಥೆಯು ಮೂಲತಃ ವ್ಯವಸಾಯಪ್ರಧಾನವಾಗಿತ್ತು. ಈ ವ್ಯವಸಾಯಕ್ಕೆ ಅನುಕೂಲವಾಗಿರುವಂತೆ ಸಾಂಪ್ರದಾಯಿಕ ರೀತಿಯಲ್ಲಿ ಕಟ್ಟಿರುವ ಮನೆಗಳು ಮಾಲೀಕರ ಆರ್ಥಿಕ ವರ್ಗಕ್ಕೆ ಅನುಗುಣವಾಗಿದ್ದವು. ವ್ಯವಸಾಯಗಾರರನ್ನು ಅವರು ಹೊಂದಿರುವ ಭೂಮಿಯ ಆಧಾರದ ಮೇಲೆ ಮೇಲ್ವರ್ಗದವರು(25 ಎಕರೆ ಮತ್ತು ಹೆಚ್ಚಿನ ಭೂಮಿಯನ್ನು ಪಡೆದವರು), ಮಧ್ಯಮವರ್ಗದವರು(12ರಿಂದ 24 ಎಕರೆ ಭೂಮಿಯನ್ನು ಹೊಂದಿರುವವರು) ಮತ್ತು ಕೆಳವರ್ಗದವರು(12 ಎಕರೆಗಿಂತ ಕಡಿಮೆ ಭೂಮಿಯನ್ನು ಹೊಂದಿರುವವರು) ಎಂದು ಮೂರು ಗುಂಪುಗಳಾಗಿ ವಿಂಗಡಿಸಿದ್ದರು. ಇನ್ನು ಮಾರುಕಟ್ಟೆಯ ವಿಷಯಗಳನ್ನು ಗಮನಿಸಿದಾಗ ಹಾಲನ್ನು

ಧಾರವಾಡದ ಹೋಟೆಲುಗಳಿಗೆ ಮಾರುತ್ತಿದ್ದರು ಮತ್ತು ಈ ಮಾರಾಟವನ್ನು ಮಾಡಲು ಕೆಲವು ದಲಾಲರು ಗ್ರಾಮದಲ್ಲಿ ಇದ್ದರು. ಹಣ್ಣುಗಳನ್ನು ವಿಶೇಷವಾಗಿ ಮಾವಿನ ಹಣ್ಣುಗಳನ್ನು ದೂರದ ಮುಂಬಯಿಗೆ ಮಾರಾಟ ಮಾಡುತ್ತಿದ್ದರು. ಹೆಚ್ಚಿನ ಹಣ್ಣುಗಳನ್ನು ಹುಬ್ಬಳಿ-ಧಾರವಾಡ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದರು. ಸಂಗ್ರಹಿಸಲ್ಪಟ್ಟ ಹಳೆಯ ದವಸಧಾನ್ಯಗಳನ್ನು ಸುಗ್ಗಿಯ ಕಾಲದಲ್ಲಿ ಪೇಟೆಯಲ್ಲಿ ಮಾರುತ್ತಿದ್ದರು ಮತ್ತು ಪ್ರತಿ ವಾರ ಸಂತೆಯಲ್ಲಿ ದವಸಧಾನ್ಯಗಳನ್ನು ಸ್ವಲ್ಪ ಸ್ವಲ್ಪ ಮಾರಿ ಮನೆಗೆ ಬೇಕಾಗುವ ಸಾಮಾನುಗಳನ್ನು ಕೊಳ್ಳುತ್ತಿದ್ದರು.

ಶ್ರೀನಿವಾಸನ್(1976) ಅಧ್ಯಯನದಲ್ಲಿ, ಒಟ್ಟು ಭೂಮಿಯ ಆಧಾರದ ಮೇಲೆ ರೈತರನ್ನು ವಿವಿಧ ಶ್ರೇಣೀಕರಣಗಳನ್ನಾಗಿ ವಿಂಗಡಿಸುತ್ತಾರೆ. ಹೆಚ್ಚು ಭೂಮಿ ಹೊಂದಿದವರು ಮೇಲ್ವರ್ಗಕ್ಕೆ ಸೇರಿದ ರೈತರು, ಕಡಿಮೆ ಭೂಮಿಯನ್ನು ಹೊಂದಿದವರು ಕೆಳವರ್ಗದವರೆಂದು ಮತ್ತು ಯಾವುದೇ ಭೂಮಿಯನ್ನು ಹೊಂದದೆ ಇರುವವರನ್ನು ಭೂರಹಿತ ಕಾರ್ಮಿಕರೆಂದು ಕರೆದಿದ್ದಾರೆ. ಹೆಚ್ಚಿನ ಭೂಮಿಯನ್ನು ಹೊಂದಿದವರು ಬ್ರಾಹ್ಮಣ ಮತ್ತು ಒಕ್ಕಲಿಗ ಜಾತಿಗೆ ಸೇರಿದವರಾಗಿದ್ದಾರೆ.[28] ರೈತರು ಮತ್ತು ಭೂರಹಿತ ಕಾರ್ಮಿಕರೆಲ್ಲರೂ ಕೆಳಜಾತಿಗೆ ಸೇರಿದವರೆಂದು ಅಭಿಪ್ರಾಯಪಡುತ್ತಾರೆ. ರೈತರು ಭೂರಹಿತ ಕಾರ್ಮಿಕರನ್ನು ಮತ್ತು ಹಿಡುವಳಿದಾರರನ್ನು ಭೂ ಒಡೆಯರು ಯಾವ ರೀತಿಯಾಗಿ ಶೋಷಣೆಯನ್ನು ಮಾಡುತ್ತಿದ್ದರು ಎಂಬುದಕ್ಕೆ ಒಂದು ಉದಾಹರಣೆಯನ್ನು ನೀಡುತ್ತಾರೆ. ಭೂರಹಿತ ಕಾರ್ಮಿಕರು, ಭೂ ಒಡೆಯರಿಗೆ ಕೊಡಬೇಕಾದ ಬಾಡಿಗೆಯ ರೂಪದಲ್ಲಿರುವ ದವಸಧಾನ್ಯಗಳನ್ನು ಭೂ ಒಡೆಯರು ರಾಶಿಯಾದ ನಂತರ ತೆಗೆದುಕೊಳ್ಳದೆ ಮಾರುಕಟ್ಟೆಯಲ್ಲಿ ಬೆಲೆ ಹೆಚ್ಚಳವಾದಾಗ ತೆಗೆದುಕೊಂಡು ಮಾರಾಟ ಮಾಡಿ ಹೆಚ್ಚಿನ ಲಾಭವನ್ನು ಮಾಡಿಕೊಳ್ಳುತ್ತಿದ್ದರು. ಅಲ್ಲದೆ ಒಂದು ವೇಳೆ ಬೆಲೆ ಹೆಚ್ಚಳವಾಗದಿದ್ದರೆ ಭೂಕಾರ್ಮಿಕರಲ್ಲಿಯೇ ಉತ್ಪನ್ನಗಳನ್ನು ಸಂಗ್ರಹವಾಗಿಟ್ಟು ಅದಕ್ಕೆ ಏನಾದರು ಕ್ರೀಮಿಕೀಟಗಳು ತಗುಲಿ ನಷ್ಟವಾದರೆ ಅದನ್ನು ಸಹಿತ ಹಿಡುವಳಿದಾರರಿಂದಲೇ ಭರಿಸಿಕೊಳ್ಳುತ್ತಿದ್ದರು. ಭೂ ಒಡೆಯರ ಇನ್ನೂ ಒಂದು ದುರುದ್ದೇಶ ಏನೆಂದರೆ ರಾಶಿಯಾದ ತಕ್ಷಣ ಉತ್ಪನ್ನಗಳನ್ನು ತೆಗೆದುಕೊಂಡರೆ ದವಸಧಾನ್ಯಗಳು ಹಸಿಯಾಗಿರುತ್ತಿದ್ದುದರಿಂದ ಬೆಲೆ ಕಡಿಮೆ ಪ್ರಮಾಣದಲ್ಲಿರುತ್ತವೆಂದು, ಸ್ವಲ್ಪ ದಿನಗಳ ನಂತರ ತೆಗೆದುಕೊಂಡರೆ ದವಸಧಾನ್ಯಗಳು ಒಣಗಿ ಅವುಗಳನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡುವ ಉದ್ದೇಶವನ್ನು ಭೂ ಒಡೆಯರು ಹೊಂದಿದ್ದಾರೆ ಎಂದು ವಿವರಿಸಿದ್ದಾರೆ.

ಚಂದ್ರ ಪೂಜಾರಿ(2017) ಅವರು ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ ಅಧ್ಯಯನದಲ್ಲಿ ತೊಂಬತ್ತರ ದಶಕದ ನಂತರದಲ್ಲಿ ಅಧಿಕೃತವಾಗಿ ನಮ್ಮ ದೇಶದಲ್ಲಿ ನಿಯೋ

ಲಿಬರಲ್ ಅಥವಾ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿಗಳು ಬಹಳ ಯಶಸ್ವಿಯಾಗಿವೆ.[29] ಜನರ ಖರೀದಿಸುವ ಶಕ್ತಿ ಮತ್ತು ಅವರು ಅನುಭವಿಸುವ ಸರಕು ಸೇವೆ ಅಥವಾ ಉತ್ಪಾದನಾ ಪರಿಕರಗಳ ನಡುವೆ ನೇರ ಸಂಬಂಧ ಕಲ್ಪಿಸಲಾಗಿದೆ. ಬಡವರಲ್ಲದವರು ಮಾರುಕಟ್ಟೆಯಲ್ಲಿ ದರ ಹೆಚ್ಚಿದ್ದರೂ ಸಹ ಖರೀದಿ ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಆದರೆ ಬಡವರು ಸರಕಾರ ಕೊಡುವ ಕಾರ್ಯಕ್ರಮಗಳ ಮೇಲೆ ಮಾತ್ರ ಅವಲಂಬಿತರಾಗಿದ್ದಾರೆ. ಇದರಿಂದ ಬಡವರು ತೀರ ಬಡವರಾಗಿ ಮತ್ತು ಉಳ್ಳವರು ತಮ್ಮ ಸಂಪತ್ತನ್ನು ಹೆಚ್ಚಿಗೆ ಮಾಡಿಕೊಳ್ಳುವಲ್ಲಿ ನಿರತರಾಗಿದ್ದಾರೆ. ಒಟ್ಟಾರೆಯಾಗಿ, ನಮ್ಮ ಸಮಾಜವನ್ನು ಒಂದು ಪಿರಮಿಡ್ ಆಕೃತಿಯಲ್ಲಿ ರೂಪಿಸುವಲ್ಲಿ ನಿಯೋ ಲಿಬರಲ್ ಆರ್ಥಿಕ ನೀತಿಗಳು ತಮ್ಮ ಗುರಿಗಳನ್ನು ಯಶಸ್ವಿಯಾಗಿ ಮುಟ್ಟಿವೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ.

ದೀಪಾ ನಾರಾಯಣ ಮತ್ತು ಇತರರು(2009) ಅಧ್ಯಯನದಲ್ಲಿ, ಗ್ರಾಮಿಣ ಭಾಗದಲ್ಲಿ ರೈತರನ್ನು ವಿಂಗಡಿಸಿರುವ ಕೃಷಿ ಹಿಡುವಳಿಗಳ ಆಧಾರದ ಮೇಲೆ ಅಧ್ಯಯನವನ್ನು ಮಂಡಿಸುತ್ತಾರೆ.[30] ಅಧ್ಯಯನದಲ್ಲಿ ಗ್ರಾಮದಲ್ಲಿರುವ ಸಮುದಾಯದ ಜನಸಂಖ್ಯೆಯನ್ನು ಒಟ್ಟು ಆರು ಗುಂಪುಗಳಲ್ಲಿ ವಿಂಗಡಿಸುತ್ತಾರೆ. ಮೊದಲನೆಯದಾಗಿ ಭೂ ಒಡೆಯರು, ಈ ವರ್ಗದಲ್ಲಿ ಬೇರೆಯವರಿಂದ ತಮ್ಮ ಜಮೀನಿನಲ್ಲಿ ಕೆಲಸ ಮಾಡಿಸಿಕೊಳ್ಳುವವರು, ದೊಡ್ಡ ಪ್ರಮಾಣದ ಬಂಗಲೆಯನ್ನು ಹೊಂದಿರುವವರು, ಗ್ರಾಮದಲ್ಲಿ ಮೆಲ್ಮಟ್ಟದ ಗೌರವವನ್ನು ಹೊಂದಿರುವರು. ಕೇವಲ ಎರಡು ಕುಂಟುಂಬಗಳು ಮಾತ್ರ ಈ ಗುಂಪುಗಳಲ್ಲಿ ಸೇರಿವೆ. ಎರಡನೆಯದಾಗಿ ದೊಡ್ಡ ರೈತರು, ಪಿತ್ರಾರ್ಜಿತವಾಗಿ ಬಂದಿರುವ 15–25 ಎಕರೆ ಸ್ವಂತ ಭೂಮಿಯನ್ನು ಹೊಂದಿರುವರು ಮತ್ತು ನಾಲ್ಕರಿಂದ ಐದು ಮನೆಗಳು ಜೊತೆಗೆ ಮೋಟರ್ ಬೈಕ್‌ಗಳು, ಫ್ಯಾನುಗಳು ಮತ್ತು ದನಕರುಗಳನ್ನು ಹೊಂದಿರುವರು. ಹತ್ತಿ, ಮೆಣಸಿನಕಾಯಿ, ಸೋಯಾಬೀನ್, ಫಲವತ್ತಾದ ಭೂಮಿಯನ್ನು ಹೊಂದಿರುವ ಬ್ಯಾಂಕುಗಳು ಸಾಲವನ್ನು ಕೊಡುವ ಮತ್ತು ಮಕ್ಕಳಿಗೆ ಗುಣಮಟ್ಟದ ಶಿಕ್ಷಣವನ್ನು ಕೊಡುವ ಮತ್ತು ಯಾವುದೇ ರೀತಿಯಾದ ಕೆಲಸ ಮಾಡದೆ ಜೀವನ ಸಾಗಿಸುವರು.

ಮೂರನೆಯದಾಗಿ ಮಧ್ಯಮರೈತರು 5 ಎಕರೆ ಭೂಮಿಯನ್ನು ಹೊಂದಿರುವರು ಮತ್ತು ಕೆಲವೊಬ್ಬರು ಸರಕಾರಿ ನೌಕರಿಯನ್ನು ಹೊಂದಿರುವರು, ಸಿಮೆಂಟಿನಿಂದ ನಿರ್ಮಿತ ಸ್ವಂತ ಮನೆಯನ್ನು ಹೊಂದಿರುವರು. ದನಕರುಗಳು, ಟಿವಿ, ಫ್ಯಾನು, ಕೊಳವೆಬಾವಿ ಮತ್ತು ಮಲಗುವ ಮಂಚವನ್ನು ಹೊಂದಿರುವರು. ಒಳ್ಳೆಯ ಗುಣಮಟ್ಟದ ಅಕ್ಕಿಯನ್ನು ಉಪಯೋಗಿಸುವರು. ಮಹಿಳೆಯರು ಚಿನ್ನದ ಆಭರಣವನ್ನು ಧರಿಸುವವರು ಮತ್ತು ಮಕ್ಕಳನ್ನು ಉತ್ತಮವಾದ ಶಾಲೆಯಲ್ಲಿ ಸೇರಿಸಿರುವರು ಮತ್ತು ಬ್ಯಾಂಕುಗಳು ಸಾಲವನ್ನು ನೀಡುವವರು. ನಾಲ್ಕನೆಯದಾಗಿ

ಸಣ್ಣರೈತರು: 3ರಿಂದ 5 ಎಕರೆ ಸ್ವಂತ ಭೂಮಿಯನ್ನು ಹೊಂದಿದವರು, ಸ್ವಂತ ಮನೆ ಮತ್ತು ದನ ಕರುಗಳು ಹೊಂದಿರುವವರು, ಆದರೆ ಯಾವುದೇ ಕೊಳವೆಬಾವಿಗಳನ್ನು ಹೊಂದಿರುವುದಿಲ್ಲ. ಇವರ ಜೀವನ ಬೀಳುವ ಮಳೆಯ ಪ್ರಮಾಣದ ಮೇಲೆ ಅವಲಂಬಿಸಿರುತ್ತದೆ. ಬರಗಾಲದಲ್ಲಿ ಪಟ್ಟಣಕ್ಕೆ ವಲಸೆ ಹೋಗುವವರು ಅಥವಾ ಕೃಷಿ ಕೂಲಿ ಕಾರ್ಮಿಕರಾಗಿ ಕೆಲಸ ಮಾಡುವವರು. ಅಲ್ಪ ಪ್ರಮಾಣದ ಶಿಕ್ಷಣವನ್ನು ಪಡೆದವರು. ಐದನೆಯದು ಸಣ್ಣ ಹಿಡುವಳಿಯನ್ನು ಹೊಂದಿರುವ ಕಾರ್ಮಿಕರು. ಇವರು ಸಾಮಾನ್ಯವಾಗಿ ಕೆಳಜಾತಿ ಮತ್ತು ಪರಿಶಿಷ್ಟಜಾತಿಗೆ ಸೇರಿದವರಾಗಿದ್ದು, ಇವರು 1ರಿಂದ 2 ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಇವರು ಹೊಂದಿದ ಭೂಮಿಯು ಫಲವತ್ತಾಗಿರುವುದಿಲ್ಲ ಮತ್ತು ಇವರು ಬೇರೆಯವರಲ್ಲಿ ಕೂಲಿಗಾಗಿ ಅಥವಾ ಜೀತಗಾರರಾಗಿ ದುಡಿಯುವರು. ಇವರು ಅನಕ್ಷರಸ್ಥರಾಗಿರುತ್ತಾರೆ ಮತ್ತು ಪ್ರತಿಯೊಂದು ದಿವಸವು ಕಷ್ಟದಾಯಕ ವಾಗಿರುತ್ತದೆ. ಸರಿಯಾದ ವಸತಿವ್ಯವಸ್ಥೆ ಇರುವುದಿಲ್ಲ. ಆರನೆಯದಾಗಿ ಭೂರಹಿತ ಕಾರ್ಮಿಕರು ಆಹಾರದ, ಬಟ್ಟೆ, ವಸತಿ ಕೊರತೆಯನ್ನು ಎದುರಿಸುವ, ಇವರಿಗೆ ದಿನಾಲೂ ದುಡಿಯಲು ಕೆಲಸವಿರುವುದಿಲ್ಲ. ತಿಂಗಳಲ್ಲಿ 12ರಿಂದ 15 ದಿವಸ ಕೆಲಸದಲ್ಲಿ ನಿರತರಾಗಿರುವರನ್ನು ಅನಕ್ಷರಸ್ಥರನ್ನು ಬಡತನ ರೇಖೆಯ ಕೆಳಗಿನವರೆಂದು ವಿಂಗಡಿಸಿದ್ದಾರೆ.

ಈ ಅಧ್ಯಯನವು ಮೇಲಿನ ಸಮಸ್ಯೀಕರಣದ ಆಧಾರದ ಮೇಲೆ ಕೆಳಕಂಡ ಸಂಶೋಧನಾ ಪ್ರಶ್ನೆಗಳನ್ನು ಗುರುತಿಸಲಾಗಿದೆ. ಈ ಪ್ರಶ್ನೆಗಳು ಸಂಶೋಧನೆಗೆ ಮುನ್ನುಡಿಯಾಗಿವೆ. ಈಗಿನ ಆಧುನಿಕರಣ ಯುಗದಲ್ಲಿಯೂ ಸಹ ಪ್ರಾಚೀನಕಾಲದಿಂದ ಆಚರಣೆಯಲ್ಲಿರುವ ಕೃಷಿಪದ್ಧತಿಯನ್ನು ಆಧರಿಸಿ ಮತ್ತು ಕೃಷಿ ಭೂಮಿಯನ್ನು ಹೊಂದಿರುವ ಆಧಾರದ ಮೇಲೆ ರೈತರನ್ನು ಸಣ್ಣ ರೈತರು, ಮಧ್ಯಮರೈತರು ಮತ್ತು ದೊಡ್ಡಹಿಡುವಳಿದಾರರರು ಎಂದು ವಿಂಗಡಿಸಿದ್ದಾರೆ. ಅಧ್ಯಯನಗಳಿಂದ ನಾನು ಗುರುತಿಸಿರುವ ಕೊರತೆಗಳೇ ನನ್ನ ಅಧ್ಯಯನಕ್ಕೆ ಪ್ರಶ್ನೆಗಳಾಗಿವೆ ಅವು ಈ ಕೆಳಗಿನಂತಿವೆ.

1. ಸರಕಾರವು ಈಗಾಗಲೇ ಗುರುತಿಸಿದ ಹಲವಾರು ಸಮಿತಿಗಳಿಂದ ಸಣ್ಣರೈತರಿಗೆ, ಮಧ್ಯಮ ರೈತರಿಗೆ ಹಾಗೂ ದೊಡ್ಡರೈತರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ ಏನು?
2. ಸರ್ಕಾರವು ಈ ರೈತರ ಯೋಗಕ್ಷೇಮಕ್ಕಾಗಿ ಯಾವ ಯಾವ ಯೋಜನೆಗಳನ್ನು ಹಾಕಿಕೊಂಡಿದೆ?
3. ರೈತರ ಬೇಡಿಕೆ ಮತ್ತು ಪೂರೈಕೆಗಳನ್ನು ಈಡೇರಿಸುವಲ್ಲಿ ಸರ್ಕಾರದ ಮತ್ತು ಮಾರುಕಟ್ಟೆಗಳು ಎಷ್ಟರ ಮಟ್ಟಿಗೆ ತಮ್ಮ ಪಾತ್ರವನ್ನು ನಿರ್ವಹಿಸುತ್ತಿವೆ?

4. ರೈತರು ಉತ್ಪನ್ನಗಳನ್ನು ಉತ್ಪಾದಿಸಲು ಬೇಡಿಕೆ ಮತ್ತು ಪೂರೈಕೆಗಳಲ್ಲಿ, ಸರ್ಕಾರ ಒದಗಿಸುವ ಯೋಜನೆಗಳು ಯಾವ ರೀತಿಯಾಗಿ ವಿಭಿನ್ನವಾಗಿವೆ?
5. ರೈತರು ಉತ್ಪನ್ನಗಳನ್ನು ಉತ್ಪಾದಿಸಲು ಮತ್ತು ಮಾರಾಟ ಮಾಡಲು ಸರಕಾರದ ಮೇಲೆ ಮತ್ತು ಮಾರುಕಟ್ಟೆಯ ಮೇಲೆ ಎಷ್ಟರ ಮಟ್ಟಿಗೆ ಅವಲಂಬಿತವಾಗಿವೆ?
6. ರೈತರು ಉತ್ಪಾದಿಸಿದ ಉತ್ಪನ್ನಗಳಿಗೆ ಬೆಲೆ ನಿಗದಿಯಾಗುವಾಗ ಸರ್ಕಾರದ ಪಾತ್ರ ಏನು?

ಹೀಗೆಯೇ ಇನ್ನೂ ಅನೇಕ ರೀತಿಯ ರೈತರ ಕುರಿತಾದ ಮತ್ತು ರೈತರು ಉತ್ಪಾದಿಸಿದ ಉತ್ಪನ್ನಗಳ ಮಾರಾಟದ ಹಾಗೂ ರೈತರ ಕುರಿತು ಸರ್ಕಾರದ ನಿಲುವುಗಳನ್ನು ತಿಳಿದುಕೊಳ್ಳಲು ಈ ಒಂದು ಸಂಶೋಧನೆಯು ಬಹಳ ಪ್ರಮುಖವಾಗಿದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನದ ನಿರ್ದಿಷ್ಟ ಉದ್ದೇಶಗಳು ಇಂತಿವೆ.

## ಅಧ್ಯಯನದ ಉದ್ದೇಶಗಳು

1. ಗ್ರಾಮೀಣ ಕೃಷಿ ಮತ್ತು ತೋಟಗಾರಿಕೆ ಕೃಷಿ ಮಾರುಕಟ್ಟೆಯ ಕುರಿತಾಗಿ ಕೇಂದ್ರದ ಮತ್ತು ರಾಜ್ಯದ ನೀತಿ ಮತ್ತು ಕಾರ್ಯಕ್ರಮಗಳನ್ನು ಅವಲೋಕನ ಮಾಡುವುದು.
2. ತೋಟಗಾರಿಕೆ ಕೃಷಿ ಮಾರುಕಟ್ಟೆಯ ಸರ್ಕಾರಿ ನೀತಿ ನಿಯಮಗಳ ಕಾರ್ಯಾಚರಣೆಯ ಸಮಸ್ಯೆ ಮತ್ತು ಸವಾಲುಗಳನ್ನು ಅರ್ಥ ಮಾಡಿಕೊಳ್ಳವುದು.
3. ತೋಟಗಾರಿಕೆ ಕೃಷಿ ಮಾರುಕಟ್ಟೆಯ ನೀತಿಗಳು ಮತ್ತು ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರದಿರಲು ಕಾರಣಗಳನ್ನು ಶೋಧಿಸುವುದು.
4. ಗ್ರಾಮೀಣ ತೋಟಗಾರಿಕೆ ಕೃಷಿ ಮಾರುಕಟ್ಟೆಯ ನೀತಿ ನಿಯಮಗಳ ಸುಧಾರಣೆಗೆ ಸೂಕ್ತ ಸಲಹೆಗಳನ್ನು ಶಿಫಾರಸ್ಸುಗಳನ್ನು ಸೂಚಿಸುವುದು.

## ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನ ವಿಧಾನವು ಎಂಪೆರಿಕಲ್ ಮಾದರಿಯ ಅಧ್ಯಯನವಾಗಿದೆ. ಸಂಶೋಧನ ಅಧ್ಯಯನಕ್ಕೆ ಪೂರಕವಾಗಿ ಉದ್ದೇಶಗಳನ್ನು ವಿಶ್ಲೇಷಣೆಗೆ ಒಳಪಡಿಸಲು ವಿವಿಧ ರೀತಿಯ ಮಾಹಿತಿಯ ಅಗತ್ಯತೆ ಇದೆ. ಹಾಗಾಗಿ ಅಧ್ಯಯನಕ್ಕೆ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ಮೂಲಕ ಮಾಹಿತಿಯನ್ನು ವಿವಿಧ ಗ್ರಂಥಾಲಯಗಳಿಗೆ ಭೇಟಿ ನೀಡಿ ಪ್ರಕಟಿತ ಮತ್ತು ಅಪ್ರಕಟಿತ ವರದಿಗಳು, ಸಂಶೋಧನೆಯ ಪ್ರಬಂಧಗಳನ್ನು, ಆನ್‌ಲೈನ್ ಪತ್ರಿಕೆಗಳಲ್ಲಿನ ಲೇಖನಗಳನ್ನು,

ದಿನ ಪತ್ರಿಕೆಯ ವರದಿಗಳನ್ನು ಮತ್ತು ಅಂತರ್‌ಜಾಲ ತಾಣದಿಂದ ಸಂಶೋಧನೆಗೆ ಅವಶ್ಯವಿರುವ ಮಾಹಿತಿಯನ್ನು ಸಂಗ್ರಹಿಸಿರುತ್ತೇನೆ. ಉದ್ದೇಶಕ್ಕನುಗುಣವಾಗಿ ಮೊದಲನೆಯ ಉದ್ದೇಶಕ್ಕೆ ಪೂರಕವಾಗಿ ಆನುಷಂಗಿಕ ವಿಧಾನಗಳಾದ ಪ್ರಕಟಿತ ಮತ್ತು ಅಪ್ರಕಟಿತ ವರದಿಗಳು, ಲೇಖನಗಳು, ಸರಕಾರದ ದಾಖಲೆಗಳು, ಸಂಶೋಧನೆಯ ಲೇಖನಗಳು, ಸರಕಾರವು ರೈತರ ಯೊಗಕ್ಷೇಮಕ್ಕಾಗಿ ಜಾರಿ ಮಾಡಿದ ಯೋಜನೆಯ ವರದಿಗಳು ಮತ್ತು ವಿವಿಧ ಸಮಿತಿಗಳು ರೈತರಿಗೆ ಅನೂಕೂಲವಾಗಲು ಮಾಡಿರುವ ಶಿಫಾರಸ್ಸು ವರದಿಗಳನ್ನು ಬಳಸಿಕೊಳ್ಳಲಾಗಿದೆ. ಎರಡು ಮತ್ತು ಮೂರನೆಯ ಉದ್ದೇಶಗಳಿಗೆ ಅನುಗುಣವಾಗಿ ಪ್ರಾಥಮಿಕ ವಿಧಾನಗಳಾದ ಗುಣಾತ್ಮಕ ಮತ್ತು ಪರಿಮಾಣಾತ್ಮಕ ತಂತ್ರಗಳನ್ನು ಬಳಸಿಕೊಂಡು ಸಂಶೋಧನೆಯ ಪ್ರದೇಶದಲ್ಲಿನ ರೈತ ಕುಟುಂಬಗಳನ್ನು ಸಂದರ್ಶಿಸಿ ಉದ್ದೇಶಕ್ಕನುಗುಣವಾಗಿ ಮಾಹಿತಿಯನ್ನು ಕಲೆಹಾಕಲಾಗಿದೆ. ಕ್ಷೇತ್ರಕಾರ್ಯದಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಿವಿಧ ರೀತಿಯ ರೈತರನ್ನು ಭೆಟ್ಟಿಯಾಗಿ ಪ್ರಶ್ನಾವಳಿ ಮೂಲಕ ಅವರು ಹೊಂದಿರುವ ಕೃಷಿ ಹಿಡುವಳಿ ಭೂಮಿ, ಆದಾಯದ ಮೂಲ, ಒಟ್ಟು ಆದಾಯ, ರೈತರು ಉತ್ಪಾದಿಸುವ ಪ್ರಮುಖ ಬೆಳೆಗಳು ಮತ್ತು ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸುವ ಮತ್ತು ಮಾರುವ ಕುರಿತು ಹಾಗೂ ಸರ್ಕಾರದಿಂದ ರೈತರಿಗೆ ದೊರೆಯುವ ಸೌಲಭ್ಯಗಳ ಮೇಲೆ ರೈತರು ಎಷ್ಟು ಅವಲಂಬಿತವಾಗಿದ್ದಾರೆ, ಹಾಗೆಯೇ ಸರ್ಕಾರದ ಯೋಜನೆಗಳು ರೈತರಿಗೆ ಅನೂಕೂಲವಾಗಿವೆಯೇ ಎನ್ನುವ ಹಲವು ವಿಚಾರಗಳನ್ನು ತಿಳಿದುಕೊಳ್ಳಬಹುದು. ಅಲ್ಲದೆ ಕೊನೆಯ ಉದ್ದೇಶಕ್ಕಾಗಿ ಮಹಾಪ್ರಬಂಧದಲ್ಲಿ ಪ್ರತ್ಯೇಕ ಅಧ್ಯಾಯವನ್ನು ರಚಿಸಿದ್ದು, ಅ ಅಧ್ಯಾಯದಲ್ಲಿ ಸಂಶೋಧನೆಯ ಫಲಿತಗಳನ್ನು, ಸಲಹೆ ಸೂಚನೆಗಳನ್ನು, ಕೋಷ್ಟಕಗಳನ್ನು, ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.

ಕ್ಷೇತ್ರಗಳ ಆಯ್ಕೆಗಾಗಿ ಪ್ರಸ್ತುತ ಅಧ್ಯಯನವು ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನದ ಕ್ಷೇತ್ರವಾಗಿ ಆಯ್ದುಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯು ತುಂಗಭದ್ರಾ ನೀರಾವರಿ ಯೋಜನೆಯ ನಂತರವೂ, ಕೃಷಿಯಲ್ಲಿ ಹೆಚ್ಚಿನ ಬದಲಾವಣೆಯಾಗದೆ, ಇಂದಿಗೂ ಜಿಲ್ಲೆಯಲ್ಲಿ ಕೃಷಿನಿರತ ರೈತರು ಮತ್ತು ಕೂಲಿಗಳು ಗುಳೆ ಹೋಗುತ್ತಿದ್ದಾರೆ. ಅಲ್ಲದೆ ನಂಜುಂಡಪ್ಪ ಸಮಿತಿಯ ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆಯು ಕೃಷಿ ಉತ್ಪಾದನೆಯಲ್ಲಿ ಹಿಂದುಳಿದ ಜಿಲ್ಲೆಯಾಗಿದೆ. ನಾನು ಮೂಲತಃ ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿದ್ದು ನಮ್ಮ ಮುತ್ತಾತನ ಕಾಲದಿಂದಲೂ ನಮ್ಮ ಕುಟುಂಬದಲ್ಲಿ ಕೃಷಿಯನ್ನೇ ಮಾಡುತ್ತಿದ್ದಾರೆ. ಹಾಗಾಗಿ ವಿಷಯದ ಆಯ್ಕೆ ಮತ್ತು ಕ್ಷೇತ್ರ ಆಯ್ಕೆಗಳು ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿಯಾಗಿದೆ.[31] ಅಲ್ಲದೆ ನಂಜುಂಡಪ್ಪ ವರದಿಯಲ್ಲಿ ಜಿಲ್ಲೆಯು ಕೃಷಿಯಲ್ಲಿ ಹಿಂದುಳಿದ ಕ್ಷೇತ್ರವಾಗಿದೆ. ಈ ಅಂಶದಿಂದಲೂ ಸಂಶೋಧನ ಅಧ್ಯಯನದ ಕ್ಷೇತ್ರವಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ದುಕೊಂಡಿದ್ದು, ಹಾಗೆಯೇ ನಂಜುಂಡಪ್ಪ ಸಮಿತಿ

ವರದಿಯ ಆಧಾರದ ಮೇಲೆ ಎರಡು ಗ್ರಾಮಗಳನ್ನು ಅಧ್ಯಯನಕ್ಕೆ ಒಳಪಡಿಸಿರುತ್ತೇನೆ. ಗ್ರಾಮಗಳ ಆಯ್ಕೆಯೂ ಜಿಲ್ಲೆಯ ಎರಡು ತಾಲೂಕಗಳಿಂದ ಕೃಷಿ ಮತ್ತು ತೋಟಗಾರಿಕೆ ಕೃಷಿಯನ್ನು ಗಣನೆಗೆ ಒಳಪಡಿಸಿ ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ತಾಲೂಕುಗಳ ಆಯ್ಕೆಯು ನಂಜುಡಪ್ಪ ಸಮಿತಿ ವರದಿಯ ಆಧಾರದ ಮೇಲೆ ಹಿಂದುಳಿದ ಮತ್ತು ಅಭಿವೃದ್ಧಿ ಹೊಂದಿದ ತಾಲೂಕುಗಳಾದ ಅನುಗುಣವಾಗಿ ಸಂಡೂರು ಮತ್ತು ಬಳ್ಳಾರಿಯನ್ನು ಮತ್ತು ಗ್ರಾಮಗಳನ್ನು ಅನುಗುಣವಾಗಿ ಹೊಸಳ್ಳಿ ಗ್ರಾಮ ಮತ್ತು ಹೊನ್ನಳ್ಳಿ ಗ್ರಾಮಗಳನ್ನು ಆಯ್ದುಕೊಂಡಿರುವೆ.

ಕುಟುಂಬಗಳ ಆಯ್ಕೆ ಅಧ್ಯಯನಕ್ಕೆ ಬೇಕಾಗಿರುವ ಒಟ್ಟು ಕುಟುಂಬಗಳನ್ನು ಸಂಖ್ಯಾಶಾಸ್ತ್ರೀಯ ವಿಧಾನವನ್ನು ಅಳವಡಿಸಿಕೊಂಡು ವ್ಯವಸ್ಥಿತ ಯಾದೃಚ್ಛಿಕ ಮಾದರಿಯ(ಸಿಸ್ಟ್‌ಮೆಟಿಕ್ ರ‍್ಯಾಂಡಮ್ ಸ್ಯಾಂಪಲ್) ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ. ಅನಂತರದಲ್ಲಿ ಆಯ್ಕೆ ಮಾಡಿಕೊಂಡ ಕುಟುಂಬಗಳನ್ನು ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಸಂಶೋಧನಗೆ ಬೇಕಾದ ಮಾಹಿತಿಯನ್ನು ಕಲೆಹಾಕಲಾಗಿದೆ.[32] ಇದಕ್ಕೂ ಮೊದಲು ಮಾರ್ಗದರ್ಶಕರೊಂದಿಗೆ ಚರ್ಚಿಸಿ ಕ್ಷೇತ್ರಕಾರ್ಯಕ್ಕೆ ಮುಖ್ಯವಾಗಿ ಅವಶ್ಯವಿರುವ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಂಡು ಬಳ್ಳಾರಿ ಜಿಲ್ಲೆಯ ಹರೆಗೊಂಡನಹಳ್ಳಿ ಮತ್ತು ತಾರಾನಗರ ಗ್ರಾಮಗಳಲ್ಲಿ ಪ್ರಶ್ನಾವಳಿಯನ್ನು ಪೂರ್ವಪರಿಕ್ಷೆಗೆ(Pre-test) ಒಳಪಡಿಸಲಾಗಿತ್ತು, ಅನಂತರದಲ್ಲಿ ಪೂರ್ವಪರಿಕ್ಷೆಯ ಸಂದರ್ಭದಲ್ಲಿ ಬಂದ ಮಾಹಿತಿಯನ್ನು ಗುಣವಾಗಿ ಪ್ರಶ್ನಾವಳಿಯನ್ನು ಬದಲಾವಣೆಗೊಳಪಡಿಸಿ ಪೂರ್ಣಪ್ರಮಾಣದ ಕ್ಷೇತ್ರಕಾರ್ಯವನ್ನು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಮತ್ತು ಸಂಡೂರು ತಾಲೂಕಿನ ಹೊಸಹಳ್ಳಿಗ್ರಾಮಗಳಲ್ಲಿ ಕೈಗೊಂಡು ಮಾಹಿತಿಯನ್ನು ಕಲೆಹಾಕಲಾಗಿದೆ.

ರೈತ ಕುಟುಂಬಗಳನ್ನು ಈ ಕೆಳಗಿನಂತೆ ಆಯ್ಕೆ ಮಾಡಿಕೊಳ್ಳಲಾಗಿದೆ, ಗ್ರಾಮದಲ್ಲಿರುವ ಒಟ್ಟು ರೈತ ಕುಟುಂಬಗಳನ್ನು ನನ್ನ ಅಧ್ಯಯನಕ್ಕೆ ಬೇಕಾದ ಕುಟುಂಬಗಳ ಸಂಖ್ಯೆಯಿಂದ ಭಾಗಿಸಿದಾಗ ಬರುವ(ಉತ್ತರವನ್ನು) ಅಂತರ ಅಥವಾ ಇಂಟರವೆಲ್(Interval) ತೆಗೆದುಕೊಂಡು ಗ್ರಾಮದ ಒಂದು ಮೂಲೆಯಲ್ಲಿಯ ಬಲಭಾಗದಲ್ಲಿನ ರೈತರ ಮನೆಯನ್ನು ಆಯ್ಕೆ ಮಾಡಿಕೊಂಡು ಗಡಿಯಾರ(ಕ್ಲಾಕ್ ವೈಸ್ ಡೈರೆಕ್ಷನ್) ತಿರುಗುವ ಹಾಗೆ ವ್ಯವಸ್ಥಿತವಾಗಿ ಒಂದೇ ದಿಕ್ಕಿನಲ್ಲಿ ಬರುವ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಸಂಶೋಧಕರ ಭೇಟಿಯ ಸಮಯದಲ್ಲಿ ಲಭ್ಯವಿದ್ಧ ಕುಟುಂಬದ 16 ವರ್ಷಕ್ಕಿಂತ ಹೆಚ್ಚಿನ ವಯಸ್ಸಿನ ಕುಟುಂಬದ ಸದಸ್ಯರಿಗೆ ಪ್ರಶ್ನೆಗಳನ್ನು ಕೇಳಿ ಮಾಹಿತಿಯನ್ನು ಕಲೆಹಾಕಿರುತ್ತೇನೆ. ಮಾಹಿತಿ ಕಲೆಹಾಕುವ ಈ ವಿಧಾನವನ್ನು ಸಂಪೂರ್ಣ ನನ್ನ ಅಧ್ಯಯನದ ಕ್ಷೇತ್ರಕಾರ್ಯಕ್ಕೆ ಬಳಸಿಕೊಳ್ಳಲಾಗಿದೆ. ಕೇತ್ರಕಾರ್ಯದ ಜೊತೆಗೆ ಮಾಹಿತಿ ಕಲೆಹಾಕಿದ ಪ್ರಶ್ನಾವಳಿಗಳನ್ನು ತೆಗೆದುಕೊಂಡು ಮುಕ್ತವಾದ(ಓಪನ್ ಎಂಡೆಡ್) ಅಥವಾ

ಮುಚ್ಚಲ್ಪಟ್ಟಿರುವ(ಕ್ಲೋಸಡ್ ಎಂಡೆಡ್) ಪ್ರಶ್ನೆಗಳಿಗೆ ಸಂಕೇತಗಳನ್ನು ಕೊಡುತ್ತಾ ಅವುಗಳನ್ನು ಎಸ್ಪಿಎಸ್‌ಎಸ್ ಮತ್ತು ಎಂಎಸ್ ಎಕ್ಸೆಲ್‌ನಲ್ಲಿ ದಾಖಲಿಸಿ ಮಾಹಿತಿಯನ್ನು ದಾಖಲಿಸಿ ಏಕಾಂಶ ಮತ್ತು ತುಲನಾತ್ಮಕ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಪರಿಮಾಣತ್ಮಕದ ಮಾಹಿತಿಯೊಂದಿಗೆ ಕ್ಷೇತ್ರಕಾರ್ಯವನ್ನು ಮಾಡುವಾಗ ಕೆಲವೊಂದು ಗುಣಾತ್ಮಕ ವಿಧಾನಗಳಾದ ಗ್ರಹಿಕೆ, ಕುಟುಂಬಗಳೊಂದಿಗಿನ ಚರ್ಚೆಯ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಸೇರಿಸಿ ಅಧ್ಯಯನದಲ್ಲಿ ವಿಶ್ಲೇಷಣೆಯನ್ನು ಮಾಡಲಾಗಿದೆ.

ಮಾಹಿತಿ ಸಂಗ್ರಹಣೆ ಅಧ್ಯಯನಕ್ಕೆ ಮಾಹಿತಿ ಸಂಗ್ರಹಣೆಯ ಸಂಶೋಧನೆಯ ಎರಡು ವಿಧಾನಗಳನ್ನು ಬಳಸಿಕೊಂಡಿದ್ದೇನೆ. ಒಂದು ಪ್ರಾಥಮಿಕ ಮಾಹಿತಿ ಸಂಗ್ರಹಣೆ, ಎರಡನೆಯದು ದ್ವಿತೀಯ ಮಾಹಿತಿ ಸಂಗ್ರಹಣೆ. ಅಧ್ಯಯನಕ್ಕೆ ಅವಶ್ಯಕವಾದ ದತ್ತಾಂಶಗಳನ್ನು ಕಲೆಹಾಕಲು ಪ್ರಾಥಮಿಕ ವಿಧಾನದಲ್ಲಿ ಪ್ರಶ್ನಾವಳಿ ಪದ್ಧತಿಯನ್ನು ಆಯ್ಕೆ ಮಾಡಿಕೊಂಡಿದ್ದು, ಪ್ರಶ್ನಾವಳಿಯನ್ನು ರಚನಾತ್ಮಕವಾಗಿ ಸಿದ್ಧಪಡಿಸಿದ್ದು, ನಿರ್ದಿಷ್ಟ ವಿಷಯದ ಮಾಹಿತಿ ಸಂಗ್ರಹಣೆಯನ್ನೊಳಗೊಂಡಿದೆ. ಪ್ರಶ್ನಾವಳಿಯಲ್ಲಿ ರೈತರಿಗೆ ಸಂಬಂಧಿಸಿದಂತೆ ಸಾಮಾಜಿಕ ಹಿನ್ನೆಲೆ, ವಿದ್ಯಾಭ್ಯಾಸದ ಮಟ್ಟ, ಆರ್ಥಿಕ ಪರಿಸ್ಥಿತಿ, ಆದಾಯದ ಮೂಲ ಮತ್ತು ಪ್ರಮುಖವಾಗಿ ರೈತರ ಸ್ವಂತ ಕೃಷಿ ಭೂಮಿ, ಗೇಣಿಗೆ ಮಾಡುತ್ತಿರುವ ಕೃಷಿಭೂಮಿ, ಕೃಷಿನೀರಾವರಿ, ಕೃಷಿಗೆ ಹಣಕಾಸಿನ ಮೂಲ, ಕೃಷಿ ಮಾರುಕಟ್ಟೆಯ ಕುರಿತಾದ ಮಾಹಿತಿ, ತೋಟಗಾರಿಕೆ ಕೃಷಿಯ ಯೋಜನೆಗಳು, ಕೃಷಿ ಉತ್ಪನ್ನ ಸಾಗಣೆಯ ಮತ್ತು ರೈತರಿಗೆ ಅವಶ್ಯಕವಾಗಿರುವ ಮೂಲಭೂತ ಸೌಕರ್ಯಗಳನ್ನು ಒಳಗೊಂಡಿದೆ. ದ್ವಿತೀಯ ಮಾಹಿತಿ ಸಂಗ್ರಹಣೆಯಲ್ಲಿ ಅವಶ್ಯಕವಾದ ಮಾಹಿತಿಯನ್ನು ಪುಸ್ತಕಗಳಿಂದ, ನಿಯತಕಾಲಿಕೆಗಳಿಂದ, ವರ್ಕಿಂಗ್ ಪೇಪರ್ಸ್, ಪ್ರಕಟಿಸಿದ ವರದಿಗಳಿಂದ, ಹಸ್ತಪ್ರತಿಗಳಿಂದ ಮತ್ತು ಇಂಟರ್‌ನೆಟ್‌ನಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಮಾದರಿ ವಿನ್ಯಾಸಗಳು ಪ್ರಸ್ತುತ ಅಧ್ಯಯನವು ತೋಟಗಾರಿಕೆ ಕೃಷಿ ಮಾರುಕಟ್ಟೆಯನ್ನು ಅಧ್ಯಯನ ಮಾಡುವುದಾಗಿದ್ದು, ಕರ್ನಾಟಕದ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ನಂಜುಡಪ್ಪ ಸಮಿತಿಯ ವರದಿಯ ಆಧಾರದ ಮೇಲೆ ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳಾದ ಸಂಡೂರು ಮತ್ತು ಬಳ್ಳಾರಿಯನ್ನು ಆಯ್ದುಕೊಂಡಿದೆ. ಪ್ರಸ್ತುತ ತಾಲ್ಲೂಕುಗಳಲ್ಲಿನ ಎರಡು ಗ್ರಾಮಗಳಾದ ಹೊಸಹಳ್ಳಿ ಮತ್ತು ಹೊನ್ನಳ್ಳಿ ನನ್ನ ಕ್ಷೇತ್ರ ಕಾರ್ಯಕ್ಕೆ ಆಯ್ದುಕೊಂಡಿದ್ದೇನೆ. ಈ ಗ್ರಾಮಗಳು ಪ್ರಧಾನವಾಗಿ ಹಿಂದಿನಿಂದಲೂ ಕೃಷಿಯನ್ನೇ ಮೂಲ ಕಸುಬನ್ನಾಗಿ ಮಾಡಿಕೊಂಡಿವೆ. ಎರಡು ಗ್ರಾಮಗಳಲ್ಲಿಯೂ ಸರಾಸರಿ 3000–4000 ಜನಸಂಖ್ಯೆಯಿಂದ ಕೂಡಿದ್ದು, ಹೆಚ್ಚಿನ ಜನರು ಇಂದಿಗೂ ಕೃಷಿಯನ್ನೇ ಅವಲಂಬಿಸಿದ್ದಾರೆ.

ಅಧ್ಯಯನಕ್ಕೆ ಪ್ರತಿ ಗ್ರಾಮದಿಂದಲೂ 60 ಮಾದರಿ ರೈತರನ್ನು ಆಯ್ದುಕೊಂಡಿದ್ದು, ರೈತರನ್ನು ಸಂದರ್ಶಿಸಲು ಅನುಕೂಲವಾಗುವಂತೆ ಪ್ರತಿ ಹಳ್ಳಿಯಲ್ಲಿ ರೈತರನ್ನು ಅವರ ಭೂಹಿಡುವಳಿಯ ಆಧಾರದ ಮೇಲೆ ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವು ದೊಡ್ಡ ಹಿಡುವಳಿದಾರರು, ಮಧ್ಯಮ ಹಿಡುವಳಿದಾರರು ಹಾಗೂ ಸಣ್ಣ ಹಿಡುವಳಿದಾರರು. ರೈತರನ್ನು ರ್‍ಯಾಂಡಮ್ ಆಗಿ ಆಯ್ಕೆ ಮಾಡಿಕೊಂಡಿದ್ದೇನೆ ಕುಟುಂಬಗಳ ಆಯ್ಕೆಯನ್ನು ಸಂಪೂರ್ಣವಾಗಿ ಮೇಲೆ ವಿವರಿಸಿದ್ದೇನೆ.

ದತ್ತಾಂಶಗಳ ವಿಶ್ಲೇಷಣೆ: ಪ್ರಸ್ತುತ ಅಧ್ಯಯನವು ದತ್ತಾಂಶಗಳನ್ನು ಸಹ ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಅಧ್ಯಯನದಲ್ಲಿ, ಬಳ್ಳಾರಿ ಜಿಲ್ಲೆಯ ತೋಟಗಾರಿಕೆ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆಯನ್ನು ಅಧ್ಯಯನ ಮಾಡುತ್ತಿದ್ದು, ಜಿಲ್ಲೆಯಲ್ಲಿ ಕೃಷಿ ಮಾರುಕಟ್ಟೆ ಕುರಿತಾದ ಮಾಹಿತಿ ಮತ್ತು ತೋಟಗಾರಿಕೆ ಇಲಾಖೆಯ ಯೋಜನೆಗಳು ರೈತರಿಗೆ ತಲುಪಿರುವ ಕುರಿತು ಮತ್ತು ಇಲಾಖೆಗಳಲ್ಲಿರುವ ಯೋಜನೆಗಳ ಸದ್ಬಳಕೆಯನ್ನು ಅರ್ಥ ಮಾಡಿಕೊಳ್ಳು ವುದಾಗಿದೆ. ಹಾಗಾಗಿ ರೈತರಿಗೆ ಸಂಬಂಧಿಸಿದಂತೆ ಸಾಮಾಜಿಕ, ಆರ್ಥಿಕ, ಇಂಡಿಕೇಟರ್ಸ್‌ಗಳನ್ನು ಬಳಸಿ ಪ್ರಸ್ತುತ ಅಧ್ಯಯನಕ್ಕೆ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಆಯ್ದ ರೈತರನ್ನು ಸಂದರ್ಶಿಸಲಾಗಿದೆ. ಸಂದರ್ಶನದ ಮೂಲಕ ಕಲೆ ಹಾಕಿದ ಮಾಹಿತಿಯನ್ನು ಗಣಕಯಂತ್ರದ ಸಹಾಯದಿಂದ (ಸಿಂಪಲ್ ಪರ್‌ಸಂಟೇಜ್) ಶೇಕಡವಾರು ಕಂಡುಹಿಡಿದು ಪ್ರತಿಹಳ್ಳಿಯಲ್ಲಿರುವ ರೈತರ ಕುರಿತಾದ ಮಾಹಿತಿಯ ಸಾಮ್ಯತೆ ಮತ್ತು ವಿಭಿನ್ನತೆಯನ್ನು ಗ್ರಾಫ್‌ಗಳ ಬಳಕೆಯಿಂದ ಅರ್ಥೈಸಲಾಗಿದೆ. ಗ್ರಾಫ್‌ಗಳಲ್ಲಿ ಮುಖ್ಯವಾಗಿ ನಿಗದಿತ ರೀತಿಯ ಪೈ ಚಾರ್ಟ್, ಬಾರ್‌ಡಯಾಗ್ರಾಮ್‌ಗಳ ಮೂಲಕ ತೋರಿಸಲಾಗಿದೆ.

## ಅಧ್ಯಯನದ ಮಿತಿಗಳು

ಪ್ರಸ್ತುತ ಮಹಾ ಪ್ರಬಂಧವು ಕೆಲವು ಮಿತಿಗಳನ್ನು ಒಳಗೊಂಡಿದೆ, ಅಧ್ಯಯನದಲ್ಲಿ ಸ್ಯಾಂಪಲ್‌ನ ಪ್ರಮಾಣವು ಕೇವಲ ಎರಡು ಗ್ರಾಮಗಳನ್ನು ಒಳಗೊಂಡಿದೆ, ಸ್ಯಾಂಪಲ್ ಪ್ರಮಾಣದ ಆಧಾರದ ಮೇಲೆ ದೊರೆತ ಮಾಹಿತಿಯೂ ಕೆಲವೊಂದು ಸಲ ಸಂಪೂರ್ಣ ಅರ್ಹತೆಯನ್ನು ಹೊಂದುರುವುದಿಲ್ಲಾ ಯಾಕೆಂದರೆ ಪ್ರಶ್ನಾವಳಿಗೆ ಪ್ರತಿಕ್ರಿಯಿಸಿದವರು ಸಂಪ್ರದಾಯ ಮತ್ತು ಸಂಸ್ಕೃತಿಯ ಆಧಾರದ ಮೇಲೆಯೂ ಉತ್ತರಿಸಿರುತ್ತಾರೆ, ಅಲ್ಲದೆ ಅಧ್ಯಯನದಲ್ಲಿ ಬಳಸಿಕೊಂಡ ಕೆಲವೊಂದು ಅಧ್ಯಯನಗಳ ಲಿಟರೀಚರ್ ರಿವಿವ್ಯೂ ಮಾಹಿತಿಯೂ ಸಂಪೂರ್ಣ ಸತ್ಯಾಂಶಗಳನ್ನು ಹೊಂದಿರುವುದಿಲ್ಲಾ, ಹಾಗೂ ಸಂಶೋಧನೆಯ ಕ್ಷೇತ್ರ ಕಾರ್ಯಕ್ಕಾಗಿ, ಕೇವಲ ಬಳ್ಳಾರಿ ಜಿಲ್ಲೆಯನ್ನು ಆಯ್ದುಕೊಳ್ಳಲಾಗಿದೆ, ಅಲ್ಲದೆ ಕೃಷಿಯಲ್ಲಿಯೂ ಕೇವಲ ತೋಟಗಾರಿಕೆ ಕೃಷಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ, ಸಂಶೋಧಕರಿಗಿದ್ದ ಸೀಮಿತ ಅವಧಿ ಮತ್ತು ಸಂಪನ್ಮೂಲಗಳ ಕೊರತೆಯ ಹಿನ್ನೆಲೆಯಲ್ಲಿಯೂ ಕೇವಲ ಜಿಲ್ಲೆಯ ಎರಡು ತಾಲೂಕುಗಳ ಎರಡು ಗ್ರಾಮಗಳನ್ನು ಮಾತ್ರವೆ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸಂಶೋಧನೆಯೂ ಸಂಪೂರ್ಣವಾಗಿ ರೈತರು ಕೊಟ್ಟ ಮಾಹಿತಿಯ ಮೇಲೆ ಆಧಾರಿತವಾಗಿದೆ ಮತ್ತು ಪ್ರಕಟಿತ ಅಪ್ರಕಟಿತ ವರದಿಗಳು ಹಾಗೂ ವಿಶೇಷ ಸಮಿತ ವರದಿಗಳನ್ನು ಮೂಲವಾಗಿಟ್ಟುಕೊಂಡಿದೆ. ಅಲ್ಲದೆ ಅಧ್ಯಯನವನ್ನು ಎರಡು ತಾಲೂಕುಗಳಲ್ಲಿಯ ಹಳ್ಳಿಗಳನ್ನು ಕೇವಲ ತುಲಾನಾತ್ಮಕವಾಗಿ ನೋಡಲಾಗಿದೆ.

## ಅಧ್ಯಾಯಗಳ ವಿನ್ಯಾಸ

ಸಂಶೋಧನಾ ಮಹಾಪ್ರಬಂಧವು ಒಟ್ಟು ಐದು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳನ್ನು ಈ ಕೆಳಗಿನಂತೆ ವಿನ್ಯಾಸಗೊಳಿಸಲಾಗಿದೆ.

ಪ್ರಸ್ತಾವನೆ, ಸಂಶೋಧನೆ ಏನು, ಏಕೆ, ಹೇಗೆ, ಸಮಸ್ಯೀಕರಣ, ಅಧ್ಯಯನದ ಉದ್ದೇಶ, ಅಧ್ಯಯನದ ವಿಧಾನ, ಅಧ್ಯಯನದ ವ್ಯಾಪ್ತಿಯನ್ನು ಒಳಗೊಂಡಿದೆ.

1. **ಅಧ್ಯಾಯ ಒಂದು**: ಈ ಅಧ್ಯಾಯದಲ್ಲಿ ವ್ಯಾಪಾರ, ವ್ಯಾಪಾರದ ವಿವರಣೆ, ವ್ಯಾಪಾರದ ವಿಧಗಳನ್ನು ವಿವರಿಸಲಾಗಿದೆ. ಕೃಷಿ, ಗ್ರಾಮೀಣ, ಮಾರುಕಟ್ಟೆ, ತೋಟಗಾರಿಕೆ ಕುರಿತು ದೇಶೀಯ ಮತ್ತು ರಾಜ್ಯಮಟ್ಟದಲ್ಲಿ ಈ ಹಿಂದೆ ಆದಂತಹ ಸಂಶೋಧನೆಗಳನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಸಮಸ್ಯೀಕರಿಸಲಾಗಿದೆ.

2. **ಅಧ್ಯಾಯ ಎರಡು**: ಈ ಅಧ್ಯಾಯದಲ್ಲಿ ಜಿಲ್ಲೆಯಲ್ಲಿ ಕೈಗೊಂಡ ಜಿಲ್ಲೆಯ ತಾಲೂಕಿನ ಗ್ರಾಮಗಳ ಕ್ಷೇತ್ರ ಪರಿಚಯವನ್ನು ವಿವರಿಸಲಾಗಿದೆ. ಜಿಲ್ಲೆಯಲ್ಲಿ ಪ್ರಮುಖವಾಗಿ ಬೆಳೆಯುವ ಉತ್ಪನ್ನಗಳನ್ನು ಅಧ್ಯಯನ ಕೈಗೊಂಡ ತಾಲೂಕುಗಳ ಸಾಮಾಜಿಕ, ಜನಸಂಖ್ಯೆ, ಆರ್ಥಿಕ, ಶೈಕ್ಷಣಿಕ ಸವಲತ್ತುಗಳು, ಭೌಗೋಳಿಕ ಲಕ್ಷಣಗಳನ್ನು ನೋಡಬಹುದಾಗಿದೆ.

3. **ಅಧ್ಯಾಯ ಮೂರು**: ಗ್ರಾಮೀಣ ಕೃಷಿ ಮತ್ತು ತೋಟಗಾರಿಕೆ, ಕೃಷಿ ಮಾರುಕಟ್ಟೆಯ ಕುರಿತಾಗಿ ಕೇಂದ್ರದ ಮತ್ತು ರಾಜ್ಯದ ನೀತಿ ಮತ್ತು ಕಾರ್ಯಕ್ರಮಗಳನ್ನು ಅವಲೋಕನ ಮಾಡುವುದು. ಈ ಅಧ್ಯಾಯದಲ್ಲಿ ಮಾರುಕಟ್ಟೆಯ ಕುರಿತಾದ ಆಡಳಿತಾತ್ಮಕ ಹಾಗೂ ಭೌತಿಕ ಸಂಸ್ಥೆಗಳನ್ನು ಅಧ್ಯಯನ ಮಾಡಲಾಗಿದೆ.

4. **ಅಧ್ಯಾಯ ನಾಲ್ಕು**: ಕೃಷಿ ಮಾರುಕಟ್ಟೆಯ ಕುರಿತಾಗಿ ಇರುವ ಸರ್ಕಾರದ ನೀತಿ ನಿಯಮಗಳ ಪಾಲನೆಯನ್ನು, ಮಾರುಕಟ್ಟೆಯ ಸೇವೆ ಸೌಲಭ್ಯಗಳು ಮತ್ತು ಮಾರಾಟ ಮಾಡುವ ವಿಧಾನಗಳನ್ನು ಕ್ಷೇತ್ರಕಾರ್ಯದ ಮುಖಾಂತರ ಕಲೆ ಹಾಕಿದ ಅಂಕಿ ಅಂಶಗಳೊಂದಿಗೆ ವಿಶ್ಲೇಷಿಸುವುದು.

5. **ಅಧ್ಯಾಯ ಐದು:** ತೋಟಗಾರಿಕೆ ಇಲಾಖೆಯ ಯೋಜನೆಗಳನ್ನು, ರೈತರು ಕೃಷಿ ಉತ್ಪನ್ನಗಳನ್ನು ಸಾಗಿಸಲು ಬಳಸುವ ವಾಹನಗಳನ್ನು, ಕೃಷಿ ಸಾಲದ ಮೂಲಗಳು ಮತ್ತು ನೀತಿ ನಿಯಮಗಳು, ಹಾಗೂ ಬೆಳೆ ನಷ್ಟವಾದಗ ರೈತರಿಗಿರುವ ನೀತಿ ನಿಯಮಗಳನ್ನು ಕ್ಷೇತ್ರಕಾರ್ಯದ ಮೂಲಕ ಕಲೆ ಹಾಕಿದ ಅಂಕಿ ಅಂಶಗಳ ಮೂಲಕ ವಿಶ್ಲೇಷಿಸುವುದು.

## ಸಮಾರೋಪ

ಗ್ರಾಮೀಣ ತೋಟಗಾರಿಕೆ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆಗೆ ಸಂಬಂಧಿಸಿದ ಅಧ್ಯಯನ ಇದಾಗಿದೆ. ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ ಕೈಗೊಳ್ಳಲಾಗುವ ಅಧ್ಯಯನವು ಕ್ಷೇತ್ರಕಾರ್ಯ, ಸಂದರ್ಶನ ಮತ್ತು ಪ್ರಶ್ನಾವಳಿಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಹೀಗೆ ಸಂಗ್ರಹಿಸಿದ ದತ್ತಾಂಶವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ, ವ್ಯಾಖ್ಯಾನಿಸುವ, ಕ್ರೋಡೀಕರಿಸುವ ಮತ್ತು ಅರ್ಥೈಸುವ ಪ್ರಯತ್ನ ಮಾಡಲಾಗಿದ್ದು, ಕೃಷಿಯೇ ಪ್ರಧಾನವಾದ ನಮ್ಮ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಕೃಷಿ ಮಾರುಕಟ್ಟೆಗಳ ಸ್ಥಿತಿಯು ಪರಿವರ್ತನೆಯ ಹಂತದಲ್ಲಿದೆ. ಕೃಷಿ ಉತ್ಪನ್ನಗಳು ರೈತನ ಹೊಲಗಳಿಂದ, ಮಧ್ಯವರ್ತಿಗಳಿಂದ, ದಲ್ಲಾಳಿಗಳಿಂದ ಮಾರುಕಟ್ಟೆಯನ್ನು ಪ್ರವೇಶಿಸಿ ಬಳಕೆದಾರನಿಗೆ ಅಧಿಕ ದರದಲ್ಲಿ ಬಿಕರಿಯಾಗುತ್ತವೆ. ಆದರೆ ರೈತನಿಗೆ ಮಾತ್ರ ವೈಜ್ಞಾನಿಕವಾದ ಬೆಲೆ ಮಾರುಕಟ್ಟೆಯಲ್ಲಿ ಸಿಗುವುದೇ ಇಲ್ಲ. ಅದಕ್ಕೆ ಬದಲಾಗಿ ರೈತರಿಗೆ ಮಾರುಕಟ್ಟೆಯಲ್ಲಿ ಸಿಗುವ ರಾಸಾಯನಿಕ ಗೊಬ್ಬರಗಳಾಗಲಿ, ಕ್ರಿಮಿನಾಶಕಗಳಾಗಲೀ, ಆಧುನಿಕ ಕೃಷಿ ಯಂತ್ರೋಪಕರಣಗಳಾಗಲೀ, ಸಂಘಟಿತ ವಲಯದಿಂದ, ವೈಜ್ಞಾನಿಕವಾದ ಬೆಲೆ ನಿಗದಿಗೊಂಡೇ ಕೃಷಿಕರಿಗೆ ತಲುಪುತ್ತವೆ. ಈ ಅಧ್ಯಯನದ ಭಾಗದಲ್ಲಿ ಕೃಷಿ ಮಾರುಕಟ್ಟೆಯ ವಿವರದೊಂದಿಗೆ, ಗ್ರಾಮೀಣ ಮಾರುಕಟ್ಟೆಯನ್ನು ಅರ್ಥೈಸಿಕೊಳ್ಳಲಾಗಿದೆ. ತೋಟಗಾರಿಕೆ ಕೃಷಿಯಲ್ಲಿ ರೈತರು ಎದುರಿಸುತ್ತಿರುವ ಸಮಸ್ಯೆಗಳೊಂದಿಗೆ, ಒಟ್ಟಾರೆ ಕೃಷಿ ಮಾರುಕಟ್ಟೆಗೆ ಸಂಬಂಧಿಸಿದ ಅಧ್ಯಯನಗಳ ವಿಮರ್ಶೆಯೊಂದಿಗೆ ಅಧ್ಯಯನದ ಉದ್ದೇಶಗಳನ್ನು ಕಂಡುಕೊಳ್ಳಲಾಗಿದೆ.

ಸರ್ಕಾರವು ಕೃಷಿನಿರತ ಜನತೆಯನ್ನು ಗಮನದಲ್ಲಿಟ್ಟುಕೊಂಡು ಮತ್ತು ಕೃಷಿಯು ದೇಶದ ಆರ್ಥಿಕತೆಯಲ್ಲಿ ವಹಿಸುತ್ತಿರುವ ಪ್ರಮುಖ ಪಾತ್ರವನ್ನು ಅರಿತು, ಕಾಲ ಕಾಲಕ್ಕೆ ರೈತರಿಗೆ ಅನುಕೂಲವಾಗುವ ಯೋಜನೆಗಳನ್ನು ಬಿಡುಗಡೆ ಮಾಡಬೇಕು ಮತ್ತು ಯೋಜನೆಗಳ ಫಲವನ್ನು ಸರಿಯಾಗಿ ರೈತರಿಗೆ ತಲುಪುವಂತೆ ಮಾಡಬೇಕು ಎನ್ನುವ ಆಶಯವನ್ನು ಅಧ್ಯಯನದ ಮೂಲಕ ಹೇಳಲು ಇಚ್ಛಿಸಲಾಗಿದೆ. ಯಾಕೆಂದರೆ ಅಧ್ಯಯನವನ್ನು ಕೈಗೊಂಡ ಸಂದರ್ಭದಲ್ಲಿ, ಅಧ್ಯಯನದಿಂದ ತಿಳಿದುಬಂದ ಅಂಶವೇನೆಂದರೆ, ಸರ್ಕಾರವೂ ಅನೇಕ ರೈತರಪರ ಅಭಿವೃದ್ಧಿ ಯೋಜನೆಗಳನ್ನು ಪ್ರತಿ ಹಣಕಾಸಿನ ವರ್ಷ ಬಿಡುಗಡೆ ಮಾಡುತ್ತದೆ. ಆದರೆ ಯೋಜನೆಗಳು

ಸಮರ್ಪಕವಾಗಿ ರೈತರಿಗೆ ತಲುಪುತ್ತಿಲ್ಲ ಎನ್ನುವುದಾಗಿದೆ. ಹಾಗಾಗಿ, ಈ ನಿಟ್ಟಿನಲ್ಲಿ ಸರ್ಕಾರವು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ.

## ಕೊನೆಟಿಪ್ಪಣಿಗಳು


1. ಅಗ್ರಿಕಲ್ಚರಲ್ ಮಾರ್ಕೆಟಿಂಗ್, www.kar.horti.nic.in, www.agriculture.tn.nic.in, www. tnagmark.tn.nic.in.
2. ಬಿ.ಎಸ್.ರಾಮನ್, "*ಮಾರ್ಕೇಟಿಂಗ್ ಮ್ಯಾನೇಜ್‌ಮೆಂಟ್*", ಮಂಗಳೂರು, ಯುನೈಟೆಡ್ ಪಬ್ಲಿಕೇಶನ್ಸ್, 2004, ಪು.ಸಂ.1–8–13.
3. ಡಿಸೆಂಬರ್ 1 ಮತ್ತು 2ನೇ ತಾರೀಕಿನಂದು ಬೆಂಗಳೂರಿನಲ್ಲಿ ನಡೆದ ಕೃಷಿ ಶೃಂಗಸಭೆಗೆ ಪೂರಕವಾಗಿ ಕರ್ನಾಟಕ ಸರ್ಕಾರವು "ಕೃಷಿ ಕ್ಷೇತ್ರವನ್ನು ಸುಸ್ಥಿರಗೊಳಿಸಿ ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ಕುರಿತು ತನ್ನ ಉದ್ದೇಶವನ್ನು ಪ್ರಕಟಪಡಿಸಿತು(ಡಿಸೆಂಬರ್ 1 2011ರ ಪ್ರಜಾವಾಣಿ), ಪು.ಸಂ.1–2.
4. ಬಳ್ಳಾರಿ ಜಿಲ್ಲಾ ಪಂಚಾಯಿತಿ, "2011–12, 2012–13ರ ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ, ಕರ್ನಾಟಕ ಸರ್ಕಾರ, 2014, ಪು.ಸಂ.1–38.
5. ಹೆಚ್. ನಾಗರಾಜ ಶೆಟ್ಟಿ, "*ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ*", ಹುಬ್ಬಳ್ಳಿ, ಸಹನಾ ಪ್ರಕಾಶನ, 1995, ಪು.ಸಂ.32–40.
6. ಅದೇ ಪು.ಸಂ 56–58.
7. ಸಾರಾ, ಹ್ಯೂಮನ್ ಇನ್‌ಕಮ್ ಟ್ಯಾಪಿಂಗ್, ಇಂಡಿಯಾಸ್ ರೂರಲ್ ಮಾರ್ಕೆಟ್ ಜನರೇಟಿಂಗ್ ಪ್ರೋಜೆಕ್ಟ್ಸ್ ಇನ್ ರೂರಲ್ ಕಮ್ಯುನಿಟೀಸ್: *ಥಿಯರಿ ಟು ಪ್ರಾಕ್ಟಿಸ್ ಎ ಪರ್ಸನಲ್ ರಿಪೋರ್ಟ್, ಬಾಂಬೆ,* 2010, ಪು.ಸಂ–8.
8. ರಾನಾ ಇನ್‌ಸಾನ್, *ಮೆಸೆಜ್ ಆಫ್ ದಿ ಮಾರ್ಕೆಟ್*, ಹಾರ್‌ಪೆರ್, ಯಾನ್ ಇಂಪ್ರಿಂಟ್ ಆಫ್ ಕ್ಯಾಲಿಸ್ ಪಬ್ಲಿಷರ್ಸ್, 2000, ಪು.ಸಂ.227–230.
9. ಪಂಕಜ್ ಅರೋರ, *ಇನ್ನೋವೇಸ್ ಇನ್ ರೂರಲ್ ಮಾರ್ಕೇಟಿಂಗ್*, ಹಿಮಾಲಯ ಪಬ್ಲೀಕೇಶನ್, ಬಾಂಬೆ, 2005, ಪು.ಸಂ.2–3.
10. ಸಡ್‌ಪ್ಯನ್ ರೈ, *ಸ್ರಕ್ಚರ್ ಆಫ್ ರೂರಲ್ ಮಾರ್ಕೆಟ್ಸ್ ಫಾರ್ ಅಚೀವ್‌ಇಂಗ್ ವರ್ಟಿಕಲ್ ಕೋಆರ್ಡೀಶನ್* ಇನ್ ದಿ ಇಂಡಿಯನ್ ಫುಡ್ ಚೈನ್, ಅಪ್ರಕಟಿತ ಪಿಹೆಚ್.ಡಿ, ಮಹಾಪ್ರಬಂಧ,

ಮಹಾರಾಷ್ಟ್ರ, 2000, ಪು.ಸಂ.1–6.

11. ಸುಭೋ ಚಟ್ಟೋಪಾಧ್ಯಾಯ ಮತ್ತು ಎ.ಕೆ.ಸರ್ಕಾರ್, *ಮಾರ್ಕೆಟ್–ಡ್ರೈವೆನ್ ಇನ್ನೋವೇಶನ್ ಫಾರ್ ರೂರಲ್ ಪೆನಟ್ರೇಶನ್:* ದಿ ಐಯುಪಿ ಜರ್ನಲ್ ಆಫ್ ಬಿಜಿನೆಸ್ ಸ್ಟ್ರಾಟಜಿ, ಪ್ರಕಟಿತ ಲೇಖನ, 2011, ಪು.ಸಂ.22–24.

12. ಪಾನಿರ್ ಕೆ.ಬಿ., ರೂರಲ್ ಮಾರ್ಕೆಟ್ ರಿಸರ್ಚ್ ರಿಪೋರ್ಟ್, ಇಪಿಡಬ್ಲ್ಯೂ ಜರ್ನಲ್ ಆಫ್ ಮಾರ್ಕೆಟಿಂಗ್, 2002, ಪು.ಸಂ.18–19.

13. ಎ ಪ್ರಾಜೆಕ್ಟ್ ರಿಪೋರ್ಟ್, ಐಐಟಿ, *ಸ್ಟ್ರಾಟಜೆಸ್ ಫಾರ್ ರೂರಲ್ ಮಾರ್ಕೆಟಿಂಗ್ ಬೈ ಯಾನ್ ಆರ್ಗನೈಜೇಶನ್ ರಿಪೋರ್ಟ್:* ಬಾಂಬೆ, 2008, ಪು.ಸಂ 1–8.

14. ಅರ್.ವಿ. ಬೆಡಿ ಮತ್ತು ಎನ್.ವಿ. ಬೇಡಿ, *ರೂರಲ್ ಮಾರ್ಕೆಟಿಂಗ್* ಹಿಮಾಲಯ ಪಬ್ಲಿಷಿಂಗ್ ಹೌಸ್, ನ್ಯೂ ಡೆಲ್ಲಿ, 1980, ಪು.ಸಂ.154–165.

15. ಸಾಧೇಕರ್ ಆರ್., "*ಸೋಶಿಯಲ್ ಮಾರ್ಕೆಟಿಂಗ್ ಸ್ಟ್ರಾಟಜೆಸ್ ಫಾರ್ ಚೆಂಜಿಂಗ್ ಪಬ್ಲಿಕ್ ಬಿಹೇವಿಯರ್,* ಎ ಪ್ರಾಜೆಕ್ಟ್ ರಿಪೋರ್ಟ್", ಜರ್ನಲ್ ಆಫ್ ರೂರಲ್ ಮಾರ್ಕೆಟಿಂಗ್, ಡೆಲ್ಲಿ, 2009, ಪು.ಸಂ.26–27.

16. ಲಾವಂಡ್, *ಲೋ ಪ್ರೊಡಕ್ಟಿವಿಟಿ ಆಫ್ ಆನಿಯನ್ ಇನ್ ಇಂಡಿಯಾ ಯಾಸ್* ಕಂಪೇರ್ಡ್ ಟು ಚೈನಾ ಯು.ಎಸ್.ಎ. ಮತ್ತು ನೆದರ್‌ಲ್ಯಾಂಡ್, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ನೆದರ್‌ಲ್ಯಾಂಡ್, 2004, ಪು.ಸಂ.10–15–38.

17. ಬಾಘವನ್ ಬಿ., "*ಬಿಲ್ಡಿಂಗ್ ಆಫ್ ಎಫಿಸಿಯಂಟ್ ಮಾರ್ಕೆಟಿಂಗ್ ಸಿಸ್ಟಮ್ ಟು ಒಬಿವೆಟ್ ದಿ ನೀಡ್ ಫಾರ್ ಲಾರ್ಜ್ ಸ್ಟೇಟ್ ಇನ್‌ಟರ್‌ವೆನ್‌ಶನ್ ಇನ್ ಮಹಾರಾಷ್ಟ್ರ*", ಜರ್ನಲ್ ಆಫ್ ಐಯುಪಿ, ಮಹಾರಾಷ್ಟ್ರ, 2009, ಪು.ಸಂ–24.

18. ಹಂಮ್ಜಾ ಆಲ್ವಿ, "*ಇಂಡಿಯಾ ಆ್ಯಂಡ್ ದಿ ಕೋಲೋನಿಯಲ್ ಮೋಡ್ ಆಫ್ ಪ್ರೊಡಕ್ಷನ್*" ಜರ್ನಲ್ ಆಫ್ ಮಾರ್ಕೆಟಿಂಗ್, ನ್ಯೂ ಡೆಲ್ಲಿ, 1975, ಪು.ಸಂ.12–14.

19. ಚಿನ್ನಸ್ವಾಮಿ ಸೋಸಲೆ, *ಗ್ರಾಮಗಳು: ಅಂದು–ಇಂದು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2004, ಪು.ಸಂ.18–28.

20. ಕೆ.ಮೋಹನ್‌ಕೃಷ್ಣ ರೈ, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ

ವಿಶ್ವವಿದ್ಯಾಲಯ ಹಂಪಿ, 2001, ಪು.ಸಂ–46.

21. ಬಲ್‌ವಿಂದರ್ ಸಿಂಗ್, ಅಗ್ರಿಕಲ್ಚರಲ್ ಕ್ರೇಡಿಟ್, ಸೋರ್ಸ್, ಪ್ರಾಬ್ಲಮ್ಸ್ ಆ್ಯಂಡ್ ಎಮರ್ಜಿಂಗ್ ಇಶ್ಯೂಸ್, ದೀಪಾ ಅಂಡ್ ದೀಪಾ ಪಬ್ಲೀಕೇಶನ್ ಪ್ರೈವೆಟ್ ಲಿಮಿಟೆಡ್, ನ್ಯೂ ಡೆಲ್ಲಿ, 2007, ಪು.ಸಂ.156–160.

22. ಟಿ.ಅರ್.ಚಂದ್ರಶೇಖರ, *ಬಜೆಟ್ ಅಧ್ಯಯನ*, ಪ್ರಸಾರಾಂಗ ಕ.ವಿ.ವಿ.ಹಂಪಿ, 2001, ಪು.ಸಂ.1–18.

23. ಸಿ.ಚಂದ್ರಪ್ಪ, *ರೈತ ಮತ್ತು ಆದಿವಾಸಿ ಚಳುವಳಿ*(ಸ್ವಾತಂತ್ರ್ಯಪೂರ್ವ) ಮನೋಜ ಪಬ್ಲಿಕೇಷನ್ಸ್, ಬೆಂಗಳೂರು, 2012, ಪುಟ ಸಂಖ್ಯೆ: 1–34.

24. ಥಿಯೋಡಿನ್ ಶಾನಿನ್, ಪ್ರನಾಭ್ ಬರ್ಧ್ಹಾನ್, *"ಅಗ್ರೇರಿಯನ್ ಕ್ಲಾಸ್ ಫಾರ್‌ಮೇಶನ್ ಇನ್ ಇಂಡಿಯಾ"*, ಕರ್ನಾಟಕ ಪಬ್ಲಿಕೇಶನ್, ಹುಬ್ಬಳ್ಳಿ, 1982, ಪು.ಸಂ.36–45.

25. ಈಶ್ವರನ್ ಕೆ., "ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ಅಭಿವೃದ್ಧಿ", ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1976, ಪು.ಸಂ.12–15.

26. ಹೆಚ್. ನಾಗರಾಜ ಶೆಟ್ಟಿ, *"ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ"*, ಸಹನಾ ಪ್ರಕಾಶನ, ಹುಬ್ಬಳ್ಳಿ, 1998, ಪು.ಸಂ.69-70.

27. ಎಂ. ಚಂದ್ರ ಪೂಜಾರಿ, *"ಕೃಷಿ ಮಾರುಕಟ್ಟೆ"* ಕನ್ನಡ ವಿಶ್ವವಿದ್ಯಾಲಯ ಹಂಪಿ, 2010, ಪು.ಸಂ.24–25.

28. ಮಧುರಾ ಸ್ವಾಮಿನಾಥನ್, "ದಿ ನ್ಯೂ ಪಾವರ್ಟಿ ಲೈನ್: ಎ ಮೆಥಡಾಲಜಿ ಡಿಪ್ಲಿ ಫ್ಲಾಡ್", ಇಂಡಿಯನ್ ಜರ್ನಲ್ ಆಫ್ ಹ್ಯೂಮನ್ ಡೆವಲಪ್ಮೆಂಟ್, ಸಂಪುಟ 4, ಸಂಚಿಕೆ.1. 2010, ಪು.ಸಂ 121–125.

29. ದೀಪಾ ನಾರಾಯಣ, ಬಿನಾಯಕ್ ಸೆನ್ ಮತ್ತು ಕಾಟೆ ಹುಲ್, *ಮೂವಿಂಗ್ ಔಟ್ ಆಫ್ ಪಾವರ್ಟಿ ಇನ್ ಇಂಡಿಯಾ: ಯಾನ್ ಓವರ್‌ವ್ಯೂವ್*, ಜಾಗತಿಕ ಬ್ಯಾಂಕ್ ಜರ್ನಲ್, 2009, ಪು.ಸಂ.18–19.

30. ಅಮಿತಾ ಶಾ, ಸ್ಪೇಷಿಯಲ್ ಪಾವರ್ಟಿ ಟ್ರಾಪ್ಸ್ ಇನ್ ರೂರಲ್ ಇಂಡಿಯಾ: ಆನ್ ಎಕ್ಸಪ್ಲನೇಟರಿ ಅನಾಲಿಸ್ ಆಫ್ ದಿ ನೇಚರ್ ಆಫ್ ದಿ ಕಾಜಸ್ ಜರ್ನಲ್ ಆಫ್ ಸೋಷಿಯಲ್ ಆಂಡ್ ಎಕನಾಮಿಕ್ ಡೆವಲಪ್‌ಮೆಂಟ್ – ಜುಲೈ – ಡಿಸೆಂಬರ್ 2002,

ಸಂಪುಟ 4 ಸಂಚಿಕೆ–2, 2002, ಪು.ಸಂ.23–147.

31. ಎಂ.ಚಂದ್ರ ಪೂಜಾರಿ, *"ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ"* ವಿಜಯ ಕರ್ನಾಟಕ 2017, ಪು.ಸಂ.7.

32. ಚೇತನ್‌ಜಿರಾಲ್, "ನಂಜುಡಪ್ಪ ವರದಿ", http://kannadakannu.wordpress.com, 16/09/2014.

33. ಎಂ.ಚಂದ್ರ ಪೂಜಾರಿ, *ಸಂಶೋಧನೆ ಏನು? ಏಕೆ? ಹೇಗೆ?,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, 2010, ಪು.ಸಂ.1–60.

ಅಧ್ಯಾಯ–ಒಂದು

# ಗ್ರಾಮೀಣ ಕೃಷಿ ಮಾರುಕಟ್ಟೆ
# ಸಿದ್ಧಾಂತ ಮತ್ತು ಆಚರಣೆ

ಪೀಠಿಕೆ

ವ್ಯಾಪಾರ, ವ್ಯಾಪಾರದ ವಿಧಗಳು

ಅಧ್ಯಯನಗಳ ವಿಮರ್ಶೆ

## ಅಧ್ಯಾಯ-ಒಂದು

# ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ

### ಪೀಠಿಕೆ

ಸಂಶೋಧನೆ ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಆಗಿರುವ ಅಧ್ಯಯನಗಳ ವಿವರ, ಅಧ್ಯಯನಕ್ಕೆ ಪೂರಕವಾದ ಕೆಲವು ಅಧ್ಯಯನಗಳ ವಿಮರ್ಶೆಯು ಈ ಕೆಳಕಂಡಂತೆ ಇದೆ. ಅಧ್ಯಯನದ ವಿಷಯವು, ಗ್ರಾಮೀಣ ಕೃಷಿ ಮಾರುಕಟ್ಟೆಯ ಸಿದ್ಧಾಂತ ಮತ್ತು ಆಚರಣೆ (ಬಳ್ಳಾರಿ ಜಿಲ್ಲೆಯ ತೋಟಗಾರಿಕೆಯ ಕೃಷಿಯನ್ನು ಅನುಲಕ್ಷಿಸಿ) ವಿಷಯಕ್ಕೆ ಸಂಬಂಧಿಸಿದಂತೆ, ಈಗಾಗಲೇ ಆಗಿರುವ ಅಂತಾರಾಷ್ಟ್ರೀಯ ಮಟ್ಟದ, ರಾಷ್ಟ್ರೀಯ ಮಟ್ಟದ ಹಾಗೂ ರಾಜ್ಯ ಮಟ್ಟದ ಅಧ್ಯಯನಗಳ ಮಾಹಿತಿಯನ್ನು ಕೆಳಕಂಡಂತೆ ನಮೂದಿಸಲಾಗಿದೆ. ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೆ ಆಗಿರುವ ಅಧ್ಯಯನಗಳ ವಿಮರ್ಶೆಯ ವಿವರಣೆಯೂ ಈ ಕೆಳಗಿನಂತಿದೆ.

ವ್ಯಾಪಾರವು ವಾಣಿಜ್ಯದ ಭಾಗವಾಗಿದ್ದು, ಸರಕುಗಳನ್ನು ಕೊಳ್ಳುವುದು ಮತ್ತು ಗ್ರಾಹಕರಿಗೆ ಮಾರುವುದನ್ನು ಒಳಗೊಂಡಿರುತ್ತದೆ. ಪ್ರಸ್ತುತ ವ್ಯಾಪಾರವನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು ಆಂತರಿಕ ಅಥವಾ ದೇಶೀಯ ವ್ಯಾಪಾರ, ಎರಡನೆಯದು ವಿದೇಶ ಅಥವಾ ಅಂತಾರಾಷ್ಟ್ರೀಯ ವ್ಯಾಪಾರ ಹಾಗೂ ಮೂರು ಪುನರ್ ರಫ್ತು ವ್ಯಾಪಾರ.[1] ಇನ್ನು ವ್ಯಾಪಾರದಲ್ಲಿ ವಿದೇಶಿ ವ್ಯಾಪಾರದ ಕರಿತು ನೋಡುವುದಾದರೆ, ವಿದೇಶಿ ವ್ಯಾಪಾರದ ಅವಶ್ಯಕತೆ ಪ್ರಪಂಚದ ಯಾವುದೇ ದೇಶವಾಗಲಿ ಎಲ್ಲ ಸಂಪನ್ಮೂಲಗಳಲ್ಲೂ ಸ್ವಯಂಪೂರ್ಣತೆ ಹೊಂದಿಲ್ಲ.[2] ಕೆಲವು ದೇಶಗಳಲ್ಲಿ ಕೆಲವು ಸಂಪನ್ಮೂಲಗಳು ಹೇರಳವಾಗಿ ದೊರೆಯುತ್ತವೆ. ಆ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಕೆಲವೇ ವಸ್ತುಗಳನ್ನು ಅಧಿಕವಾಗಿ ಉತ್ಪಾದನೆ ಮಾಡುತ್ತಾರೆ. ದೇಶದ ಬೇಡಿಕೆಯು ಮುಗಿದ ಬಳಿಕ ಉಳಿದ ವಸ್ತುಗಳನ್ನು ಬೇರೆ ದೇಶಗಳಿಗೆ

ರಫ್ತು ಮಾಡುತ್ತಾರೆ. ಹಾಗೆಯೇ ಯಾವ ದೇಶಗಳಲ್ಲಿ ಸಂಪನ್ಮೂಲಗಳ ಅಭಾವವಿದೆಯೋ ಆ ದೇಶಗಳು ತಮಗೆ ಅಭಾವವಿರುವ ವಸ್ತುಗಳನ್ನು ಬೇರೆ ದೇಶಗಳಿಂದ ಆಮದು ಮಾಡಿಕೊಳ್ಳುತ್ತಾರೆ. ಇದರಿಂದಾಗಿ ಪ್ರತಿದೇಶಕ್ಕೂ ವಿದೇಶ ವ್ಯಾಪಾರದ ಅವಶ್ಯಕತೆ ಇದೆ ಎಂಬುದು ತಿಳಿದುಬರುತ್ತದೆ. ಇದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದು ವಿದೇಶ ವ್ಯಾಪಾರವು ದೇಶಗಳ ಪರಸ್ಪರ ಸೌಹಾರ್ದಯುತ ಸಂಬಂಧಕ್ಕೆ ಸಹಾಯ ಮಾಡುತ್ತದೆ. ಹೀಗೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಅಧ್ಯಯನದಲ್ಲಿ ಮಾರುಕಟ್ಟೆ ಎಂದರೆ, ಕೃಷಿ ಮಾರುಕಟ್ಟೆಯೆಂದರೆ, ವ್ಯಾಪಾರ ಅವುಗಳಿಗೆ ಪೂರಕವಾದ ಅಧ್ಯಯನಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

## ಅಧ್ಯಯನಗಳ ವಿಮರ್ಶೆ

ಪ್ರೊಡಕ್ಷನ್ ಆ್ಯಂಡ್ ಮಾರ್ಕೆಟಿಂಗ್ ಇನ್ ಘೆಚ್ ಸಿಂದ್ ಮೊಹಮ್ಮದ್ ಮಾರಿ, ಅಧ್ಯಯನದಲ್ಲಿ ಪಾಕಿಸ್ತಾನದಲ್ಲಿ ಕೃಷಿಯು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಪ್ರಾಮುಖ್ಯ ಎನ್ನುವುದನ್ನು ಹೇಳುತ್ತಾ ಹಾಗೆಯೇ ಕೈಗಾರಿಕೆಗಳು ಮತ್ತು ಸೇವೆಯು ಕ್ಷೇತ್ರಗಳು ದೇಶದ ಆರ್ಥಿಕ ಅಭಿವೃದ್ಧಿಗೆ ಅನುಕೂಲಕರವಾಗಿಯೆಂದು ಹೇಳಿದ್ದಾರೆ. ಅದರಲ್ಲಿಯೂ ಕೃಷಿಯ ಪಾತ್ರವು ದೇಶದ ಅಭಿವೃದ್ಧಿಗೆ ಬಹುಮುಖ್ಯ ಎಂಬುದನ್ನು ತಿಳಿಸಿದ್ದಾರೆ. ಪಾಕಿಸ್ತಾನದಲ್ಲಿ ಅತಿ ಹೆಚ್ಚು ಜನರು ಹಳ್ಳಿಗಳಲ್ಲಿ ವಾಸವಾಗಿದ್ದು ಅವರು ಮೂಲತಃ ಇಲ್ಲವೇ ಪರೋಕ್ಷವಾಗಿ ಕೃಷಿಯ ಮೇಲೆಯೇ ಅವಲಂಬಿತರಾಗಿದ್ದಾರೆ.[3] ಯಾವುದೇ ಒಂದು ಕೃಷಿಗೆ ಸಂಬಂಧಿಸಿದ ತಂತ್ರಜ್ಞಾನವು ಬೆಳಕಿಗೆ ಬಂದರೆ ಅಥವಾ ಕೃಷಿ ಉತ್ಪಾದನೆಗೆ ಸಹಕಾರಿಯಾಗುವ ತಂತ್ರಜ್ಞಾನವು ಅಭಿವೃದ್ಧಿ ಹೊಂದಿದರೆ ಅದರಿಂದ ಕೃಷಿಯ ಉತ್ಪಾದನೆಯಲ್ಲಿ ಹೆಚ್ಚಳವಾಗುವುದಲ್ಲದೆ ಒಟ್ಟಾರೆ ದೇಶದ ಅಭಿವೃದ್ಧಿಯಾಗುವುದರಲ್ಲಿ ತನ್ನ ಪಾತ್ರವನ್ನು ವಹಿಸುತ್ತದೆ. ಇದರಿಂದ ಹಳ್ಳಿಯ ಎಷ್ಟೋ ಚಿಕ್ಕ ಪುಟ್ಟ ಕುಟುಂಬಗಳು ಲಾಭ ಪಡೆಯುತ್ತವೆ.

ಅಧ್ಯಯನದಲ್ಲಿ ಮುಖ್ಯವಾಗಿ ಸಂಶೋಧಕರು ತೋಟಗಾರಿಕೆ ಬೆಳೆಗಳನ್ನು ಒಳಗೊಂಡ ತರಕಾರಿ, ಸೊಪ್ಪು ಮುಂತಾದ ಬೆಳೆಗಳು ಕೃಷಿ ಮಾರುಕಟ್ಟೆಯಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತಿವೆ ಎಂದು ಹೇಳುತ್ತಾ ಈ ಬೆಳೆಗಳು ಕೇವಲ ಕೃಷಿಯ ಭಾಗವಾಗಿ ದೇಶದ ಅರ್ಥಿಕತೆಗೆ ಹೊಂದಿಕೆಯಾಗದೆ, ಅದರ ಜೊತೆ ಒಂದು ಲಿಬರಲೈಜ್ಡ್ ಎಕಾನಮಿಯಾಗಲು ಅನುಕೂಲವಾಗುತ್ತದೆ. ತರಕಾರಿಗಳು ಕೇವಲ ಆಹಾರಕ್ಕಾಗಿ ಮತ್ತು ಆರೋಗ್ಯದ ರಕ್ಷಣೆಗೆ ಅಲ್ಲದೆ ಅದನ್ನೇ ಅವಲಂಬಿಸಿದ ಸಣ್ಣಕುಟುಂಬಗಳ ಜೀವನಾಧಾರವಾಗಿ ಮತ್ತು ದೇಶದ ವಿದೇಶಿ ವಿನಿಮಯವನ್ನು ಹೆಚ್ಚಿಸುವಲ್ಲಿ ತನ್ನ ಪಾತ್ರವನ್ನು ವಹಿಸುತ್ತದೆ. ಇದರಿಂದಾಗಿ ತಿಳಿದು ಬರುವುದೇನೆಂದರೆ ತರಕಾರಿ ಬೆಳೆಗಳು ಕೂಡ ಪಾಕಿಸ್ತಾನದಲ್ಲಿ ಆರ್ಥಿಕ ಸಬಲತೆಗೆ ಕಾರಣವಾಗಿದೆ.

ಹೆಚ್ಚಾಗಿ ಪಾಕಿಸ್ತಾನದ ತರಕಾರಿಗಳನ್ನು, ಹಣ್ಣುಗಳನ್ನು ಕೊಳ್ಳುವ ದೇಶಗಳೆಂದರೆ ದುಬೈ, ಭಾರತ, ಅಫಘಾನಿಸ್ತಾನ, ಸೌದಿ ಅರೇಬಿಯಾ ಮತ್ತು ಸಂಯುಕ್ತ ಸಂಸ್ಥಾನಗಳು. ಈ ಅಧ್ಯಯನದಲ್ಲಿ ಸಂಶೋಧಕರು ತರಕಾರಿ ಬೆಳೆಗಳಾದ ಈರುಳ್ಳಿ, ಟೊಮೊಟೊ, ಮೆಣಸಿನಕಾಯಿ ವಹಿವಾಟಿನ ಕುರಿತು ದತ್ತಾಂಶಗಳನ್ನು ಸಂಗ್ರಹಿಸಿರುತ್ತಾರೆ. ಟೊಮೊಟೊ ಮತ್ತು ಈರುಳ್ಳಿ ಬೇಡಿಕೆಯನ್ನು ಹೆಚ್ಚಿನ ತಲಾ ಆದಾಯದ ಸ್ಥಿತಿಸ್ಥಾಪಕತ್ವದ (ಹೈ ಇನ್‌ಕಮ್ ಎಲಾಸ್ಟಿಸಿಟಿ) ಗುಣವನ್ನು ಹೊಂದಿರುತ್ತದೆ. ಮೆಣಸಿನಕಾಯಿ ಬೇಡಿಕೆಯು ಎಲಾಸ್ಟಿಕ್ ಆಗಿರುತ್ತದೆಂದು ಹೇಳಿದ್ದಾರೆ. ತರಕಾರಿ ಬೆಳೆಗಳ ಉತ್ಪಾದನೆಯು ಲಾಭದಾಯಕವೂ ಮತ್ತು ಹೆಚ್ಚಿನ ಕಾರ್ಮಿಕರ ಬೇಡಿಕೆಯನ್ನು ಹೊಂದಿರುತ್ತದೆ. ಇದರಿಂದಾಗಿ ತರಕಾರಿಗಳನ್ನು ಬೆಳೆಯುವುದರಿಂದ ಸಣ್ಣ ರೈತರು ಆರ್ಥಿಕವಾಗಿ ಸಬಲರಾಗುವರಲ್ಲದೆ, ಹಳ್ಳಿಯ ಭೂರೈತ ಕಾರ್ಮಿಕರಿಗೂ ಕೆಲಸವು ದೊರಕುತ್ತದೆ ಎಂಬ ಅಂಶವನ್ನು ವಿಶ್ಲೇಷಿಸಿದ್ದಾರೆ.

ಈ ಮಹಾಪ್ರಬಂಧದ ಮುಖ್ಯ ಉದ್ದೇಶವು ತರಕಾರಿಗಳ ಉತ್ಪಾದನೆ, ತರಕಾರಿಗಳ ಮಾರಾಟ ವ್ಯವಸ್ಥೆಯನ್ನು ಕೂಲಂಕಷವಾಗಿ ಅಧ್ಯಯನ ಮಾಡುವ ಮತ್ತು ಅದರ ಲಕ್ಷಣಗಳನ್ನು ಅರಿಯುವುದಾಗಿದೆ. ಈರುಳ್ಳಿ, ಟೊಮೊಟೊ, ಮೆಣಸಿನಕಾಯಿಗಳ ಉತ್ಪಾದನೆಯನ್ನು ಪಾಕಿಸ್ತಾನದ ಸಿಂಧ್ ಪ್ರದೇಶದಲ್ಲಿ ಗುರುತಿಸುವುದು ಮತ್ತು ಪಾಕಿಸ್ತಾನದ ವಿವಿಧ ಪ್ರದೇಶಗಳೊಡನೆ ಹೋಲಿಕೆ ಮಾಡಿ ಉತ್ಪಾದನೆ ಮಟ್ಟವನ್ನು ಗುರುತಿಸುವುದು ಹಾಗೆಯೇ ತಾಂತ್ರಿಕವಾಗಿ ಹೇಗೆ ಈ ಮೂರು ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸುವುದು ಎನ್ನುವ ಅಂಶಗಳೊಂದಿಗೆ ಪ್ರಸ್ತುತ ತರಕಾರಿ ಮಾರುಕಟ್ಟೆಯ ವಿವಿಧ ದಾರಿಗಳು ಯಾವುವು ಮತ್ತು ಅವುಗಳ ಸಂರಚನೆ ಮತ್ತು ವಿನ್ಯಾಸದ ಸ್ವರೂಪವನ್ನು ಅರಿಯುವ ಪ್ರಯತ್ನವನ್ನು ಮಾಡುತ್ತದೆ. ಮಾರುಕಟ್ಟೆಯ ಅಭಿವೃದ್ಧಿಗಾಗಿ ಇರುವ ನೀತಿ ನಿಯಮಗಳನ್ನು ರೂಪಿಸುವುದು ಹಾಗೂ ಅವುಗಳನ್ನು ತರಕಾರಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಶಿಫಾರಸ್ಸು ಮಾಡುವ ಉದ್ದೇಶವನ್ನು ಒಳಗೊಂಡಿರುತ್ತದೆ. ಈ ಅಧ್ಯಯನಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಯನ್ನು ಕೆಲವು ತರಕಾರಿ ಉತ್ಪಾದಕರಿಂದ ಮತ್ತು ಮಾರುಕಟ್ಟೆಯ ಮಧ್ಯವರ್ತಿಗಳನ್ನು ಸಂದರ್ಶಿಸಿ ಕಲೆ ಹಾಕಲಾಗಿದೆ. ಅಲ್ಲದೆ, ಆನುಷಂಗಿಕ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಕೃಷಿ ಮಾರುಕಟ್ಟೆಯ ಕುರಿತಾದ ಜ್ಞಾನದ ಮೌಲ್ಯವನ್ನು ಹೆಚ್ಚಿಸುತ್ತದೆ. ಈ ಅಧ್ಯಯನವು ಪಾಕಿಸ್ತಾನದ ಕೃಷಿ ಮಾರುಕಟ್ಟೆಗೆ ಸಂಬಂಧಿಸಿದ್ದಾಗಿದೆ. ಅದರಲ್ಲೂ ಸಂಶೋಧಕರು ಕೇವಲ ತರಕಾರಿ ಬೆಳೆಗೆ ಸಂಬಂಧಿಸಿದಂತೆ ಅಧ್ಯಯನವನ್ನು ಕೈಗೊಂಡಿದ್ದಾರೆ. ಅಲ್ಲಿಯೂ ಕೇವಲ ಮೂರು ಬೆಳೆಗಳನ್ನು ಮಾತ್ರ ಆಯ್ದು ಕೊಂಡಿದ್ದಾರೆ. ಅದಕ್ಕೆ ಸಂಬಂಧಿಸಿದ ನೀತಿ ನಿಮಯಮಗಳನ್ನು ಮತ್ತು ಒದಗಿಸುವಲ್ಲಿ ಪಾಕ್ಷಿಕ ಯಶಸ್ಸು ಮಾತ್ರ ಸಾಧಿಸಿದ್ದಾರೆಂದು ಹೇಳಬಹುದು.

ಅಗ್ರಿಕಲ್ಚರಲ್ ಆ್ಯಂಡ್ ರೂರಲ್ ಲೇಬರ್ ಮಾರ್ಕೆಟ್ ಇನ್ ಯೂರೋಪಿಯನ್ ಯುನಿಟ್ಸ್ ಕ್ಯಾಂಡಿಡೆಟ್ ಕಂಟ್ರೀಸ್ ಆಫ್ ಫಾರ್ಮರ್, ಸ್ಟೇಫನ್ ಬೋಜನ್ನೆ(2011) ಅಧ್ಯಯನದಲ್ಲಿ ಕೃಷಿಯಲ್ಲಿ ಕಾರ್ಮಿಕರ ಮಾರುಕಟ್ಟೆ ಮತ್ತು ಗ್ರಾಮಗಳ ಅಧ್ಯಯನವನ್ನು ಆಧುನಿಕಪೂರ್ವದ ಸ್ಥಿತಿಗೂ ಮತ್ತು ಆಧುನಿಕ ಕಾಲಘಟ್ಟದಲ್ಲಿನ ಸ್ಥಿತಿಯನ್ನು, ಕೃಷಿಕ್ಷೇತ್ರದ ಕಾರ್ಮಿಕರ ಸ್ಥಿತಿಗಳನ್ನು ಮತ್ತು ನಗರಗಳಲ್ಲಿನ ಕಾರ್ಮಿಕರ ಸ್ಥಿತಿಗಳನ್ನು ಹೋಲಿಸಿ ನೋಡಲಾಗಿದೆ. ಈ ಪ್ರಸ್ತುತ ಅಧ್ಯಯನಕ್ಕೆ ಮೂರು ಯುರೋಪಿಯನ್ ಒಕ್ಕೂಟಗಳ ಸದಸ್ಯ ರಾಷ್ಟ್ರಗಳನ್ನು ಒಳಪಡಿಸಲಾಗಿದೆ. ಕಾರ್ಮಿಕ ಮಾರುಕಟ್ಟೆಯ ಸಂಬಂಧ ಮತ್ತು ಅವುಗಳ ಸ್ವರೂಪವನ್ನು ವಿಶ್ಲೇಷಿಸಿದ್ದಾರೆ.[4] ಅದನ್ನು ಲೇಖಕರು ಗ್ರಾಮಗಳಲ್ಲಿ ದೊರೆತ ಮಾಹಿತಿ ಆಧಾರದ ಮೇಲೆ ಕಾರ್ಮಿಕ ವರ್ಗವನ್ನು ಮೂರು ದೇಶಗಳಿಗೆ ಹೋಲಿಸಿ ರೈತರ ಆರ್ಥಿಕ ಮಟ್ಟವನ್ನು ಮತ್ತು ಅವರ ಜೀವನ ಮಟ್ಟವನ್ನು, ಪಟ್ಟಣದ ಕಾರ್ಮಿಕರ ಜೀವನದ ಮಟ್ಟವನ್ನು ಹೋಲಿಕೆ ಮಾಡಿ ಚರ್ಚಿಸಿದ್ದಾರೆ. ಅದರಲ್ಲಿಯೂ ಗ್ರಾಮಾಂತರ ಪ್ರದೇಶಗಳ ಕಾರ್ಮಿಕರ ತಲಾ ಆದಾಯವು ಕಡಿಮೆಯಾಗಿರುತ್ತದೆಂಬುದನ್ನು ವಿವರಿಸಿದ್ದಾರೆ. ಹೀಗಾಗಿ ಸಹಜವಾಗಿಯೇ ಜೀವನಮಟ್ಟದಲ್ಲಿಯೂ ವ್ಯತ್ಯಾಸವಾಗಿ ಗ್ರಾಮಾಂತರ ಪ್ರದೇಶಗಳ ಕಾರ್ಮಿಕರು ನಗರ ಕಾರ್ಮಿಕರಂತೆ ಜಾಗೃತರಾಗಿರುವುದಿಲ್ಲ. ಸ್ವರೂಪದಲ್ಲಿ ಗ್ರಾಮಗಳ ಕಾರ್ಮಿಕರಿಗೂ ಮತ್ತು ಪಟ್ಟಣದ ಕಾರ್ಮಿಕರಿಗೂ ವ್ಯತ್ಯಾಸವಿರುತ್ತದೆ ಎಂಬ ಅಂಶವನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

ದಿ ಇಂಪ್ಯಾಕ್ಟ್ ಆಫ್ ಅಗ್ರಿಕಲ್ಚರಲ್ ಪಾಲಿಸಿ ಯ್ಯಾನ್ ಇಂಟಿಗ್ರೇಶನ್ ಮಾರ್ಕೆಟ್ಸ್ ಆಫ್ ಆನಿಯನ್, ಬೈ ರಾವೇನ್ಂದ್ರನ್ ಆ್ಯಂಡ್ ಸೆಲ್ವೆಂಟ್ ಆಲ್(2001) ಅಧ್ಯಯನದಲ್ಲಿ ಮಾರುಕಟ್ಟೆಯ ಕುರಿತಾಗಿ ಸಂಶೋಧಕರು ಅಧ್ಯಯನವನ್ನು ಕೈಗೊಂಡಿದ್ದು ಮಾರುಕಟ್ಟೆಯಲ್ಲಿ ರೈತರಿಗೆ ಅಧಿಕವಾಗಿ ತಗುಲುವ ವೆಚ್ಚವು Omission charges of the commission agents ಅದು ಶೇಕಡ 10ರಷ್ಟು ಒಂದು ಸಲದ ಮಾರಾಟಕ್ಕೆ ಇರುತ್ತದೆ. ರೈತರು ಉತ್ಪನ್ನಗಳು ಮಾರಾಟ ವಾದ ನಂತರ ಹಣವನ್ನು ಕೊಡುತ್ತಾರೆ.[5] ಈ ಅಧ್ಯಯನದಲ್ಲಿ ರೈತರಿಗೆ ಎದುರಾದ ಮಾರುಕಟ್ಟೆಯ ತೊಂದರೆಗಳು ಅಂದರೆ ಉತ್ಪನ್ನಗಳ ಸಾಗಾಣಿಕೆ, ಶೇಖರಣೆ ವ್ಯವಸ್ಥೆ, ಉತ್ಪನ್ನಗಳನ್ನು ಅಡಮಾನ ಸಾಲದ ವ್ಯವಸ್ಥೆ ಇವುಗಳ ಸೌಲಭ್ಯವನ್ನು ಒದಗಿಸಬೇಕು ಎಂದು ತಿಳಿಸಿದ್ದಾರೆ.

ಎ ಸ್ಟಡಿ ಆನ್ ಪ್ರೈಸ್ ಟ್ರೆಂಡ್ ಇಂಟಿಗ್ರೇಶನ್ ಆಫ್ ಹೋಲ್‌ಸೇಲ್ ಮಾರ್ಕೆಟ್ ಫಾರ್ ಆನಿಯನ್ ಇನ್ ಮೆಟ್ರೋ ಸಿಟೀಸ್ ಆಫ್ ಇಂಡಿಯಾ(2012) ಈ ಅಧ್ಯಯನದಲ್ಲಿ ಲೇಖಕರು ಕೇವಲ ಮಾರ್ಚ್ ಮತ್ತು ಏಪ್ರಿಲ್‌ನಲ್ಲಿ ಈರುಳ್ಳಿ ಬೆಳೆಯಲ್ಲಾಗುವ ವ್ಯತ್ಯಾಸಗಳನ್ನು ಮೆಟ್ರಿಕ್ ನಗರಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅಧ್ಯಯನಕ್ಕೆ ಮುಂಬಯಿ, ಬೆಂಗಳೂರು,

ಕೊಲ್ಕತ್ತಾ, ಅಹಮದಾಬಾದ್ ಮತ್ತು ದೆಹಲಿಯನ್ನು ಆಯ್ದುಕೊಂಡಿದ್ದು ಈರುಳ್ಳಿ ಬೆಲೆಯಲ್ಲಿ ತಿಂಗಳಿಗೆ ಒಂದು ಮೆಟ್ರಿಕ್‌ಗೆ ರೂ. 6 ಮತ್ತು ರೂ. 4 ಹೆಚ್ಚಳವಾಗಿದೆ.[6] ಹಾಗೆಯೇ ಅಹಮದಾಬಾದ್ ಮುಂಬಯಿ ಮತ್ತು ಕೊಲ್ಕತ್ತಾದಲ್ಲಿ ಪ್ರತಿ ಮೆಟ್ರಿಕ್ ಟನ್‌ಗೆ ರೂ. 6, ರೂ. 10, ರೂ. 2/ ಮೆಟ್ರಿಕ್ ಟನ್ ಕಡಿಮೆಯಾಗಿದೆ.

ಲೀಸಾ ಮಾರ್ರೈ ವಾಸ್ಕೋ, ಆಲ್ಟರ್‌ನೇಟಿವ್ ವಿಡ್ ಮ್ಯಾನೇಜ್‌ಮೇಂಟ್ ಪ್ರಾಕ್ಟೀಸಸ್ ಎಪೆಕ್ಟ್ಸ್ ಆನ್ ವಿಡ್ ಕಂಟ್ರೋಲ್ ಗ್ರಾಪ್ರೈನ್ ಪರ್‌ಫಾರ್‌ಮೆನ್ಸ್ ಅಂಡ್ ಸಾಯಿಲ್ ಕ್ವಾಲಿಟಿ ಇನ್ ಯ್ಯಾನ್ ಎಸ್ಟಾಬ್ಲಿಷ್ಡ್(2010) ಈ ಅಧ್ಯಯನದಲ್ಲಿ ದ್ರಾಕ್ಷಿ ಬೆಳೆಯನ್ನು ಬೆಳೆಯುವಾಗ ರೈತರಿಗೆ ಎದುರಾಗುವ ಕಳೆಯ ವಿಷಯವಾಗಿ ಮತ್ತು ಮಣ್ಣಿನ ಫಲವತ್ತತೆಯ ಅಧ್ಯಯನವನ್ನು ಐವಾನ್ ಪ್ರದೇಶಕ್ಕೆ ಸೀಮಿತಗೊಳಿಸಿ ಕೈಗೊಂಡಿದ್ದಾರೆ. ಅಧ್ಯಯನದ ಉದ್ದೇಶವಾಗಿ ಕಳೆಯನ್ನು ಹೇಗೆ ಕಡಿಮೆಗೊಳಿಸುವುದು ಮತ್ತು ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವುದು ಜೊತೆಗೆ ದ್ರಾಕ್ಷಿ ಬೆಳೆಗಾರರ ವರ್ತನೆ ಮತ್ತು ದ್ರಾಕ್ಷಿ ಕಳೆಯ ಬಗೆಗೆ ರೈತರಿಗೆ ಇರುವ ಅರಿವನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡುವುದಾಗಿದೆ.[7] ಈ ಅಧ್ಯಯನದಲ್ಲಿ ಕಂಡುಕೊಂಡಿರುವ ಅಂಶವೆಂದರೆ ಕಾಲಕಾಲಕ್ಕೆ ಕಳೆಯನ್ನು ಕಡಿಮೆಗೊಳಿಸುವುದು, ಅದಕ್ಕಾಗಿ ಮಣ್ಣಿನ ಪರೀಕ್ಷೆ ಮಾಡಿಸಿ ಬೇಕಾದ ಕ್ರಿಮಿನಾಶಕಗಳನ್ನು ಸಿಂಪಡಿಸುವುದು, ಈ ರೀತಿ ಮಾಡು ವುದರಿಂದ ಉತ್ಪನ್ನವನ್ನು ಹೆಚ್ಚಿಸ ಬಹುದೆಂದು ಹೇಳಿದ್ದಾರೆ.

ಶರೊನ್ ಮಬಬ್ಫಿ ತ್ಸುಮಿ, ಇವ್ಯಾಲ್ಯುವೇಂಟಿಗ್ ಹಾರ್ಟಿಕಲ್ಚರಲ್ ಪ್ರಾಕ್ಟೀಸಸ್ ಫಾರ್ ಸಸ್‌ಟೇನ್‌ಬಲ್ ಟೊಮೊಟೊ ಪೊಡಕ್ಷನ್(2014) ಪ್ರಸ್ತುತ ಸಂಶೋಧನೆಯು ಉಗಾಂಡ ದೇಶದ ಕಮುಲಿ ಜಿಲ್ಲೆಯನ್ನು ಒಳಗೊಂಡಿದ್ದು ಜಿಲ್ಲೆಯಲ್ಲಿ ಸಣ್ಣ ರೈತರು ಹೆಚ್ಚಾಗಿ ತಮ್ಮ ಆದಾಯಕ್ಕಾಗಿ ಟೊಮೊಟ ಬೆಳೆಯನ್ನು ಬೆಳೆಯುತ್ತಿದಾರೆ.[8] ಟೊಮೊಟೊ ಬೆಳೆಗೆ ಸಿಂಪಡಿಸುವ ಕ್ರಿಮಿನಾಶಕ ಕುರಿತು ಚರ್ಚಿಸುತ್ತಾ ಬೆಳೆದ ಹಣ್ಣನ್ನು ಒಟ್ಟಾರೆ ಮಾರುವುದರಿಂದ ರೈತರಿಗೆ ಉಳಿಯುವ ಆದಾಯವೆಷ್ಟು ಎನ್ನುವ ಅಂಶವನ್ನು ಕಮುಲಿ ಜಿಲ್ಲೆಗೆ ಸೀಮಿತಗೊಳಿಸಿ ಅಧ್ಯಯನವನ್ನು ಮಾಡಿದ್ದಾರೆ. ಅತಿ ಹೆಚ್ಚು ಟೊಮೊಟೊ ಬೆಳೆಗೆ ತಗುಲುವ ರೋಗವನ್ನು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಮೈಕ್ರೋ ಆ್ಯಂಡ್ ಅಗ್ರಿಕಲ್ಚರ್, ಹೌ ಇಟ್ ವರ್ಕ್ ಮೇಘನ್ ಅಂಡ್ರೀವ್ಸ್(2006) ಅಧ್ಯಯನದಲ್ಲಿ ಸಂಶೋಧಕರು ಕೃಷಿಯಲ್ಲಿ ಹಣ ನಿರ್ವಹಣೆಯ ಸವಾಲುಗಳು ಮತ್ತು ಅನೇಕ ಅಂಶಗಳು ಹಣಕಾಸು ಸಂಸ್ಥೆಯ ಅಭಿವೃದ್ಧಿಗೆ ಮತ್ತು ಕೃಷಿ ಸೇವೆಗಳ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎಂಬುದನ್ನು ತಿಳಿಸಿದ್ದಾರೆ. ಲೇಖನದಲ್ಲಿ ಎಲ್ಲ ರೀತಿಯ

ಹಣಕಾಸಿನ ಸಂಸ್ಥೆಗಳ ವಿಶ್ಲೇಷಣೆ ಮಾಡದೆ ಮೈಕ್ರೋ ಫೈನಾನ್ಸ್ ಬಗ್ಗೆ ಗ್ರಾಮೀಣ ಹಣಕಾಸಿನ ಸಂಸ್ಥೆಗಳು ಪ್ರಸ್ತುತ ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ವಿಶ್ಲೇಷಿಸಿದ್ದಾರೆ.[9] ಲೇಖನದಲ್ಲಿ ಕೇವಲ ಸಂಸ್ಥೆಗಳ ಯೋಜನೆಗಳ ಬಗ್ಗೆ ಅವುಗಳ ಕಾರ್ಯವೈಖರಿಯನ್ನು ತಿಳಿಸದೆ, ಹಣಕಾಸು ಸಂಸ್ಥೆಗಳು ರೈತರಿಗೆ ಎಂತಹ ಸೇವೆ, ಸೌಲಭ್ಯಗಳನ್ನು ಒದಗಿಸಬೇಕು ಎನ್ನುವ ಅಂಶವನ್ನು ತಿಳಿಸಿದ್ದಾರೆ. ಅದರಲ್ಲೂ ಕೆನಡಾದಲ್ಲಿ ಮತ್ತು ವಿಶ್ವದಾದ್ಯಂತ ಕಾರ್ಯ ನಿರ್ವಹಿಸುವ ಸಂಸ್ಥೆಯ ಕುರಿತು ಚರ್ಚಿಸಿದ್ದಾರೆ. (MEDA) Mennonite Economic Development Associates ಕಾರ್ಯ ವೈಖರಿ, ಕಳೆದ 50 ವರ್ಷಗಳಿಂದ ಈ ಸಂಸ್ಥೆಯ ಮುಖ್ಯ ಗುರಿ ಬಡವರನ್ನು ಗುರುತಿಸುವಲ್ಲಿ ಮತ್ತು ಬಡವರಿಗೆ ಅದರಲ್ಲೂ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿರುವವರನ್ನು ಗುರುತಿಸಿ, ಅವರ ಜೀವನವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದು ಮುಖ್ಯ ಗುರಿಯಾಗಿಸಿಕೊಂಡು, ಕೆಳಗಿನ 5 ಅಂಶಗಳ ಮೂಲಕ ಅದನ್ನು ಸಾಧಿಸುವಲ್ಲಿ ಮುಂದಾಗಿದೆ: ಮೊದಲನೆಯದು ಮೈಕ್ರೋ ಫೈನಾನ್ಸ್, ಎರಡನೆಯದು ಪ್ರೊಡಕ್ಷನ್ ಆ್ಯಂಡ್ ಮಾರ್ಕೆಟಿಂಗ್ ಲಿಂಕೇಜಸ್, ಮೂರನೆಯದು ಇನ್‌ವೆಸ್ಟೆಡ್ ಫಂಡ್ ಡೆವಲಪ್‌ಮೆಂಟ್, ನಾಲ್ಕನೆಯದು ಕಮ್ಯುನಿಟಿ ಎಕನಾಮಿಕ್ ಡೆವಲಪ್‌ಮೆಂಟ್, ಐದನೆಯದು, ಮೆಂಬರ್ಸ್ ಸರ್‌ವೀಸಸ್. ಮೊದಲ ಮೂರು ಅಂಶಗಳು ದೇಶ ಮತ್ತು ಹೊರ ದೇಶಗಳಲ್ಲಿ ಕಾರ್ಯ ನಿರ್ವಹಿಸಿದರೆ, ಕೊನೆಯ ಎರಡು ಅಂಶಗಳು ನಾರ್ಥ್ ಅಮೇರಿಕ(ನಾರ್ಥ್ ಅಮೆರಿಕ) ದಲ್ಲಿ ಕಾರ್ಯ ನಿರ್ವಹಿಸುತ್ತವೆ. ಎಂ.ಈ.ಡಿ.ಎ.ಯೂ ಅದರದೇ ಆದ ರೈತಪರ ಯೋಜನೆಯನ್ನು ಹಾಕಿಕೊಂಡು ರೈತರನ್ನು ಬಲಪಡಿಸಲು ಪ್ರಯತ್ನಸುತ್ತಿದೆ ಎನ್ನುವ ಹಲವು ಅಂಶಗಳನ್ನು ಅಧ್ಯಯನದಲ್ಲಿ ತಿಳಿಸಿದ್ದಾರೆ. ಈ ಅಧ್ಯಯನದಲ್ಲಿ ಸಂಶೋಧಕರು ಕೇವಲ ಹಣಕಾಸು ಸಂಸ್ಥೆಗಳು ಕೃಷಿಗೆ ಸಂಬಂಧಿಸಿದಂತೆ Micro Finance from (MEDA) Mennonite Economic Development Associates ಯನ್ನು ಮಾತ್ರ ವಿಶ್ಲೇಷಿಸಿದ್ದಾರೆ. ಅಲ್ಲದೆ ಸಂಶೋಧಕರು ಎಲ್ಲಿಯೂ ಪ್ರತ್ಯೇಕವಾಗಿ ತೋಟಗಾರಿಕೆಗೆ ಸಂಬಂಧಿಸಿದಂತೆ ವಿಶೇಷವಾಗಿ ಅಧ್ಯಯನದಲ್ಲಿ ಚರ್ಚಿಸಿರುವುದಿಲ್ಲ.

ಹಾಗೆಯೇ ಕೃಷಿ ಹಣಕಾಸು ಸಂಸ್ಥೆಯೆಂದರೆ, ಗ್ರಾಮೀಣ ಹಣಕಾಸಿಗೆ ಸಿಮಿತವಾಗಿದ್ದು, ಕೃಷಿ ಚಟುವಟಿಕೆಗಳಲ್ಲಿ ಹಣಕಾಸನ್ನು ತೊಡಗಿಸುವುದು ಅಂದರೆ, input supply, ಉತ್ಪನ್ನಗಳ ಹಂಚುವಿಕೆಯಲ್ಲಿ, ಸಗಟು ವ್ಯಾಪಾರಕ್ಕೆ, processing ಮತ್ತು ಮಾರುಕಟ್ಟೆಗೆ ಸಂಬಂಧಿಸಿದ್ದಾಗಿರುತ್ತದೆ. ಕೊನೆಯದಾಗಿ ಮೈಕ್ರೋ ಫೈನಾನ್ಸನ್ನು ನಿರೂಪಿಸುವುದಾದರೆ ಸೂಕ್ಷ್ಮ ಹಣಕಾಸು ನಿರ್ವಹಣೆ ಎಂದು ಹೇಳಲಾಗುವುದು. ಎಂದರೆ, ಹಣಕಾಸು ಸೇವೆಗಳನ್ನು ಬಡ ಮತ್ತು ಕಡಿಮೆ ಆದಾಯ ಜನರನ್ನೊಳಗೊಂಡದಾಗಿರುತ್ತದೆ.

ಚಾಲೆಂಜಸ್ ಆ್ಯಂಡ್ ಆಪಾರ್ಚುನಿಟೀಸ್ ಫಾರ್ ಮಾರ್ಕೆಟಿಂಗ್ ಫ್ರೂಟ್ ಫ್ರಮ್ ದಿ ವೆಸ್ಟರ್ನ್ ಸ್ಲೋಪಿ, ಬೈ ಅಡ್ರೀನ್ ಬೌಸ್ ಕಾರ್ಡ್ಸ್, ಅಧ್ಯಯನದಲ್ಲಿ ಆಡ್ರೀನ್ ಬೌಸ್, ಹಣ್ಣುಗಳು ಮಾರಾಟದ ವಿಷಯ ಕುರಿತು ಕೊಲೆರೊಡೊ ಸ್ಥಳಕ್ಕೆ ಸಂಬಂಧಪಟ್ಟಂತೆ ಚರ್ಚಿಸಿದ್ದಾರೆ.[10] ಸೇಬುಹಣ್ಣಿನ ಮಾರಾಟಕ್ಕೆ ಸಂಬಂಧಿಸಿದಂತೆ ಮಾರಾಟ ಮಾಡಲು ರೈತರು ಎದುರಿಸುವ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ, ದೇಶದಲ್ಲಿ ಹೆಚ್ಚಾಗಿ ಬಂದ ಫಸಲು ಮತ್ತು ತಡವಾಗಿ ಬಂದ ಅತಿ ಹೆಚ್ಚು ಫಸಲನ್ನು ದೇಶದಲ್ಲಿ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದು ಬಹಳ ಕಠಿಣವಾಗಿದೆ. ಯಾಕೆಂದರೆ ಹೆಚ್ಚಿದ ಮಾರುಕಟ್ಟೆಯ ಸ್ಪರ್ಧೆ ಹಾಗೆಯೇ ಮಾರಾಟಗಾರರಿಗೆ ಸರಿಯಾದ ಮಾಹಿತಿ ಇಲ್ಲದೇ ಇರುವುದು ಮತ್ತು ರೈತರು ಯಾವುದೇ ರೀತಿ ಮಾರುಕಟ್ಟೆಯನ್ನು ಎದುರಿಸಲು ಸಿದ್ಧರಾಗದೆ ಇರುವುದರಿಂದ ಅನೇಕ ಮಾರಾಟಗಾರರು ಅತಿ ಕಡಿಮೆ ಲಾಭವನ್ನು ಗಳಿಸುತ್ತಿದ್ದಾರೆ. ಈ ಅಧ್ಯಯನದಲ್ಲಿ ರ್‍ಯಾಂಡಮ್ ಆಗಿ, 32 ಹಣ್ಣು ಮಾರಾಟಗಾರರ, ಸ್ಯಾಂಪಲ್ಲನ್ನು ತೆಗೆದುಕೊಳ್ಳಲಾಗಿದೆ ಮತ್ತು ಅಧ್ಯಯನದಲ್ಲಿ ಕೋಡ್‌ಗಳಿಗೆ ಸಂಬಂಧಪಟ್ಟಂತೆ, ಕ್ವಾಲಿಟೇಟಿವ್ ಮತ್ತು ಕ್ವಾಂಟಿಟೇಟಿವ್‌ನ್ನು ಅನಾಲಿಸಿಸ್ಸನ್ನು ಬಳಸಿಕೊಂಡಿದ್ದಾರೆ. ಈ ಸ್ಯಾಂಪಲ್ ಆಧಾರದ ಮೇಲೆ ಹಾಗೂ ಅನಾಲೈಸಿಸ್ ಮಾಡಿದ ಆಧಾರದ ಮೇಲೆ ಹಣ್ಣಿನ ಮಾರುಕಟ್ಟೆಯು ಹೆಚ್ಚಿನ ಅವಕಾಶವನ್ನು ಹೊಂದಿದ್ದು, ಸೇಬು ಮಾರುಕಟ್ಟೆಯಲ್ಲಿ ಹೆಚ್ಚಿನ ಲಾಭವನ್ನು ಗಳಿಸಬಹುದು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಲ್ಲದೆ ಹೆಚ್ಚಿನ ಹಣ್ಣು ಉತ್ಪಾದನೆಯನ್ನು ನೇರವಾಗಿ ಕೆಲವು ಪಬ್ಲಿಕ್ ಸ್ಕೂಲ್‌ಗಳಿಗೆ(ಸ್ಕೂಲ್ ಹಾಸ್ಟೆಲ್‌ಗಳಿಗೆ) ಹಾಗೂ ನೇರವಾಗಿ ಗ್ರಾಹಕರಿಗೆ ಮಾರುವುದರಿಂದಲೂ ರೈತರಿಗೆ ಸುಲಭವಾಗಿ ಮಾರಾಟ ಮಾಡಲು ಅನುಕೂಲವಾಗುತ್ತದೆ ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ. ಈ ಅಧ್ಯಯನವು ಉದ್ದೇಶಗಳಿಗೆ ಪೂರಕವಾಗಿದೆ. ಅಧ್ಯಯನದಲ್ಲಿ ಸಂಶೋಧಕರು ಸೇಬು ಹಣ್ಣಿನ ಮಾರಾಟಕ್ಕೆ ಸಂಬಂಧಪಟ್ಟಂತೆ ಚರ್ಚಿಸಿದ್ದಾರೆ. ಹಣ್ಣಿನ ಬೆಳೆಯೂ ತೋಟಗಾರಿಕೆಗೆ ಸಂಬಂಧಿಸಿದ್ದಾಗಿರುವುದರಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿಷಯ ವಿಶ್ಲೇಷಣೆಗೆ ಅನುಕೂಲವಾಗಿದೆ. ರೈತರು ಮಾರುಕಟ್ಟೆಯಲ್ಲಿ ಹಣ್ಣುಗಳನ್ನು ಮಾರಲು ಎದುರಿಸುವ ಸವಾಲುಗಳಿಗೆ ಕೆಲವು ಸಲಹೆಗಳನ್ನು ನೀಡಿದ್ದಾರೆ. ಅವು ರೈತರು ತಾವು ಬೆಳೆದ ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ವಿವಿಧ ವಿಧಾನಗಳನ್ನು ಮತ್ತು ತಂತ್ರಗಳನ್ನು ಅಳವಡಿಸಿಕೊಂಡರೆ ಲಾಭ ಗಳಿಸಬಹುದು ಎನ್ನುವ ಅಂಶವು ಅಧ್ಯಯನಕ್ಕೆ ಇನ್ನೂ ಹೆಚ್ಚು ಪೂರಕವಾಗಿದೆ.

ಪ್ರದೀಪ್ ಮ್ಹೆತ್ ಅವರ ಡೈವರ್‌ಸಿಫಿಕೆಶನ್ ಆ್ಯಂಡ್ ಹಾರ್ಟಿಕಲ್ಚರಲ್ ಕ್ರಾಪ್ಸ್(2009) ಅಧ್ಯಯನದಲ್ಲಿ ಭಾರತದಲ್ಲಿ ತೋಟಗಾರಿಕೆ ಬೆಳೆಗಳಿಗೆ ಹೆಚ್ಚಿನ ಬೇಡಿಕೆಯಿದೆ, ಹಾಗಾಗಿ

ಬೆಳೆಗಳ ಉತ್ಪಾದನೆಯಲ್ಲಿ ಹೆಚ್ಚಿನ ಬದಲಾವಣೆಗಳನ್ನು ತರಬೇಕು. ಅದು ಕೇವಲ ವಿವಿಧ ಬೆಳೆಗಳನ್ನು ಬೆಳೆಯುವದು ಮಾತ್ರವಲ್ಲ, ಅನೇಕ ರೀತಿಯ ನೀತಿ ನಿಯಮಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ.[11] ತೋಟಗಾರಿಕೆ ಬೆಳೆಗಳಲ್ಲಿ ಬದಲಾವಣೆಯನ್ನು ತರುವುದರಿಂದ ದೇಶದಲ್ಲಿ ತೋಟಗಾರಿಕೆ ಬೆಳೆಗಳ ಹೊಸ ನೆಲೆಗಳನ್ನು ಉತ್ಪಾದನೆಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ, ಇದರಿಂದ ತೋಟಗಾರಿಕೆ ಬೆಳೆಗಳಲ್ಲಿ ವೈವಿಧ್ಯತೆಯನ್ನು ತರಲು ಅನುಕೂಲವಾಗುವುದಲ್ಲದೆ ಆರ್ಥಿಕವಾಗಿ ಸಣ್ಣರೈತರು ಸಬಲರಾಗಲು ಅನುಕೂಲವಾಗುತ್ತದೆ ಎನ್ನುವ ಅಂಶವನ್ನು ತಿಳಿಸಿದ್ದಾರೆ. ದೇಶದಲ್ಲಿ ಹಣ್ಣು ಮತ್ತು ತರಕಾರಿಗಳ ಬೇಡಿಕೆ ಹೆಚ್ಚಿದ್ದು ಅದು 2001–40 ಕೆ.ಜಿ.ಇದ್ದದ್ದು, 2015ರಲ್ಲಿ 60%ರಷ್ಟು ಹೆಚ್ಚಾಗಿದೆ.

ವಿಜಯಕುಮಾರ್, ಯಾನ್ ಅನಾಲಿಟಿಕಲ್ ಸ್ಟಡಿ ಆಫ್ ಡಬ್ಲ್ಯುಟಿಓ ಆನ್ ದಿ ಇಂಡಿಯನ್ ಅಗ್ರಿಕಲ್ಚರ್ ಸೆಕ್ಟರ್(2014) ಭಾರತ ದೇಶದಲ್ಲಿ ಕೃಷಿಯು ಕೇವಲ ಆರ್ಥಿಕ ದೃಷ್ಟಿಯಿಂದ ಮಾತ್ರವೇ ಮುಖ್ಯವಾಗಿರುವುದಿಲ್ಲ, ಅಲ್ಲದೆ ಇನ್ನು ಅನೇಕ ಕಾರಣಗಳಿಂದಲೂ ಕೃಷಿಯು ಭಾರತದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂದಿದ್ದಾರೆ.[12] ಭಾರತದಲ್ಲಿ ಶೇಕಡ 60% ರಷ್ಟು ಜನರು ಕೃಷಿಯಲ್ಲಿ ತೊಡಗಿದ್ದು ವರ್ಲ್ಡ್ ಟ್ರೇಡ್ ಆರ್ಗನೈಜೇಶನ್ ರವರ ಪ್ರಕಾರ 2012ರಲ್ಲಿ ಅಂಕಿ ಅಂಶಗಳ ಪ್ರಕಾರ(ಇಂಟರ್ ನ್ಯಾಶನಲ್ ಟ್ರೇಡ್)ಅಂತಾರಾಷ್ಟ್ರೀಯ ಮಾರಾಟವು ಯು.ಎಸ್.ಡಾಲರ್‌ನ 1.66 ಟ್ರೆಲಿಯನ್ ರಫ್ತು ಮತ್ತು 1.82 ಟ್ರೆಲಿಯನ್ ಆಮದು ಮಾಡಿಕೊಳ್ಳುತ್ತಿದೆ. ಪ್ರಪಂಚದಲ್ಲಿಯೇ ಭಾರತ ದೇಶವು ಹಾಲು, ಸೆಣಬು ಕಾಳುಗಳ ಉತ್ಪಾದನೆಯಲ್ಲಿ ಪ್ರಥಮ ಸ್ಥಾನದಲ್ಲಿದೆ. ಹೀಗಾಗಿ ಕೃಷಿಯು ಭಾರತ ದೇಶದ ಬೆನ್ನೆಲುಬಾಗಿದೆ.

ಭಗವತಿ ಮತ್ತು ಶ್ರೀನಿವಾಸನ್ ಅವರು ಭಾರತದ ವಿದೇಶಿ ವಿನಿಮಯದ ಕುರಿತು ಹೆಚ್ಚಿನ ಅಧ್ಯಯನವನ್ನು ಮಾಡುತ್ತಾ ಸರ್ಕಾರದ ನೀತಿ ನಿಯಮಗಳು ದೇಶದ ಅಭಿವೃದ್ಧಿಗೆ ಹೇಗೆ ಸಹಾಯವಾಗಲಿವೆ ಎನ್ನುವ ಅಂಶವನ್ನು ಅವರು 1951–70ರ ದಶಕದಲ್ಲಿ ಭಾರತ ದೇಶದಲ್ಲಿದ್ದ ವಿದೇಶಿ ವಿನಿಮಯದ ನೀತಿ ನಿಯಮಗಳ ಗುಣಮಟ್ಟವನ್ನು ಪರಿಶೀಲಿಸಿದ್ದಾರೆ.[13] ಅವರು ತಮ್ಮ ಅಧ್ಯಯನದಲ್ಲಿ ಕೆಳಗಿನ ಫಲಿತಗಳನ್ನು ಕಂಡುಕೊಂಡಿದ್ದಾರೆ.

1. ಸರ್ಕಾರವು ಹೆಚ್ಚಾಗಿ ಆಮದು ಮಾಡಿಕೊಳ್ಳುವುದಕ್ಕೆ ಬದಲಿಯಾಗಿ ಯಾವ ನೀತಿ ನಿಯಮಗಳನ್ನು ಪಾಲಿಸಬೇಕು.
2. ಸರ್ಕಾರವು ರಫ್ತು ಹೆಚ್ಚಿಸುವ ಕ್ರಮಗಳನ್ನು ಕೈಗೊಳ್ಳುತ್ತಿಲ್ಲ.
3. ಸರ್ಕಾರವು ಹೆಚ್ಚಾಗಿ ಆಮದು ಮಾಡಿಕೊಳ್ಳುವುದಕ್ಕೆ ಬದಲಿ ಸೂತ್ರಗಳನ್ನು ಬಳಸುತ್ತಿರುವುದರಿಂದ

ರಫ್ತಿನಲ್ಲಿ ಹೆಚ್ಚಳವಾಗುತ್ತಿಲ್ಲ ಇದರ ಹೊರತಾಗಿ ಸರ್ಕಾರವು ಕೆಲವು ರಫ್ತು ಹೆಚ್ಚಿಸಲು ತೆಗೆದುಕೊಂಡ ಕ್ರಮಗಳಿಂದ ರಫ್ತಿನಲ್ಲಿ ಗಣನೀಯ ಪ್ರಮಾಣ ಹೆಚ್ಚಳವಾಗಿದೆ.

ರಾಜಕುಮಾರ್ ಮಹಾಜನ್ ಶೆಟ್ಟಿ(2008)ಯವರು ಫಾರ್ಮರ್ಸ್ ಲಿವೆರೆಜೆ ಅಂಡರ್ ಮಾರ್ಕೆಟ್ ಇನ್‌ಟರ್‌ವೆನ್‌ಶನ್ ಸ್ಕೀಮ್ ಅಧ್ಯಯನದಲ್ಲಿ ಸಂಶೋಧಕರು ದರ ನಿಗಧಿ ಪಡಿಸುವಲ್ಲಿ ಸರ್ಕಾರದ ಯೋಜನೆಗಳು ಅಂದರೆ(ಮಾರ್ಕೆಟ್ ಇಂಟರ್ ನ್ಯಾಶನಲ್ ಸ್ಕೀಂ)ಫ್ಲೋರ್ ಪ್ರೈಸ್ ಸ್ಕೀಂ ಅನ್ನು ಕೃಷಿ ಬೆಳೆಗಳಿಗೆ ಮತ್ತು ತೋಟಗಾರಿಕೆ ಬೆಳೆಗಳಿಗೆ ರೈತರು ಬೆಳೆದ ಉತ್ಪನ್ನಗಳ ಬೆಲೆ ಮಾರುಕಟ್ಟೆಯಲ್ಲಿ ಕಡಿಮೆಯಾದಾಗ 100 ಕೋಟಿಯಷ್ಟು ಹಣವನ್ನು ಕಾಯ್ದಿರಿಸಿ ಆ ಹಣವನ್ನು ಬೆಲೆ ನಿಗದಿಪಡಿಸಲು ಬಳಸಿಕೊಳ್ಳಲಾಗುತ್ತದೆ.[14] ಕೇಂದ್ರ ಸರ್ಕಾರದ ಎಂ.ಎಸ್.ಪಿ. ನೊಂದಿಗೆ, ರಾಜ್ಯ ಸರ್ಕಾರವು ಮಿನಿಮಮ್ ಸಪೋರ್ಟ್ ಪ್ರೈಸನ್ನು(ಮೊತ್ತವನ್ನು)ಹಣವನ್ನು ರೈತರಿಗೆ ಸರಿಯಾದ ಸಮಯಕ್ಕೆ ಸಂದಾಯವಾಗುವಂತೆ ನೋಡಿಕೊಳ್ಳುತ್ತಾರೆ. 2004–05ರಲ್ಲಿ ಉತ್ಪನ್ನಗಳಾದ ಈರುಳ್ಳಿ ಮತ್ತು ಮೆಕ್ಕೆಜೋಳಗಳಿಗೆ ತಲಾ ರೂ.6.58 ಕೋಟಿ ಮತ್ತು ರೂ.48 ಕೋಟಿಯನ್ನು ರಾಜ್ಯದಲ್ಲಿ(ಫ್ಲೋರ್ ಫ್ರೈಸ್ ಸ್ಕೀಂ)ಸಂಗ್ರಹಿಸಲಾಗಿದೆ(ಎಫ್.ಪಿ.ಎಸ್–ಫ್ಲೋರ್ ಫ್ರೈಸ್ ಸ್ಕೀಂ– ಸರ್ಕಾರವು ರೈತರಿಗೆ ಮಿನಿಮಮ್ ಪ್ರೈಸ್ ಕೊಟ್ಟು, ಸಪೋರ್ಟ್ ಮಾಡುವುದು).

ಈ ಒಂದು ನೀತಿ ನಿಯಮದಡಿಯಲ್ಲಿ ರೈತರನ್ನು ಸಂದರ್ಶಿಸಿದಾಗ ಈರುಳ್ಳಿ ಮತ್ತು ಮೆಕ್ಕೆಜೋಳ ಬೆಳೆದ ರೈತರ ಉತ್ಪನ್ನಗಳಿಗೆ ಸರ್ಕಾರವು ಕೊಡುವ ಎಫ್.ಪಿ.ಎಸ್.ಯೂ ಅನೇಕ ರೀತಿಯ ಕಾರ್ಯಕ್ರಮಗಳನ್ನು ಒಳಗೊಂಡಿದೆ. ಹಾಗೆಯೇ ಎಂ.ಐ.ಎಸ್.ನಲ್ಲಿ ಹಣ ಸಂದಾಯವಾಗುವುದು ತುಂಬಾ ತಡವಾಗುತ್ತದೆ. ಅಲ್ಲದೆ ರೈತರು ಈರುಳ್ಳಿ ಬೆಳೆಯು ಬೇಗನೆ ಕೆಟ್ಟು ಹೋಗುವುದರಿಂದ ಈರುಳ್ಳಿ ಬೆಳೆಯನ್ನು ಸಂರಕ್ಷಿಸಲು ಬೇಕಾದ ಸೌಕರ್ಯಗಳ ಕೊರತೆಯೂ ಹೆಚ್ಚಾಗಿದೆ ಮತ್ತು ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ರೈತರು ತೊಂದರೆಗಳನ್ನು ಎದುರಿಸುತ್ತಾರೆ. ಎಂ.ಐ.ಎಸ್.ಬೆಲೆಯೂ ಅಧಿಕವಾಗಿದೆ ಎನ್ನುವ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ಅಲಿ ಮತ್ತು ಕಪೂರ್ ಅವರು ದಿ ಪರ್‌ಸೆಪ್‌ಷನ್ಸ್ ಆಫ್ ಫಾರ್ಮರ್ಸ್ ಅಬೌಟ್ ರಿಸ್ಕ್ಸ್ ಇನ್ ಪ್ರೊಡಕ್ಷನ್ ಆಫ್ ಫ್ರೂಟ್ ಆ್ಯಂಡ್ ವೆಜಿಟೆಬಲ್ಸ್(2008) ಅಧ್ಯಯನದಲ್ಲಿ ಉತ್ತರ ಪ್ರದೇಶದ ಆರು ಜಿಲ್ಲೆಗಳನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದು ಅಧ್ಯಯನದಲ್ಲಿ ಉತ್ಪಾದನೆ ಮತ್ತು ಬೆಲೆಗಳಿಂದ ಮುಖ್ಯವಾಗಿ ತರಕಾರಿ ಬೆಳೆಗಳಿಗೆ ಮತ್ತು ಹಣ್ಣುಗಳಿಗೆ ಸಂಬಂಧಿಸಿದಂತೆ ಅನೇಕ ರೀತಿಯ ತೊಂದರೆಗಳು ಎದುರಾಗುತ್ತವೆ ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ.[15] ಅಧ್ಯಯನದಲ್ಲಿ ಸಾರ್ವಜನಿಕವಾಗಿ ಸರ್ಕಾರದ ಮಧ್ಯಸ್ಥಿಕೆಯಿಂದ ಮಾರಾಟಗಾರರಿಗೆ ಎದುರಾಗುವ ತೊಂದರೆಗಳನ್ನು ಸ್ವಲ್ಪ ಮಟ್ಟಿಗೆ ಕಡಿಮೆಗೊಳಿಸಬಹುದು ಅಂದರೆ ಸರಿಯಾದ ಸಮಯಕ್ಕೆ

ಮಾಹಿತಿ ರವಾನೆ ಹಣಕಾಸಿನ ಸಾಲ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸುವುದು, ಮತ್ತು ಮಾರುಕಟ್ಟೆಯಲ್ಲಿ ಬೆಲೆಗಳನ್ನು ಪ್ರೋತ್ಸಾಹಿಸುವುದರಿಂದ ವಿವಿಧ ರೀತಿಯ ಇನ್‌ಶೂರೆನ್ಸ್ ಸ್ಕೀಮ್‌ಗಳನ್ನು ಬಿಡುಗಡೆ ಮಾಡುವುದರಿಂದ ಕನಿಷ್ಠ ರೈತರಿಗೆ (ಮಾರ್ಜಿನಲ್) ಸ್ವಲ್ಪ ಮಟ್ಟದ ಅನುಕೂಲವಾಗುತ್ತದೆ. ಇದರೊಂದಿಗೆ ರೈತರು ತಕ್ಕ ಮಟ್ಟಿಗೆ ಇವುಗಳ ಲಾಭವನ್ನು ಪಡೆಯಲು ಸಂಬಂಧಪಟ್ಟ ಅಧಿಕಾರಿಗಳು ಕಾಲ–ಕಾಲಕ್ಕೆ ರೈತರಿಗೆ ಎದುರಾಗುವ ಸಮಸ್ಯೆಗಳನ್ನು ಅರಿತು ರೈತರಿಗೆ ಸ್ಪಂದಿಸಿ ಸಂಬಂಧಪಟ್ಟ ಸರ್ಕಾರದ ಅನುಕೂಲವನ್ನು ಮಾಡಬೇಕು.

ಎ ಸ್ಟಡಿ ಆನ್ ಪ್ರೀಸಿಯಸ್ ಫಾರ್‌ಮಿಂಗ್ ಟೆಕ್ನಾಲಜಿ ಅಡಾಪ್ಟೇಶನ್ ಆ್ಯಂಡ್ ಪ್ರೊಡಕ್ಟಿವಿಟಿ ಆಫ್ ವೆಜಿಟೆಬಲ್ಸ್ ಇನ್ ರಿಸೋರ್ಸ್ ಫಾರ್ ಎನ್ವಿರಾನ್‌ಮೆಂಟ್ಸ್, ಮಹೇಶ್ವರಿ, ಅಶೋಕ ಆ್ಯಂಡ್ ಪ್ರದೀಪ್‌ವಾರ್ಮ್ (2008) ಅವರ ಈ ಅಧ್ಯಯನವು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.[16] ಈ ಅಧ್ಯಯನದಲ್ಲಿ ಮೊದಲನೆಯದಾಗಿ ತೋಟಗಾರಿಕೆ ಬೆಳೆಗಳ ಕುರಿತಾಗಿ ಮತ್ತು ಹಿಂದುಳಿದ ಕ್ಷೇತ್ರಗಳಲ್ಲಿ ತರಕಾರಿ ಬೆಳೆಗೆಳ ಕುರಿತು ಅಧ್ಯಯನವನ್ನು ಕೈಗೊಂಡಿದ್ದಾರೆ. ಈ ಅಧ್ಯಯನದಲ್ಲಿ ನಿಖರ ಬೇಸಾಯ ಪದ್ಧತಿಯಲ್ಲಿ ತಂತ್ರಜ್ಞಾನ ಬಳಕೆ ಮತ್ತು(ಹಿಂದುಳಿದ) ಕಳಪೆ ಗುಣಮಟ್ಟದ ವಾತಾವರಣದಲ್ಲಿ ತರಕಾರಿ ಬೆಳೆಯುವುದಾಗಿದ್ದು, ನಿಖರ ಬೇಸಾಯ ಪದ್ಧತಿ ಅಳವಡಿಕೆಯಿಂದ ಕೃಷಿ ಉತ್ಪನ್ನಗಳಲ್ಲಿ ಗಣನೀಯವಾಗಿ ಹೆಚ್ಚಳವಾಗಿದೆ. ಟೊಮೋಟೊ ಬೆಳೆಯಲ್ಲಿ ಶೇಕಡ 80%, ಬದನೆಕಾಯಿ ಬೆಳೆಯಲ್ಲಿ ಶೇಕಡ 34% ಎನ್ನುವ ಅಂಶವೂ ಬೆಳಕಿಗೆ ಬಂದಿದೆ. ಜೊತೆಗೆ ಅಧ್ಯಯನದಲ್ಲಿ ನಿಖರ ಬೇಸಾಯ ಪದ್ಧತಿಯ ಅಳವಡಿಕೆ ಕಡಿಮೆಯಾಗಿರುವುದಕ್ಕೆ ಆರ್ಥಿಕ ಪರಿಸ್ಥಿತಿ ಮತ್ತು ಸಾಲ ಸೌಲಭ್ಯದ ಕೊರತೆಯೂ ಕಾರಣ ಎಂದು ಸಂಶೋಧಕರು ತಿಳಿಸಿದ್ದಾರೆ.

ಡಿಸ್ಟ್ರಸ್ ಆ್ಯಂಡ್ ರಿಲೀಫ್ ಇನ್ ಫಾರ್‌ಮರ್ ಸೂಯಿಸೈಡ್ಸ್, ಬೈ ನಮ್‌ಬಿಓಪ್‌ಅಹೆರ್ feb 15, 2007 ಅಧ್ಯಯನದಲ್ಲಿ ಕೃಷಿಯು ದೇಶದ ಬೆನ್ನೆಲುಬಾಗಿದೆ ಎಂದು ಕೃಷಿಯ ಕುರಿತು ವಿಶ್ಲೇಷಿಸುತ್ತಾ ಕೃಷಿಯು ಭಾರತದ ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಹೇಳಿದ್ದಾರೆ. ಇಂದಿನ ಆಧುನಿಕತೆಯಲ್ಲಿ ಕೃಷಿಯು ಒಂದು ಕಡೆ ವ್ಯವಹಾರವಾಗಿಯೂ ಬೆಳೆಯುತ್ತಿದೆ[17] ಮತ್ತು ಇನ್ನೊಂದು ಕಡೆ ಕೃಷಿಯು ಅತೀವ ಹಣಕಾಸಿನ ತೊಂದರೆಯನ್ನು ಎದುರಿಸುತ್ತದೆ ಎಂಬುದನ್ನು ಹೇಳುತ್ತಾ ರೈತರು ಮತ್ತು ಕೃಷಿ ಕಾರ್ಮಿಕರು ಕೃಷಿಯಿಂದ ಜೀವನ ಸಾಗಿಸುತ್ತಿದ್ದಾರೆ. ಏಷ್ಯಾದಲ್ಲಿಯೇ ಕೃಷಿ ಅತಿ ಹೆಚ್ಚು ಜನರಿಗೆ ಜೀವನ ಕೊಟ್ಟಿದೆ ಮತ್ತು ಶೇಕಡ 60ರಷ್ಟು ಜನರು ಕೃಷಿಯನ್ನೇ ಅವಲಂಬಿಸಿದ್ದಾರೆ, ಕೃಷಿಯೂ ಗ್ರಾಮೀಣ ಪ್ರದೇಶದ ಸಂಸ್ಕೃತಿಯ ಭಾಗವಾಗಿದೆ ಎಂಬುದನ್ನು ವಿವರಿಸಿದ್ದಾರೆ. ಈ ಅಧ್ಯಯನದಲ್ಲಿ ರೈತರು ಅನಿಶ್ಚಿತ

ಮಳೆಗಾಲದಿಂದ ಮತ್ತು ಸರಿಯಾದ ಸಮಯಕ್ಕೆ ಹಣಕಾಸಿನ ನೆರವಿಲ್ಲದೆ ಹೆಚ್ಚುತ್ತಿರುವ ಬೀಜಗಳ ಬೆಲೆಗಳು ಮತ್ತು ಕೀಟನಾಶಗಳ ಬೆಲೆಗಳು ಇದರಿಂದಾಗಿ ರೈತರು ಮತ್ತು ಕೃಷಿ ಅವಲಂಬಿತ ಕಾರ್ಖಾನೆಗಳು ಸಂಕಷ್ಟಕ್ಕೆ ಒಳಗಾಗುತ್ತಿವೆ. ಇದಕ್ಕೆಲ್ಲ ಮೂಲಕಾರಣ ಆರ್ಥಿಕ ಸ್ವಾವಲಂಬನೆ ಇಲ್ಲದಿರುವುದರಿಂದ ಅನೇಕ ರೈತರು ಆತ್ಮಹತ್ಯೆಯಂತಹ ಕೃತ್ಯವನ್ನು ಎಸಗಿಕೊಳ್ಳುತ್ತಿದ್ದಾರೆ. ಈ ಅಧ್ಯಯನದಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿ ರೈತರು ಎದುರಿಸುತ್ತಿರುವ ಸಮಸ್ಯೆಗಳನ್ನು ಮುಖ್ಯವಾಗಿ ವಿಶ್ಲೇಷಿಸಲಾಗಿದೆ. ಸಂಶೋಧಕರು ಬ್ರಿಟಿಷರು ಭಾರತದಲ್ಲಿ ಆಡಳಿತ ನಡೆಸುತ್ತಿದ್ದ ಕಾಲದಲ್ಲಿ, ಭಾರತದ ರೈತರ ಸ್ಥಿತಿಯು ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಬೆಳೆದು ಸಾಲದಲ್ಲೆಯೇ ಸಾಯುತ್ತಿದ್ದರು. ದುರ್ದೈವವೆಂದರೆ ಸ್ವಾತಂತ್ರ್ಯ ಸಿಕ್ಕು 60 ವರ್ಷ ಕಳೆದರೂ ಭಾರತದ ರೈತರ ಸ್ಥಿತಿಯು ಹಾಗೆಯೇ ಇದ್ದು ರೈತರು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿ ಸಾವಿಗೀಡಾಗುವವರ ಸಂಖ್ಯೆ ಹೆಚ್ಚುತ್ತಿದ್ದೆ. ರೈತರಿಗೆ ಬ್ಯಾಂಕುಗಳಲ್ಲಿ ಮೂರು ತರದ ಸಾಲ ಸೌಲಭ್ಯಗಳು ಲಭ್ಯವಿವೆ, ಅವು ಅಲ್ಪಾವಧಿಯ ಅಂದರೆ 15 ತಿಂಗಳುಗಳಿಗೆ, ಮಧ್ಯಮಾವಧಿಯು ನಾಲ್ಕರಿಂದ ಐದು ವರ್ಷಗಳು ಮತ್ತು ಹೆಚ್ಚಿನ ಅಂದರೆ ಹದಿನೈದರಿಂದ ಇಪ್ಪತ್ತು ವರ್ಷಕ್ಕೂ ಹೆಚ್ಚಿನ ಸಾಲ ಸೌಲಭ್ಯಗಳಾಗಿರುತ್ತವೆ.

ರೈತರು ಹೆಚ್ಚಾಗಿ ಬಾವಿಗಳನ್ನು ತೆಗೆಸಲು, ಟ್ರಾಕ್ಟರ್‌ಗಳನ್ನು ಕೊಂಡುಕೊಳ್ಳಲು, ಕೃಷಿ ಸಲಕರಣೆಗಳನ್ನು ಕೊಳ್ಳಲು ಮಧ್ಯಮಾವಧಿಯ ಸಾಲವನ್ನು ಮತ್ತು ಕೃಷಿಯ ಭೂಮಿಯನ್ನು ಕೊಳ್ಳಲು ಅದರ ಗುಣಮಟ್ಟವನ್ನು ಹೆಚ್ಚಿಸಲು ಹೆಚ್ಚಿನ ಅವಧಿಯ ಸಾಲವನ್ನು ಪಡೆಯುತ್ತಾರೆ. ಹಾಗೆಯೇ ರೈತರು ಬಿತ್ತನೆಗೆ, ಕಟಾವಿಗೆ, ಬೀಜಗೊಬ್ಬರಕ್ಕೆ ಮತ್ತು ಅನೇಕ ಸಲ ಮದುವೆಗಳಂತಹ ಸಮಾರಂಭಕ್ಕೂ ಮತ್ತು ಸಾಂಪ್ರದಾಯಿಕ ಆಚರಣೆಗಳಿಗೂ ಸಾಲವನ್ನು ಪಡೆಯುತ್ತಾರೆ. ಈ ರೀತಿಯ ಸಾಲಗಳನ್ನು ಮಾಡಿ ಅನಿಶ್ಚಿತ ಮಳೆಗಾಲದಿಂದಲೂ(ಅತೀವೃಷ್ಟಿ ಅಥವಾ ಅನಾವೃಷ್ಟಿ) ಬೆಳೆ ನಾಶದಿಂದಲೋ ನ್ಯಾಯವಾದ ಬೆಲೆ ಸಿಗಲಾರದೆಯೋ ಸಾಲಬಾಧೆಯಿಂದ ರೈತರು ಆತ್ಮಹತ್ಯೆಗೆ ಮುಂದಾಗುತ್ತಾರೆ. ಹಾಗೆಯೇ ಇತ್ತೀಚಿನ ದಿನಗಳಲ್ಲಿ ರೈತರು ಕೆಲವು ಸಲ ಉತ್ಪಾದನೆ ಹೆಚ್ಚಾಗಿಯೂ ಅದಕ್ಕೆ ಸರಿಯಾದ ಬೆಲೆ ಸಿಗದೆ ನಷ್ಟವನ್ನು ಅನುಭವಿಸಿ ಇದರಿಂದಲೂ ಮನನೊಂದು ಆತ್ಮಹತ್ಯೆಯಂತಹ ಕೃತ್ಯಕ್ಕೆ ಶರಣಾಗುತ್ತಿದ್ದಾರೆ. ಅದರಲ್ಲಿಯೂ ಭಾರತದಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿಯೇ ಅತಿ ಹೆಚ್ಚಿನ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. 2003ರಲ್ಲಿ ಪ್ರಕಾರ 1236 ರೈತರು ಕೇವಲ ಮಹಾರಾಷ್ಟ್ರದಲ್ಲಿಯೆ ಇಂತಹ ಪ್ರಕರಣಗಳು ದಾಖಲಾಗಿರುತ್ತವೆ. ಈ ಅಧ್ಯಯನದಲ್ಲಿ ಸಂಶೋಧಕರು ರೈತರು ಆತ್ಮಹತ್ಯೆಗೆ ಕಾರಣವಾದ ಅಂಶಗಳನ್ನು ಈ ರೀತಿ ಪಟ್ಟಿ ಮಾಡಿದ್ದಾರೆ. ಮನಿಪೋಲ್ಡ್ ಫಿನಾಮಿನ, ಹೆಚ್ಚಾಗಿರುವ ಕೃಷಿ ಉತ್ಪಾದನಾ ವೆಚ್ಚ, ಪರಿಣಾಮಕಾರಿ ಮಾರುಕಟ್ಟೆಯ ಕೊರತೆ, ಮದುವೆಗಳು ಮತ್ತು ಸಾಂಸಾರಿಕ ಜವಾಬ್ದಾರಿಗಳು,

ಧಾರ್ಮಿಕ ಆಚರಣೆಗಳು, ದುಂದುವೆಚ್ಚ, ಬ್ಯಾಂಕುಗಳ ವರ್ತನೆ, ಖಾಸಗಿ ಹಣ ಲೇವಾದೇವಿಗಾರರ ಶೋಷಣೆ, ಸಾಮಾನ್ಯ ಕಾಯಿಲೆಗಳು ಮತ್ತು ಮಾರಣಾಂತಿಕ ಕಾಯಿಲೆಗಳು.

ಈ ಅಧ್ಯಯನವು ಗುರುತಿಸಿರುವ ಅಂಶಗಳೆಂದರೆ ರೈತರು ಆತ್ಮಹತ್ಯೆಗೆ ಒಳಗಾಗುತ್ತಿರುವ ಪ್ರದೇಶವು ಹಿಂದುಳಿದಿದ್ದಾಗಿದೆ ಮತ್ತು ಅಲ್ಲಿನ ಹೆಚ್ಚಿನ ರೈತರು ಮಳೆಯಾಧಾರಿತ ವ್ಯವಸಾಯ ಮಾಡುತ್ತಿದ್ದಾರೆ. ಈ ಭಾಗದ ರೈತರಿಗೆ ಯಾವುದೇ ರೀತಿಯ ನೀರಾವರಿ ಸೌಲಭ್ಯಗಳಿಲ್ಲ ಮತ್ತು ಹಣಕಾಸಿನ ಸೌಲಭ್ಯವೂ ಇರುವುದಿಲ್ಲ. ಅವರು ಮೊದಲೇ ಆರ್ಥಿಕವಾಗಿ ಹಿಂದುಳಿದಿರುವುದರಿಂದ ಮತ್ತು ರೈತರು ಹಳೆಯ ಪದ್ಧತಿಯ ಬೇಸಾಯನ್ನು ಮಾಡುತ್ತಿರುವುದು ಈ ಮುಂತಾದ ಕಾರಣಗಳನ್ನು ರೈತರ ಆತ್ಮಹತ್ಯೆಗೆ ನೀಡಿದ್ದಾರೆ. ಭಾರತ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿದ್ದು ಇಲ್ಲಿರುವ ಹಳೆಯ ನೀತಿ ನಿಯಮಗಳನ್ನು ಪುನಾರಚನೆ ಮಾಡಿ ಈಗಿನ ಕಾಲಕ್ಕೆ ಅನುಗುಣವಾಗಿ ರೈತರಿಗೆ ಅನುಕೂಲವಾಗುವಂತೆ ರಚನೆ ಮಾಡಬೇಕು ಎಂದು ತಿಳಿಸಿದ್ದಾರೆ. ಈ ಪ್ರಸ್ತುತ ಅಧ್ಯಯನವು ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದಕ್ಕೆ ಕಾರಣಗಳನ್ನು ಮತ್ತು ಅದಕ್ಕೆ ತಕ್ಕ ಪರಿಹಾರಗಳನ್ನು ಸೂಚಿಸಲು ಪ್ರಯತ್ನಿಸುತ್ತಾರೆ. ರೈತರಿಗೆ ಸಾಲ ತೆಗೆದುಕೊಳ್ಳುವಾಗ ಇರುವ ಜವಾಬ್ದಾರಿಯು ಅದನ್ನು ತೀರಿಸುವಾಗ ಇಲ್ಲದಾಗಿರುತ್ತದೆ. ಕೆಲವು ಸಲ ಅವರು ಹಬ್ಬ ಆಚರಣೆಗೆ ಸಾಲ ತೆಗೆದುಕೊಂಡು ಹಣವನ್ನು ವ್ಯಯಿಸಿ, ಕೃಷಿಯಲ್ಲಿ ಸರಿಯಾದ ಉತ್ಪಾದನೆ ಇಲ್ಲದೆ ಸಂಕಷ್ಟಕ್ಕೆ ಒಳಗಾಗುತ್ತಾರೆ. ಅನೇಕ ಸಲ ಬ್ಯಾಂಕುಗಳು ತುಂಬಾ ಅವಮಾನವೀಯವಾಗಿ ರೈತರೊಂದಿಗೆ ವರ್ತಿಸುತ್ತವೆ ಎನ್ನುವ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ಹಾಗೆಯೇ ಲೇಖನದಲ್ಲಿಯ ನ್ಯೂನತೆಗಳೆಂದರೆ ಮೊದಲನೆಯದು, ಅನೇಕ ಸಲ ರೈತರು ಸಾಲದ ಹಣವನ್ನು ಸರಿಯಾಗಿ ಬಳಸಿ ಉತ್ಪಾದನೆ ಬಂದರೂ, ತಕ್ಕ ಬೆಲೆ ಸಿಗದೆ ತೊಂದರೆಗೆ ಒಳಗಾಗುತ್ತಾರೆ ಎನ್ನುವ ಅಂಶವನ್ನು ತಿಳಿಸಿರುವುದಿಲ್ಲ. ಎರಡನೆಯದು, ನೀತಿ ನಿಯಮಗಳ ಪ್ರಕಾರ ಕೃಷಿ ಮಾರುಕಟ್ಟೆಯಾಗಲಿ ಹಣಕಾಸಿನ ಸಂಸ್ಥೆಗಳಾಗಲಿ ಸರ್ಕಾರಿ ಸಂಸ್ಥೆಗಳಾಗಲಿ ಪಾರದರ್ಶಕತ್ವದ ಕೊರತೆಯಿಂದಾಗಿ ನಿಜ ವಾದ ಫಲಾನುಭವಿ ರೈತರಿಗೆ ಸಹಾಯ ದೊರೆಯದೆ ಇನ್ನ್ಯಾವೋ ರೈತರಿಗೆ(ರೈತರಿಗೆ ಅಲ್ಲದೆಯೂ ಇರಬಹುದು) ದೊರೆಯುವ ಅವಕಾಶವಿರುತ್ತದೆ. ಮೂರನೆಯದು, ರೈತರು ಮಾರುಕಟ್ಟೆಯಲ್ಲಿ ದಲ್ಲಾಳಿಗಳಿಂದ ಮತ್ತು ಕೆಲವು ಬ್ಯಾಂಕುಗಳಿಂದಲೂ ಒತ್ತಡಕ್ಕೊಳಗಾಗಿ ಸಾವಿಗಿಡಾಗಿದ್ದಾರೆ ಎಂಬ ಅಂಶವನ್ನು ಸಂಶೋಧಕರು ಪ್ರಧಾನವಾಗಿ ಚರ್ಚಿಸಿರುವುದಿಲ್ಲ.

ಲೇಬರ್ ಮಾರ್ಕೆಟ್ ಇಶ್ಯೂಸ್ ಇನ್ ಇಂಡಿಯಾ ಬೈ ಅಜಯ್ ನೋಟ್ ಅಧ್ಯಯನದಲ್ಲಿ ಸಂಶೋಧಕರು ಭಾರತದಲ್ಲಿ ಕೃಷಿಯು ಒಂದು ಆರ್ಥಿಕ ಸ್ವಾವಲಂಬನೆಗೆ ದಾರಿಯಾಗಿದೆ ಮತ್ತು ಕೃಷಿಯಿಂದ ಶೇ.3/5ರಷ್ಟು ಜನರಿಗೆ ಕೆಲಸವನ್ನು ಒದಗಿಸಿದೆ ಎಂಬ ಅಂಶದ ಜೊತೆಗೆ

ಒಂದು 1/5ರಷ್ಟು ದೇಶಕ್ಕೆ ಆದಾಯವನ್ನು ತರುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಅದರಲ್ಲಿ 2/3 ರಷ್ಟು ಗ್ರಾಮೀಣ ಜನತೆ ಕೃಷಿಯಲ್ಲಿ ತೊಡಗಿದ್ದು ಉಳಿದ ಜನತೆಯು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.[18] ಹಾಗೆಯೇ ಕಳೆದ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಕೃಷಿ ಕಾರ್ಮಿಕರ ಸಂಖ್ಯೆಯೂ ಗಣನೀಯವಾಗಿ ಅಂದರೆ, ಶೇ.10ರಷ್ಟು ಕಡಿಮೆಯಾಗಿದೆ. ಇದರ ಪರಿಣಾಮವಾಗಿ ಕೃಷಿಯಿಂದಾಗಿ ದೇಶದ ಆದಾಯದಲ್ಲಿ ಶೇ.15ರಷ್ಟು ಕಡಿಮೆಯಾಗಿದೆ. ಇದಕ್ಕೆ ಭಿನ್ನವಾಗಿ ನಗರ ಪ್ರದೇಶಗಳ ಕಾರ್ಖಾನೆಗಳಲ್ಲಿ ಕಾರ್ಮಿಕರ ಸಂಖ್ಯೆಯಲ್ಲಿ ಹೆಚ್ಚಳವಾಗಿದೆ. ಅದರಲ್ಲೂ ಹೆಚ್ಚಿನ ಕಾರ್ಮಿಕರು ಕಟ್ಟಡ ನಿರ್ಮಾಣದಂತಹ ಕೆಲಸಗಳಲ್ಲಿ ತೊಡಗಿರುತ್ತಾರೆ ಎನ್ನುವ ಅಂಶವನ್ನು ತಿಳಿಸಿರುತ್ತಾರೆ.

ಇನ್ನೋವೇಶನ್ ಇನ್ ರೂರಲ್ ಮಾರ್ಕೆಟಿಂಗ್ ಪ್ರೊ. ಪಂಕಜ್ ಅರೋರ(2012) ಅಧ್ಯಯನವು ದೇಶದ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಕುರಿತು ಚರ್ಚಿಸುತ್ತದೆ. ಜಾಗತೀಕರಣದ ಪ್ರಭಾವದಿಂದಾಗಿ ಗ್ರಾಮೀಣ ಮಾರುಕಟ್ಟೆಯ ಮೇಲೆ ಪರಿಣಾಮ ಬೀರುತ್ತಿದೆ.[19] ಈಗ ಗ್ರಾಮೀಣ ಮಾರುಕಟ್ಟೆಯ ಕುರಿತಾಗಿ ಇರುವ ಸಿದ್ಧಾಂತಗಳು ಹಳೆಯ ಮಾದರಿ ಮತ್ತು ಪರಿಕಲ್ಪನೆಗಳನ್ನು ಹೊಂದಿದ್ದು ಹೊಸ ಸಂದರ್ಭಕ್ಕೆ ಅಗತ್ಯ ಒಳನೋಟಗಳನ್ನು ನೀಡುತ್ತಿಲ್ಲ. ಹಾಗಾಗಿ ಗ್ರಾಮೀಣ ಮಾರುಕಟ್ಟೆಗೆ ಸಂಬಂಧಿಸಿದಂತೆ ಆಧುನಿಕ ತಂತ್ರಜ್ಞಾನವನ್ನು ಪರಿಣಾಮಕಾರಿಯಾಗಿ ಅಳವಡಿಸುವ ಅಗತ್ಯವನ್ನು ಪ್ರೋ. ಪಂಕಜ್ ಅರೋರ ಅವರು ವಿವರಿಸಿದ್ದಾರೆ. ಗ್ರಾಮೀಣ ಸರಕುಳಿಗೆ ವಿಸ್ತೃತ ಮಾರುಕಟ್ಟೆಯನ್ನು ಸೃಷ್ಟಿಸುವ ಅಗತ್ಯದ ಕುರಿತು ಪ್ರಸ್ತಾಪಿಸಿದ್ದಾರೆ. ಇದಕ್ಕೆ ಮಾಹಿತಿ ತಂತ್ರಜ್ಞಾನವನ್ನು ಸಹ ಬಳಸಿಕೊಳ್ಳಬಹುದಾಗಿದೆಯೆಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ವಿವರಿಸಿದ್ದಾರೆ.

ಸ್ಟ್ರಕ್ಚರ್ ಆಫ್ ರೂರಲ್ ಮಾರ್ಕೆಟ್ ಫಾರ್ ಅಚೀವಿಂಗ್ ವರ್ಟಿಕಲ್ ಕೋಅರ್ಡಿನೇಶನ್ ಇನ್ ದಿ ಇಂಡಿಯನ್ ಫುಡ್ ಚೈನ್ ಬೈ ಸ್ಯಾಡಿಪನ್ ರೈ(2011) ಅಧ್ಯಯನದಲ್ಲಿ ಭಾರತೀಯ ಆಹಾರ ಮಾರುಕಟ್ಟೆಯು ಅತ್ಯಂತ ವಿಶಾಲವಾಗಿದೆ. ಅದರಲ್ಲಿ ಕೊಳ್ಳುವವರು ಮತ್ತು ಮಾರುವವರಿಗೂ ಮಧ್ಯ ಮಧ್ಯವರ್ತಿಗಳ ದೊಡ್ಡ ಹಿಂಡೇ ಕಾರ್ಯ ನಿರ್ವಹಿಸುತ್ತಿರುತ್ತದೆ.[20] ಕೃಷಿ ಹಿಡುವಳಿಯಲ್ಲಿ ಈ ಮಧ್ಯವರ್ತಿಗಳ ಪಾತ್ರ ಅಧಿಕವಾಗಿರುವುದರಿಂದ ಆಹಾರ ಉತ್ಪಾದನೆಯ ಗುಣಮಟ್ಟಕ್ಕಿಂತಲೂ ಆಹಾರ ಸರಕುಗಳ ಬೆಲೆ ಹೆಚ್ಚಳಕ್ಕೆ ಕಾರಣವಾಗಿರುವ ಅಂಶವನ್ನು ವಿಶ್ಲೇಷಿಸುತ್ತಾರೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಯುನೈಟೆಡ್ ಕಿಂಗ್‌ಡಮ್, ಅಮೆರಿಕ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಾದ ಥೈಲ್ಯಾಂಡ್ ಇಂಡೋನೇಶ್ಯಾದಂತಹ ರಾಷ್ಟ್ರಗಳು ಆಹಾರ

ಉತ್ಪಾದನೆಯ ಅಭಿವೃದ್ಧಿಯಲ್ಲಿ ಬೀಜ ಕಂಪನಿಗಳು ಬಂಡವಾಳ ಹೂಡುವುದರ ಮೂಲಕ ಮಹತ್ವದ ಪಾತ್ರವನ್ನು ವಹಿಸುತ್ತಿವೆ.

ಮಾರ್ಕೆಟ್ ಡ್ರೈವೆನ್ ಇನ್ನೋವೇಶನ್ ಫಾರ್ ರೂರಲ್ ಪೆನಟ್ರೇಶನ್ ಸೂಭೊ ಚಟ್ಟೋಪಧ್ಯಾಯ ಮತ್ತು ಎ.ಕೆ.ಸರ್‌ಕಾರ್(ಸೆ.2011) ಅಧ್ಯಯನವು ಗ್ರಾಮೀಣ ಮಾರುಕಟ್ಟೆಯ ಕೆಳಸ್ತರದಿಂದ ಹೇಗೆ ಹೊಸ ಅನ್ವೇಷಣೆಗಳಿಂದ ಪ್ರವೇಶಿಸಿ ಅದನ್ನು ಸಕ್ರಿಯವಾಗಿಸಬಹುದೆಂಬುದನ್ನು ಅರ್ಥಪೂರ್ಣವಾಗಿ ವಿವರಿಸುತ್ತದೆ. ಹೀಗೆ ವಿನೂತನ ವಿಧಾನಗಳಿಂದ ಗ್ರಾಮೀಣ ಮಾರುಕಟ್ಟೆಯಲ್ಲಿ ಹೊಸ ಬಗೆಯ ಸಂಚಲನವನ್ನು ಸೃಷ್ಟಿಸಬಹುದಲ್ಲದೆ ಆಧುನಿಕ ಕಂಪೆನಿಗಳ ವಿಸ್ತರಣೆಗೂ ಅನುಕೂಲವಾಗುತ್ತದೆ[21] ಎಂಬುದನ್ನು ವಿವರಿಸಿದ್ದಾರೆ. ನಗರೀಕೃತ ವ್ಯವಸ್ಥೆಯಲ್ಲಿ ಬಳಕೆದಾರರು ಆಧುನಿಕ ತಂತ್ರಜ್ಞಾನದಿಂದ ಆವಿಷ್ಕಾರಗೊಂಡ ಅಥವಾ ಪರಿಷ್ಕೃತಗೊಂಡ ಉತ್ತಮ ಗುಣಮಟ್ಟದ ಸರಕು ಮತ್ತು ಸೇವೆಗಳನ್ನು ಕೊಳ್ಳುವ ಸುಧಾರಿತ ವ್ಯವಸ್ಥೆ ಇರುತ್ತದೆ. ಈ ಬಗೆಯಲ್ಲಿ ಗ್ರಾಮೀಣ ಮಾರುಕಟ್ಟೆಯನ್ನು ಉನ್ನತೀಕರಿಸುವುದರಿಂದ ಅದರ ವ್ಯಾಪ್ತಿಯನ್ನು ಹಿಗ್ಗಿಸಬಹುದೆಂಬುದಾಗಿ ಲೇಖಕರು ಅಭಿಪ್ರಾಯ ಪಡುತ್ತಾರೆ.

ರೂರಲ್ ಮಾರ್ಕೆಟ್ ರಿಸರ್ಚ್(2012) ಈ ಅಧ್ಯಯನದಲ್ಲಿ ನಗರೀಕೃತ ಮಾರುಕಟ್ಟೆಯ ಗ್ರಾಹಕರಿಗೂ ಮತ್ತು ಗ್ರಾಮೀಣ ಮಾರುಕಟ್ಟೆಯ ಗ್ರಾಹಕರಿಗೂ ಇರುವ ಮನಸ್ಥಿತಿಗಳನ್ನು ಅರ್ಥೈಸಿದಾಗ ಮಾತ್ರ ಗ್ರಾಮೀಣ ಮಾರುಕಟ್ಟೆಯ ಸ್ವರೂಪವನ್ನು ಅರ್ಥೈಸಲು ಸಾಧ್ಯವಾಗುತ್ತದೆಂಬುದನ್ನು ಲೇಖಕರು ವಿವರಿದ್ದಾರೆ.[22] ಗ್ರಾಮೀಣ ಮಾರುಕಟ್ಟೆಯನ್ನು ಅವಲಂಬಿಸಿರುವ ಗ್ರಾಹಕವರ್ಗವು ಅವರ ವೃತ್ತಿ ಆದಾಯ ಮತ್ತು ಆದಾಯದ ಹರಿವು ಮತ್ತು ಹೆಚ್ಚಿನ ಮಟ್ಟದ ಆಂತರಿಕ ಅವಲಂಬನೆಯ ಮೇಲೆ ಅವರ ಮನಸ್ಥಿತಿಯು ಆಧಾರವಾಗಿರುತ್ತದೆ. ಗ್ರಾಮೀಣ ಗ್ರಾಹಕರ ವರ್ತನೆಗಳು ನಗರದ ಗ್ರಾಹಕರಿಗಿಂತಲೂ ಭಿನ್ನವಾಗಿರುತ್ತದೆ. ನಗರದ ಗ್ರಾಹಕರ ಮನಸ್ಥಿತಿಯೂ ಬಾಹ್ಯ ಅವಲಂಬನೆಯ ಮೇಲೆ ಹೆಚ್ಚು ಕೇಂದ್ರೀಕೃತವಾಗಿರುತ್ತದೆಯೆಂಬುದನ್ನು ಪ್ರಸ್ತುತ ಪ್ರಬಂಧವು ವಿಶ್ಲೇಷಿಸುತ್ತದೆ. ಹಾಗಾಗಿ ಗ್ರಾಮೀಣ ಮಾರುಕಟ್ಟೆಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವ ಅಗತ್ಯವನ್ನು ವಿವರಿಸುತ್ತದೆ.

ಮಾರ್ಕೆಟ್ ಸ್ಟ್ರೆಟಜಿಸ್ ಫಾರ್ ರೂರಲ್ ಮಾರ್ಕೆಟಿಂಗ್ ಬೈ ಎಸ್.ಎನ್.ದೀಪಕ್(2010) ಅಧ್ಯಯನದಲ್ಲಿ ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸಲು ಅಗತ್ಯವಾದ ಪೂರ್ವಭಾವಿ ಸಿದ್ಧತೆಗಳನ್ನು ಹಾಗೂ ಯೋಜನೆಗಳ ಅಗತ್ಯವಿರುವುದನ್ನು ವ್ಯಾಪಾರಿ ಕಂಪನಿಗಳು ಕಂಡುಕೊಂಡಿವೆಯೆಂಬ ಅಂಶವನ್ನು ಈ ವರದಿಯು ಸ್ಪಷ್ಟಪಡಿಸುತ್ತದೆ.[23] ಯಾಕೆಂದರೆ ಗ್ರಾಮೀಣ

ಪ್ರದೇಶದಲ್ಲಿ ತಲಾ ವರಮಾನದಲ್ಲಿ ಹೆಚ್ಚಳ ಕಂಡುಬರುತ್ತಿದ್ದು ಗ್ರಾಹಕರ ಕೊಳ್ಳುವ ಸಾಮರ್ಥ್ಯವೂ ಕೂಡ ಹೆಚ್ಚಿದೆಯೆಂಬ ಅಂಶವನ್ನು ಪರಗಣಿಸಿ ಮಾರುಕಟ್ಟೆಯನ್ನು ವಿಸ್ತರಿಸುವ ಅವಶ್ಯಕತೆಯನ್ನು ಮನಗಂಡಿವೆ ಎಂಬ ಸಂಗತಿಯನ್ನು ಅಧ್ಯಯನವು ವಿವರಿಸುತ್ತದೆ.

ಟ್ಯಾಪಿಂಗ್ ಇಂಡಿಯಾಸ್ ರೂರಲ್ ಮಾರ್ಕೆಟ್ ಸಾರಾ ಹ್ಯೂಮನ್, ಇನ್‌ಕಮ್-ಜನರೆಂಟಿಗ್ ಪ್ರೊಜೆಕ್ಟ್ಸ್ ಇನ್ ರೂರಲ್ ಕಮಿಟೀಸ್, ಥಿಯರಿ ಆಫ್ ಪ್ರಾಕ್ಟಿಸ್ ಎ ಪರ್ಸ್ನಲ್ ರಿಪೋರ್ಟ್ಸ್ ಬೈ ಶಾಂತಿ ಕನ್ನನ್ (2009) ಜಾಗತೀಕರಣದ ಪ್ರಭಾವದಿಂದಾಗಿ ವಿದೇಶಗಳ ಸರಕುಗಳು ಇಂದು ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸಿವೆ. ಇಂದು ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಭಾರತದ ಈ ಗ್ರಾಮೀಣ ಮಾರುಕಟ್ಟೆಯ ಉತ್ತಮ ಅವಕಾಶಗಳನ್ನು ಒದಗಿಸುತ್ತವೆ ಎಂಬ ಸಂಗತಿಯನ್ನು ಗುರುತಿಸಿವೆ.[24] ಹಿಂದೂ ಪತ್ರಿಕೆಯ ಬರಹಗಾರರಾದ ಶಾಂತಿ ಕನ್ನನ್ ಅವರ ಪ್ರಕಾರ ಗ್ರಾಮೀಣ ಮಾರುಕಟ್ಟೆಯು ನಗರದ ಮಾರುಕಟ್ಟೆಗಿಂತ ದುಪ್ಪಟ್ಟು ಅವಕಾಶಗಳನ್ನು ಒದಗಿಸುತ್ತದೆಂಬುದಾಗಿ ಮತ್ತು ಬಹುರಾಷ್ಟ್ರೀಯ ಕಂಪೆನಿಗಳು ಇಂತಲ್ಲಿ ಜಾಣತನದಿಂದ ತಮ್ಮ ಯಶಸ್ಸು ಮತ್ತು ವೈಫಲ್ಯಗಳೆರಡರಿಂದಲೂ ಪಾಠ ಕಲಿಯಬೇಕಾದ ಅಂಶಗಳನ್ನು ವಿವರಿಸುತ್ತಾರೆ.

ರೂರಲ್ ಮಾರ್ಕೆಟಿಂಗ್ ಆರ್.ವಿ.ಬಡಿ ಮತ್ತು ಎನ್.ವಿ.ಬಡಿ(2002) ಈ ಅಧ್ಯಯನದಲ್ಲಿ ಭಾರತದ ಗ್ರಾಮೀಣ ಮಾರುಕಟ್ಟೆಯು ಶೇ.60ರಷ್ಟು ಗ್ರಾಮೀಣ ಮಾರುಕಟ್ಟೆಯೂ ಶೇ.110ರಷ್ಟಿದೆ ಆದುದರಿಂದ ಭಾರತದ ಕೃಷಿ ಮಾರುಕಟ್ಟೆಯಾಗಿ ವಿಶ್ವದ ಮಾರುಕಟ್ಟೆಯಲ್ಲಿ ಮುಖ್ಯ ಪಾತ್ರ ವಹಿಸುತ್ತಿದೆ ಎಂದು ತಿಳಿಸಿದ್ದಾರೆ.[25] ಈ ಅಧ್ಯಯನದಲ್ಲಿ ಮುಖ್ಯವಾಗಿ ತಿಳಿದುಕೊಳ್ಳುವುದೇನೆಂದರೆ ಗ್ರಾಮೀಣ ಮಾರುಕಟ್ಟೆಯು ಏಕೆ ಭಾರತದಲ್ಲಿ ಪ್ರಮುಖವಾಗಿದೆ ಎಂಬ ರಚನೆಯನ್ನು ಕಲ್ಪಿಸಿಕೊಟ್ಟಿದ್ದಾರೆ. ಅಧ್ಯಯನದಲ್ಲಿ ಗ್ರಾಮೀಣ ಮಾರುಕಟ್ಟೆಯ ಸಿದ್ಧಾಂತವನ್ನು ತಿಳಿಸಿದ್ದಾರೆ. ಅವುಗಳೆಂದರೆ, ಗ್ರಾಮೀಣ ಮಾರುಕಟ್ಟೆಯ ಸಿದ್ಧಾಂತವಾದ ರೈತರು ಬೀಜ, ಗೊಬ್ಬರ ಖರೀದಿ ಮಾಡಿ, ಬೀಜಗಳನ್ನು ಉತ್ತು ರೈತರು ಉತ್ಪನ್ನಗಳನ್ನು ಬೆಳೆದ, ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ಹೇಗೆ ಮಾರಾಟ ಮಾಡುತ್ತಾರೆ ಎನ್ನುವ ಪರಿಕಲ್ಪನೆಯನ್ನು ವಿವರಿಸಿದ್ದಾರೆ. ರೈತರು ಉತ್ಪನ್ನಗಳನ್ನು ಉತ್ಪಾದಿಸಲು ಬೇಕಾದ ಪರಿಕರಗಳನ್ನು ಹೇಗೆ ಖರೀದಿಸುತ್ತಾರೆ ಎನ್ನುವುದರೊಂದಿಗೆ, ರೈತರಿಗೆ ಅವಶ್ಯಕವಾದ ಹಣಕಾಸಿನ ನೆರವನ್ನು ಯಾವ ರೀತಿ ಪಡೆದು ಕೊಳ್ಳುತ್ತಾರೆ, ಮಾರುಕಟ್ಟೆಗೆ ರಸ್ತೆಗಳ ಸಂಪರ್ಕ, ದಾಸ್ತಾನುಗಳಿಗೆ ವೇರ್ ಹೌಸ್ ಸ್ಟೋರೇಜ್ ರೂಮ್ಸ್, ಶೀತಲೀಕರಣ ಘಟಕಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎನ್ನುವ ಕೃಷಿಗೆ ಸಂಬಂಧಪಟ್ಟ ಸೂಕ್ಷ್ಮ ವಿಚಾರಗಳನ್ನು ತಿಳಿಸಿದ್ದಾರೆ.

ಹಸಿರುಕ್ರಾಂತಿಯಾದ ನಂತರ ಗ್ರಾಮಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅಭಿವೃದ್ಧಿಯಾಗಿದ್ದಾರೆ, ಕಾರಣ ರೈತರಿಗೆ ಕೃಷಿಯ ಕುರಿತು ಹೆಚ್ಚಿನ ತಿಳಿವಳಿಕೆಗಳು ದೊರೆಯುತ್ತಿರುವುದರಿಂದ ಅಂದರೆ ಸರ್ಕಾರದಿಂದ ಗೊಬ್ಬರಗಳು, ನೀರಾವರಿ ಸೌಲಭ್ಯ, ಕ್ರಿಮಿನಾಶಕಗಳು, ಸುಧಾರಿತ ಬೀಜಗಳು, ಆಧುನಿಕ ಬೇಸಾಯದ ಉಪಕರಣಗಳು ದೊರೆಯುತ್ತಿರುವುದರಿಂದ ರೈತರು ಕೃಷಿಯಲ್ಲಿ ತಕ್ಕ ಮಟ್ಟಿಗೆ ಯಶಸ್ಸು ಕಂಡರೂ ಇತ್ತೀಚಿನ ಕಾಲಮಾನದಲ್ಲಿ ರೈತರ ಬೇಡಿಕೆಗಳು ಹೆಚ್ಚಾಗಿವೆ. ಇದರಿಂದ ಗ್ರಾಮೀಣ ಮಾರುಕಟ್ಟೆಯೂ ಸ್ಥಿರವಾಗಿಲ್ಲ ಎಂಬುದನ್ನು ಲೇಖಕರು ವಿವರಿಸಿದ್ದಾರೆ. ಹಾಗೆಯೇ ಈ ಕೃತಿಯಲ್ಲಿ ಅವರು ಗ್ರಾಮೀಣ ಮಾರುಕಟ್ಟೆಯ ರಚನೆ ಮತ್ತು ಹೇಗೆ ನಾವು ಅವುಗಳ ಗುಣಮಟ್ಟವನ್ನು ಹೆಚ್ಚಿಸಬಹುದೆಂಬುದನ್ನು ವಿಶ್ಲೇಷಿಸಲಾಗಿದೆ. ಪ್ರಸ್ತುತ ಕೃತಿಯಲ್ಲಿ ಅವರು ಹೇಗೆ ಭಾರತದಲ್ಲಿ ಗ್ರಾಮೀಣ ಮಾರುಕಟ್ಟೆ ಮುಖ್ಯ ಎಂಬುದನ್ನು ವಿವರಿಸುತ್ತಾರೆ. ಆದರೆ ಗ್ರಾಮೀಣ ಭಾಗದ ರೈತರು ಮಾರುಕಟೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಲೇಖಕರು ಎಲ್ಲಿಯೂ ತಮ್ಮ ಪುಸ್ತಕದಲ್ಲಿ ತಿಳಿಸಿಲ್ಲ.



ರೂರಲ್ ಮಾರ್ಕೆಂಟಿಗ್ ಮ್ಯಾನೇಜ್‌ಮೆಂಟ್, ದೇವೆಂದ್ರ ಪ್ರಸಾದ್ ಪಾಂಡೆ(1998) ಭಾರತದಲ್ಲಿ 700 ಮಿಲಿಯನ್ ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿದ್ದು, ಅದು ಜಗತ್ತಿನ ಜನಸಂಖ್ಯೆಯಲ್ಲಿ ಶೇಕಡ 12.2ರಷ್ಟಿದೆಯೆಂದೂ ಅಲ್ಲದೆ ಈ ಮಾರುಕಟ್ಟೆಯು ಸ್ವರೂಪದಲ್ಲಿ ಅಮೆರಿಕದ ಎರಡರಷ್ಟಿದೆಯೆಂಬುದನ್ನು ವಿವರಿಸುತ್ತಾ ಇಂತಹ ಮಾರುಕಟ್ಟೆಯ ಮೇಲೆ ಬಹುರಾಷ್ಟ್ರೀಯ ಕಂಪನಿಗಳ ವಕ್ರದೃಷ್ಟಿ ಬಿದ್ದಿರುವುದನ್ನು ಸಹ ವಿವರಿಸಲಾಗಿದೆ.[26] ಹಾಗೆಯೇ ಪ್ರಸ್ತುತ ಕೃತಿಯಲ್ಲಿ ಇತ್ತೀಚಿನ ದಿನಗಳಲ್ಲಿ ಹಲವಾರು ದೇಶೀಯ ಮತ್ತು ವಿದೇಶೀಯ ಕಂಪನಿಗಳು ಯಾವ ರೀತಿಯಲ್ಲಿ ಗ್ರಾಮೀಣ ಮಾರಕಟ್ಟೆಯನ್ನು ತಮ್ಮ ಉತ್ಪಾದನೆಗಳಿಗೆ ಮಾರುಕಟ್ಟೆಯನ್ನಾಗಿಸಿಕೊಂಡಿದ್ದಾರೆ ಹಾಗೂ ತಮ್ಮ ಜಾಣ್ಮೆಯನ್ನು ಗ್ರಾಮೀಣ ಪ್ರದೇಶದ ಗ್ರಾಹಕರನ್ನು ತಲುಪುವಲ್ಲಿ ಹೇಗೆ ಸಫಲರಾಗಿದ್ದಾರೆ ಎಂಬುದನ್ನು ಮತ್ತು ವಿದೇಶಿ ಕಂಪನಿಗಳು ಇನ್ನು ಅಧಿಕ ಬಂಡವಾಳವನ್ನು ಗ್ರಾಮೀಣ ಪ್ರದೇಶದಲ್ಲಿ ಹೂಡಲು ಮುಂದಾಗಿರುವುದನ್ನು ವಿಶ್ಲೇಷಿಸಿರುತ್ತಾರೆ. ಇನ್ನೂ ಅಕಾಡೆಮಿಕ್ ವಲಯದಲ್ಲಿಯೂ ಗ್ರಾಮೀಣ ಮಾರುಕಟ್ಟೆ ಅಂಶವು ಮಹತ್ವವನ್ನು ಪಡೆದುಕೊಂಡಿದೆ. ಹಲವಾರು ವಿಶ್ವವಿದ್ಯಾಲಯಗಳು ಗ್ರಾಮೀಣ ಮಾರುಕಟ್ಟೆ ಎಂಬ ವಿಷಯದ ಕುರಿತು ವಿಶೇಷ ವಿಷಯವನ್ನಾಗಿ ಪಠ್ಯಕ್ರಮದಲ್ಲಿ ಅಳವಡಿಸಿರುವುದನ್ನು ಇಲ್ಲಿ ಸ್ಪಷ್ಟಪಡಿಸಬಹುದು. ಹಲವಾರು ಸಂಶೋಧನಾ ಸಂಸ್ಥೆಗಳು ಈ ವಿಷಯದಲ್ಲಿ ಅಧ್ಯಯನ ಕೈಗೊಂಡಿರುವುದು ಗಮನಾರ್ಹ ಸಂಗತಿ.

ಕೇಸಸ್ ಇನ್ ರೂರಲ್ ಮಾರ್ಕೆಂಟಿಗ್, ಆ್ಯನ್ ಇಂಟಿಗ್ರೇಟೆಡ್ ಅಪ್ರೋಚ್, ಸಿ.ಎಸ್.ಜಿ. ಕೃಷ್ಣಾಚಾರ್ಯುಲು, ಲಲಿತಾ ರಾಮಕೃಷ್ಣನ್ ಅಧ್ಯಯನದಲ್ಲಿ ಗ್ರಾಮೀಣ ಮಾರುಕಟ್ಟೆಯ ಪ್ರಾಮುಖ್ಯತೆ ಮತ್ತು ಭಾರತದಲ್ಲಿ ಗ್ರಾಮೀಣ ವಲಯದಲ್ಲಿರುವ ಜನತೆ, ಅವರ ಬೇಡಿಕೆಗಳು, ಆದಾಯ ಮತ್ತು ಹಲವು ಕಂಪನಿಗಳು ಅವರನ್ನು ಹೇಗೆ ತಲುಪುತ್ತವೆ ಎಂಬುದನ್ನು ವಿವರಿಸಲಾಗಿದೆ.[27] ರೈತರಿಗೆ ಬೇಕಾಗುವ ಉಪಕರಣಗಳು ಮತ್ತು ರೈತರ ದಿನನಿತ್ಯದ ಪೂರೈಕೆಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಿದ್ದಾರೆ. ರೈತರು ಬೆಳೆದ ಬೆಳೆಗಳಿಗೆ ಯಾವ ರೀತಿ ಮಾರುಕಟ್ಟೆಯನ್ನು ಹುಡುಕುತ್ತಾರೆ ಹಾಗೂ ಅವರಿಗೆ ಅಗತ್ಯವಾದ ಹೊಸ ಆವಿಷ್ಕಾರದ ಉಪಕರಣಗಳು ಯಾವುವು ಮತ್ತವು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ದೇಶೀಯ ಅಥವಾ ಬಹುರಾಷ್ಟ್ರೀಯ ಕಂಪನಿಗಳು ಆಧುನಿಕ ಅಂಶಗಳನ್ನು ಬಳಸಿಕೊಂಡು ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸುತ್ತಿವೆ ಎಂಬುದನ್ನು ವ್ಯಾಖ್ಯಾನಿಸಲಾಗಿದೆ. ಈ ಅಧ್ಯಯನದಲ್ಲಿ ವಿಶೇಷವಾಗಿ ನಗರದ ಮತ್ತು ಗ್ರಾಮೀಣ ಮಾರುಕಟ್ಟೆಗಳ ಸ್ವರೂಪ ಮತ್ತವು ಯಾವ ಬಗೆಯಲ್ಲಿ ಭಿನ್ನವಾಗಿವೆ ಎಂಬುದನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಗ್ರಾಮೀಣ ಮಾರುಕಟ್ಟೆಯನ್ನು ಪ್ರವೇಶಿಸುವ ಮುನ್ನ ಅಲ್ಲಿ ಎದುರಾಗಲಿರುವ ತೊಂದರೆಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಬೇಕು. ಅಲ್ಲಿಯ ಜನರ ಜೀವನವಿಧಾನ, ಅಲ್ಲಿ ಉದ್ಭವಿಸಬಹುದಾದ ಸಮಸ್ಯೆ, ಸವಾಲುಗಳೇನು? ರೈತರ ಸವಾಲುಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೇಗೆ ಭಿನ್ನವಾಗಿವೆ ಮತ್ತು ಯಾವ ರೀತಿಯ ಯೋಜನೆಗಳನ್ನು ಅನುಸರಿಸಬೇಕು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಮಾರ್ಕೆಟ್ ರಿಸರ್ಚ್, ಬೈ ಡೇವಿಡ್ ಎ. ಆಖಿರ್, ಜಾರ್ಜಸ್ ಎಸ್ ಡೆ. ಅಧ್ಯಯನದಲ್ಲಿ ಮಾರುಕಟ್ಟೆಯ ಸಂಶೋಧನೆಯನ್ನು ಕೈಗೊಂಡು ಅಲ್ಲಿಯ ಬೇಡಿಕೆ, ಉತ್ಪಾದನೆ, ಅವಶ್ಯಕತೆಗಳು, ಅವರ ಜೀವನಶೈಲಿ, ಆರ್ಥಿಕ ಮತ್ತು ಸಾಮಾಜಿಕವಾಗಿ ರೈತರು ಹೇಗಿದ್ದಾರೆ ಮತ್ತು ರೈತರ ಮಾರುಕಟ್ಟೆಯ ನಿರೀಕ್ಷೆಗಳೇನು ಎಂಬುದನ್ನು ನಗರದ ಮಾರುಕಟ್ಟೆಗೆ ಹೋಲಿಸಿ ಹೇಳಿದ್ದಾರೆ.[28] ಅಧ್ಯಯನದಲ್ಲಿ ವಿಶ್ಲೇಷಿಸಿರುವ ಗ್ರಾಮೀಣ ಮಾರುಕಟ್ಟೆಯಲ್ಲಿನ ಅನಿಶ್ಚತತೆ ಮತ್ತು ಇರುವ ಸಮಸ್ಯೆಗಳನ್ನು ಈ ಕೆಳಗಿನಂತೆ ಕ್ರೋಡೀಕರಿಸಬಹುದಾಗಿದೆ.

1. ಪ್ರಾಕೃತಿಕ ಭಿನ್ನತೆಗಳು.
2. ಸಾಮಾಜಿಕ ಸಂಬಂಧಗಳಲ್ಲಿನ ವಿಲಕ್ಷಣತೆಗಳು.
3. ಮಾರುಕಟ್ಟೆಯಲ್ಲಿ ಅವಕಾಶಗಳ ಕೊರತೆ.
4. ನೈಸರ್ಗಿಕ ಅವಲಂಬನೆ.
5. ಋತುಮಾನಗಳಿಗನುಗುಣವಾದ ಆದಾಯ ಮತ್ತು ಉದ್ಯೋಗವಕಾಶಗಳು.

ಸೋಶಿಯಲ್ ಮಾರ್ಕೆಟಿಂಗ್ ಸ್ಟ್ರೇಟಜಿಸ್ ಫಾರ್ ಚೇಂಜಿಂಗ್ ಪಬ್ಲಿಕ್ ಬಿಹೇವಿಯರ್, ಬೈ ಡೆವಿಡ್ ಲಿನೋ(1999) ಅಧ್ಯಯನದಲ್ಲಿ ಕೇಂದ್ರ ಸರ್ಕಾರವು ಗ್ರಾಮೀಣ ಯೋಜನೆಗಳ ಮೂಲಕ ಆ ಪ್ರದೇಶಗಳಿಗೆ ಹೆಚ್ಚಿನ ನೆರವನ್ನು ನೀಡಿರುವುದರ ಕುರಿತು ಮತ್ತು ಆ ಯೋಜನೆಗಳ ಅನುಷ್ಠಾನಗಳ ಕುರಿತು ಚರ್ಚಿಸಲಾಗಿದೆ, ಉದಾಹರಣೆಗೆ ಗ್ರಾಮೀಣ ಉದ್ಯೋಗ ಖಾತ್ರಿಯೋಜನೆ.[29] ಈ ಯೋಜನೆಯ ಕಾರ್ಯರೂಪಕ್ಕೆ 18000 ಕೋಟಿ ಬಂಡವಾಳ ಬೇಕಾಗಿರುತ್ತದೆ. ಹಾಗೆಯೇ ಈ ಮೊತ್ತವನ್ನು ಯೋಜನೆಯಡಿಯಲ್ಲಿ ಸರಿಯಾಗಿ ಹಂಚಿಕೆ ಮಾಡಬೇಕಾಗಿರುತ್ತದೆ. ಗ್ರಾಮೀಣ ಪ್ರದೇಶಗಳ ರಸ್ತೆಗಳ ಮತ್ತು ಮಾರುಕಟ್ಟೆ ಯಾರ್ಡಗಳ ನಿರ್ಮಾಣಗಳಿಂದ ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಬಹುದೆಂಬುದನ್ನು ವಿವರಿಸಲಾಗಿದೆ.

ಮಾರ್ಕೆಟ್ ಬೇಸ್ಡ್ ಗೌರ್‍ನಮೆಂಟ್ ಆ್ಯಂಡ್ ದಿ ಚಾಲೆಂಜಸ್ ಫಾರ್ ರೂರಲ್ ಗೌರ್‍ನಮೆಂಟ್: ಯು. ಎಸ್. ಟ್ರೇಂಡ್ಸ್ ಬೈ ಮೈಲ್ಡ್ರೇಡ್ ಇ. ವಾರ್ನರ್(2007)ಅಧ್ಯಯನದಲ್ಲಿ ಉದಾರೀಕರಣ, ಖಾಸಗೀಕರಣ ಮತ್ತು ವಿಕೇಂದ್ರೀಕರಣ ಕಾರಣದಿಂದ ಭಾರತವು ಮಾರುಕಟ್ಟೆಗೆ ಸಂಬಂಧಿಸಿದ ನಿಯಮಗಳನ್ನು ರೂಪಿಸಬೇಕು. ಇಂತಹ ನಿಯಮಗಳನ್ನು ರೂಪಿಸುವುದರಿಂದ ಮಾರುಕಟ್ಟೆಯ (potentionality) ಸಂಭ್ಯಾವತೆಯೂ ಚದುರಿ ಹೊಗುವುದನ್ನು ತಪ್ಪಿಸಬಹುದು ಎನ್ನುವ ಅಂಶವನ್ನು ಚರ್ಚಿಸಿದ್ದಾರೆ.[30] ಹಾಗೆಯೇ ಈ ಖಾಸಗೀಕರಣ ಮತ್ತು ವಿಕೇಂದ್ರೀಕರಣ ಹಳ್ಳಿಗಳ ಮಟ್ಟದಲ್ಲಿ ಅಳವಡಿಸಿಕೊಳ್ಳುವುದು ಮತ್ತು ಅಂತಾರಾಷ್ಟ್ರೀಯ ಕಂಪನಿಗಳ ಪೈಪೋಟಿಯನ್ನು ಎದುರಿಸುವುದು, ಕಷ್ಟದ ಸಂಗತಿ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾ, 1992ರಿಂದ 2002 ರ ಅಂಕಿ ಅಂಶಗಳ ಪ್ರಕಾರ ಖಾಸಗೀಕರಣ ಮತ್ತು ವಿಕೇಂದ್ರೀಕರಣದಿಂದ, ಗ್ರಾಮೀಣ ಮಾರುಕಟ್ಟೆಯು ಪೈಪೋಟಿ ಎದುರಿಸದೆ ಹಿಂದುಳಿದಿದೆ. ಈ ಕಾರಣದಿಂದ ಖಾಸಗೀಕರಣ ಮತ್ತು ವಿಕೇಂದ್ರೀಕರಣವು ಗ್ರಾಮೀಣ ಮಾರುಕಟ್ಟೆಗೆ ಸೂಕ್ತವಲ್ಲವೆನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ. ಇಂತಹ ಪರಿಸ್ಥಿತಿಗೆ ಮುಖ್ಯ ಕಾರಣ ಅನೇಕ ರೈತರು ಅವಿದ್ಯಾವಂತರಾಗಿದ್ದು, ರೈತರಿಗೆ ಮಾರುಕಟ್ಟೆಯನ್ನು ಪರಿಣಾಮಕಾರಿಯಾಗಿ ಎದುರಿಸಲು ಸಾಧ್ಯವಾಗುತ್ತಿಲ್ಲ, ಹಾಗೆಯೇ ಮಾರಾಟದ ಹೊಸ ಹೊಸ ತಂತ್ರಗಳನ್ನು ಅಳವಡಿಸಿಕೊಳ್ಳಲಾಗುತ್ತಿಲ್ಲ ಎನ್ನುವ ಅಭಿಪ್ರಾಯದ ಜೊತೆಗೆ, ಸರ್ಕಾರ ರೂಪಿಸಿರುವ, ಅನೇಕ ಕೃಷಿ ಯೋಜನೆಗಳು ರೈತರನ್ನು ತಲುಪಲು ಸಾದ್ಯವಾಗುತ್ತಿಲ್ಲ, ಯೋಜನೆಗಳಿಂದ ಫಲಾನುಭವಿಗಳಾದ ರೈತರು ಲಾಭ ಪಡೆಯುವ ಬದಲು ಕಷ್ಟದ ಸ್ಥಿತಿಯನ್ನು ಎದುರಿಸುತ್ತಿದ್ದಾರೆ ಎಂದು ಅಧ್ಯಯನದಲ್ಲಿ ತಿಳಿಸಿದ್ದಾರೆ. ಅಲ್ಲದೆ ಖಾಸಗೀಕರಣ ಮತ್ತು ವಿಕೇಂದ್ರೀಕರಣವು ಸಣ್ಣ ರೈತರಿಗೆ ಮತ್ತು ಮಧ್ಯಮ ರೈತರ ಅನುಕೂಲಕ್ಕಿಂತ ಅನಾನುಕೂಲವೇ

ಜಾಸ್ತಿಯಾಗಿದೆ. ಆದ್ದರಿಂದ ಸರ್ಕಾರವು ರೈತಪರ ಯೋಜನೆಗಳನ್ನು ಅದರಲ್ಲೂ ಸಣ್ಣ ಮತ್ತು ಅತಿ ಸಣ್ಣರೈತರಿಗೆ ಪರವಾದ ಯೋಜನೆಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಬೇಕು ಎಂದು ಲೇಖನದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಅಧ್ಯಯನವು ಯೋಜನೆಯ ಲಾಭ ಪಡೆಯುತ್ತಿದ್ದಾರೆಯೇ ಎನ್ನುವ ಉದ್ದೇಶಗಳನ್ನು ಒಳಗೊಂಡಿದೆ. ಸರ್ಕಾರ ಕೈಗೊಂಡಿರುವ ಮಾರುಕಟ್ಟೆಯಲ್ಲಿ ಖಾಸಗೀಕರಣ ಮತ್ತು ವಿಕೇಂದ್ರೀಕರಣ ಎನ್ನುವ ಯೋಜನೆಯು ರೈತರಿಗೆ ಪೂರಕವಾಗುವ ಬದಲು, ಅನಾನು ಕೂಲವೇ ಹೆಚ್ಚು ಎನ್ನುವ ಅಂಶವು ನನ್ನ ಅಧ್ಯಯನವನ್ನು ಕೈಗೊಳ್ಳಲು ಇನ್ನು ಕುತೂಹಲಕಾರಿ ಯಾಗಿದೆ.

ಅಗ್ರಿಕಲ್ಚರ್ ಪಾಲಿಸಿ ವಿಜನ್ (2020) ಇಂಡಿಯನ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಅಧ್ಯಯನದಲ್ಲಿ ಕಳೆದ 30 ವರ್ಷಗಳಿಂದ ಭಾರತದಲ್ಲಿ ಕೃಷಿಯು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎನ್ನುವ ಅಂಶವನ್ನು ವ್ಯಕ್ತಪಡಿಸುತ್ತಾ ಭಾರತದಲ್ಲಿ, 2020ರ ಹೊತ್ತಿಗೆ ಕೃಷಿಯಲ್ಲಿ ಯಾವ ರೀತಿಯ ನೀತಿ ನಿಯಮಗಳು ಮತ್ತು ಕೃಷಿಯಲ್ಲಿ ಯಾವ ರೀತಿಯ ಬದಲಾವಣೆಗಳು ಹಾಗೂ ರೈತರ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎನ್ನುವುದರ ಕುರಿತು ವಿಶ್ಲೇಷಿಸುತ್ತಾರೆ.[31] ಲೇಖಕರು ಹೇಳುವ ಪ್ರಕಾರ, ಅನೇಕ ಕೃಷಿ ನಿಯಮಗಳು ಕೃಷಿ ಅಭಿವೃದ್ಧಿಗೆ ಮತ್ತು ರೈತರಿಗೆ ಅನುಕೂಲಕರವಾಗಿವೆ. ಅದರಲ್ಲಿಯೂ ಉತ್ಪಾದನೆಗೆ ಸಂಬಂಧಪಟ್ಟಂತೆ, ಉತ್ಪಾದನೆಯನ್ನು ಹೆಚ್ಚಿಸಲು, ಉತ್ಪಾದನೆಗೆ ಸಂಬಂದಪಟ್ಟಂತೆ ಸಂಶೋಧನೆಯನ್ನು ಕೈಗೊಳ್ಳಲು ಕೃಷಿ ಯೋಜನೆಗಳು ಅನುಕೂಲವಾಗಿದ್ದು, ಕಳೆದ ಮೂವತ್ತು ವರ್ಷಗಳಲ್ಲಿ ಭಾರತವು ಆಹಾರ ಪದಾರ್ಥಗಳನ್ನು ಉತ್ಪಾದಿಸುವಲ್ಲಿ ದುಪ್ಪಟ್ಟಾಗಿದ್ದು ಅಂದರೆ 1973ರಲ್ಲಿ 102 ಟನ್ ಮಿಲಿಯನ್ ಆಗಿದ್ದು ಅದು 1999ರ ಹೊತ್ತಿಗೆ 200 ಟನ್ ಮಿಲಿಯನ್‌ನಷ್ಟು ಹೆಚ್ಚಾಗಿದೆ.

ಅಧ್ಯಯನದಲ್ಲಿ ಮುಖ್ಯವಾಗಿ ಉತ್ಪಾದನೆಗೆ ಸಂಬಂಧಿಸಿದಂತೆ ಹೇಳುತ್ತಾ, ಇತ್ತೀಚಿನ ದಿನಗಳಲ್ಲಿ ಕೃಷಿ ಉತ್ಪಾದನೆಯೂ ಹೆಚ್ಚುತ್ತಿದ್ದು, ಹಾಗೆಯೇ ಕೈಗಾರಿಕೋದ್ಯಮವೂ ಅಭಿವೃದ್ಧಿ ಹೊಂದುತ್ತಿದೆ. ಇದರಿಂದ ಭಾರತದಲ್ಲಿ ಬಡತನ ಮಟ್ಟವು ಹಿಂದಿಗಿಂತ ಕಡಿಮೆಯಾಗಿದೆ. ಅಂದರೆ 1973ರಲ್ಲಿ ಶೇಕಡ 55ರಷ್ಟಿದ್ದೂ 1998ರ ಹೊತ್ತಿಗೆ ಶೇಕಡ 26ರಷ್ಟು ಆಗಿದೆ. ಹೀಗಾಗಿಯೂ ಕೂಡ ಭಾರತವು ಇಂದಿಗೂ ಅತಿ ಹೆಚ್ಚು ಬಡವರನ್ನು ಹೊಂದಿದ ದೇಶವೆಂದು ಹೆಸರಿಸಲಾಗಿದೆ. ಭಾರತದಲ್ಲಿ ಒಟ್ಟು ಅಂದಾಜು 250 ಮಿಲಿಯನ್‌ನಷ್ಟು ಬಡತನ ರೇಖೆಗಿಂತ ಕೆಳಗಿರುವ ಜನರನ್ನು ಹೊಂದಿದೆ ಎನ್ನುವ ಅಂಶವನ್ನು ತಿಳಿಸಿದ್ದಾರೆ. ಅಲ್ಲದೆ ಭಾರತವು ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಸಮರ್ಪಕವಾಗಿ ಜನರಿಗೆ ಇಂದಿಗೂ ವಸತಿ,

ಆಹಾರವನ್ನು ಒದಗಿಸಲು ಸಾಧ್ಯವಾಗಿಲ್ಲ ಎಂದು ಲೇಖಕರು ತಿಳಿಸುತ್ತಾ, ಮುಖ್ಯವಾಗಿ ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರ ಪೂರೈಸುವುದೇ ಒಂದು ದೊಡ್ಡ ಸವಾಲಾಗಿದೆ. ಹಾಗಾಗಿ ಈ ಲೇಖನದಲ್ಲಿ ಆಹಾರ ಉತ್ಪಾದನೆಯನ್ನು ಯಾವ ರೀತಿ ಹೆಚ್ಚಿಸುವುದು ಮತ್ತು ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರವನ್ನು ಹೇಗೆ ತಲುಪಿಸುವುದು ಎಂದು ಚರ್ಚಿಸಿದ್ದಾರೆ. ಅಲ್ಲದೆ ಲೇಖಕರು ವಿವಿಧ ರೀತಿಯ ವೈಜ್ಞಾನಿಕ ತಂತ್ರಗಳನ್ನು ಕೃಷಿಗೆ ಅಳವಡಿಸಿಕೊಳ್ಳಬೇಕು, ಇದಕ್ಕಾಗಿ ಸರ್ಕಾರವು, ಕಾಲ ಕಾಲಕ್ಕೆ ಹೊಸ ಹೊಸ ಕೃಷಿ ನೀತಿ ನಿಯಮಗಳನ್ನು ಜಾರಿಗೆ ತರಬೇಕು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಲೇಖನದಲ್ಲಿ ಮುಖ್ಯವಾಗಿ ನೀತಿ ನಿಯಮಗಳನ್ನು ಅಧ್ಯಯನ ಮಾಡುವುದಾಗಿದೆ. ಈ ಅಂಶವು ಸಂಶೋಧನೆಯ ಮೊದಲನೇ ಉದ್ದೇಶಕ್ಕೆ ತುಂಬಾ ಹತ್ತಿರವಾಗಿದೆ. ಯಾವುದೇ ಕ್ಷೇತ್ರಕ್ಕೆ ರಚನಾತ್ಮಕ ನೀತಿನಿಯಮಗಳನ್ನು ರೂಪಿಸಿದಾಗ, ಅದರಿಂದ ಹೇಗೆ ಅಭಿವೃದ್ಧಿ ಹೊಂದಬಹುದು ಎನ್ನುವ ಅಂಶವು ಅಧ್ಯಯನಕ್ಕೆ ಪೂರಕವಾಗಿದೆ.

ಪ್ರಾಬ್ಲಮ್ಸ್ ಆ್ಯಂಡ್ ಪ್ರಾಸ್‌ಪೆಕ್ಟ್ಸ್ ಆಫ್ ಅಗ್ರಿಕಲ್ಚರಲ್ ಮಾರ್ಕೆಂಟಿಂಗ್ ಇನ್ ಇಂಡಿಯಾ, ಆ್ಯನ್ ಒವರ್‌ವೀವ್ ಬೈ ಎ. ವಡಿವೇಲು ಮತ್ತು ಬಿ.ಆರ್.ಕಿರನ್(2009) ಅಧ್ಯಯನದಲ್ಲಿ ಕಂಡುಕೊಂಡಿರುವಂತೆ, ಭಾರತದಲ್ಲಿ ಕೃಷಿ ಕ್ಷೇತ್ರವು, ಕೈಗಾರಿಕೆ ಕ್ಷೇತ್ರಕ್ಕಿಂತ ಬಹಳ ವಿಭಿನ್ನವಾಗಿದೆ.[32] ಭಾರತ ದೇಶವು ಕೃಷಿ ಆಧಾರಿತ ದೇಶವಾಗಿದ್ದು, ಕೃಷಿಯೂ ದೇಶದ ಆರ್ಥಿಕ ಅಭಿವೃದ್ಧಿ ಹೊಂದಲು ಪ್ರಮುಖ ಪಾತ್ರ ವಹಿಸುತ್ತದೆ. ದೇಶದಲ್ಲಿ ವಿವಿಧ ರೀತಿಯ ಕೃಷಿ ಬೆಳೆಗಳನ್ನು ಉತ್ಪಾದಿಸುತ್ತಿದ್ದು ಉತ್ಪನ್ನಗಳ ಮಾರಾಟ ವ್ಯವಸ್ಥೆಯು ಅಷ್ಟಾಗಿ ರೈತರಿಗೆ ಲಾಭದಾಯಿಕವಾಗಿಲ್ಲ ಎಂದು ತಿಳಿಸುತ್ತಾರೆ. ಕೆಲವು ಕೃಷಿ ಉತ್ಪನ್ನಗಳನ್ನು ಆಹಾರ ಸಾಮಗ್ರಿಗಳಾಗಿ ಬಳಕೆಯಾದರೆ, ಇನ್ನೂ ಕೆಲವು ಉತ್ಪನ್ನಗಳು ಕೈಗಾರಿಕೆಗಳಿಗಳಿಗೆ ಕಚ್ಚಾವಸ್ತುಗಳಾಗಿ ಬಳಕೆಯಾಗುತ್ತವೆ. ಮಾರುಕಟ್ಟೆಗೆ ಸಂಬಂಧಿಸಿದಂತೆ ಕೃಷಿಯಲ್ಲಿ ರೈತರಿಗೆ ಎದುರಾಗುವ ಸಮಸ್ಯೆಗಳೆಂದರೆ ಬೆಳೆದ ಉತ್ಪನ್ನಗಳನ್ನು, ನೇರವಾಗಿ ಗ್ರಾಹಕರಿಗೆ ಮಾರುವುದೇ, ದಲ್ಲಾಳಿಗಳಿಗೆ, ಅಥವಾ ಮಧ್ಯವರ್ತಿಗಳಿಗೆ ಇಲ್ಲವೆ ನೇರವಾಗಿ ಮಾರುಕಟ್ಟೆಗೆ ಸಾಗಿಸುವುದೇ ಎನ್ನುವ ಹಲವು ಸಮಸ್ಯೆಗಳು ರೈತರಿಗೆ ಉತ್ಪನ್ನಗಳನ್ನು ಮಾರಾಟ ಮಾಡಲು ಎದುರಾಗುವ ಸಮಸ್ಯೆಗಳಾಗಿವೆ. ರೈತರು ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸುವುದು, ಅದರ ವೆಚ್ಚ ಬರಿಸುವುದು ಒಂದು ದೊಡ್ಡ ಸವಾಲಾಗಿದೆ. ಅನೇಕ ಸಲ ಸಮಯಕ್ಕೆ ಸರಿಯಾಗಿ ಉತ್ಪನ್ನಗಳನ್ನು ಮಾರಾಟ ಮಾಡದೆ ರೈತರು ನಷ್ಟವನ್ನು ಅನುಭವಿಸುತ್ತಾರೆ. ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಿರುವಂತೆ, ರೈತರಿಗೆ ಮಾರುಕಟ್ಟೆಯ ಸರಿಯಾದ ವ್ಯವಸ್ಥೆಯನ್ನು ಮಾಡಬೇಕು, ರೈತರಿಗೆ ಬೆಳೆದ ಬೆಳೆಗಳಿಗೆ ಸರಿಯಾದ ಬೆಲೆ ದೊರೆಯಬೇಕು ಮತ್ತು ಕಾಲಕಾಲಕ್ಕೆ ರೈತರಿಗೆ ಮಾರುಕಟ್ಟೆಯ ಮಾಹಿತಿಯನ್ನು ಒದಗಿಸಬೇಕೆಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಲೇಖನದಲ್ಲಿ ಸಂಶೋಧಕರು ಮುಖ್ಯವಾಗಿ ಭಾರತದಲ್ಲಿ ಕೃಷಿ ಮಾರುಕಟ್ಟೆಯು ಹೆಚ್ಚಿನ ಸವಾಲುಗಳನ್ನು ಹೊಂದಿದ್ದು, ಸವಾಲುಗಳ ಪರಿಣಾಮವಾಗಿ ರೈತರು ನಷ್ಟವನ್ನು ಅನುಭವಿಸುವ ಅನೇಕ ಸಂಧರ್ಭಗಳು ಎದುರಾಗಿವೆ. ಏಕೆಂದರೆ ಭಾರತದಲ್ಲಿ ಅನೇಕ ರೈತರು ಅವಿದ್ಯಾವಂತರಾಗಿದ್ದು ಮತ್ತು ಮಾರುಕಟ್ಟೆಯ ಸಮರ್ಪಕವಾದ ಮಾಹಿತಿಯ ನಿರ್ವಹಣೆ ಇಲ್ಲದಿರುವುದು, ಹಾಗೆಯೇ ಅನೇಕ ರೀತಿಯ ಮಾರಾಟ ದಾರಿಗಳಿಂದ ರೈತರು ಮತ್ತು ಗ್ರಾಹಕರು ಇಬ್ಬರ ಜೇಬುಗಳಿಗೂ ನಷ್ಟ ಸಂಭವಿಸುತ್ತಿವೆ. ಭಾರತದಲ್ಲಿ ಬಹುಮುಖ್ಯವಾಗಿ ರೈತರು, ಅದರಲ್ಲೂ ಸಣ್ಣರೈತರು ಹಣಕಾಸಿನ ತೊಂದರೆಯಿಂದ, ಹಣಕಾಸಿನ ನೆರವಿಗಾಗಿ ಬ್ಯಾಂಕು ಮತ್ತು ಹಳ್ಳಿಗಳಲ್ಲಿ ಸಾಲ ಕೊಡುವವರ ಮೇಲೆ ಅವಲಂಬಿತರಾಗಿದ್ದು, ಬೆಳೆ ನಷ್ಟವಾದ ಸಂದರ್ಭದಲ್ಲಿ ಸಾಲವನ್ನು ಬಡ್ಡಿ ಸಮೇತ ಹಿಂದಿರುಗಿಸಲು ಆಗದೆ ರೈತರು ನಷ್ಟ ಅನುಭವಿಸುತ್ತಿದ್ದಾರೆ ಎನ್ನುವ ಅಂಶಗಳನ್ನು ಚರ್ಚಿಸಿದ್ದಾರೆ. ಮುಖ್ಯವಾಗಿ ಈ ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ಮಾಹಿತಿಯ ಕುರಿತು ವಿಶ್ಲೇಷಿಸಿದ್ದಾರೆ. ಮಾರುಕಟ್ಟೆಯ ಮಾಹಿತಿಯು ರೈತರಿಗೆ ಮತ್ತು ಗ್ರಾಹಕರಿಬ್ಬರಿಗೂ ಸಮರ್ಪಕವಾಗಿ ಸರಿಯಾದ ರೀತಿಯಲ್ಲಿ ತಲುಪಿದ ಸಂದರ್ಭದಲ್ಲಿ ರೈತರು ಮತ್ತು ಗ್ರಾಹಕರು ನಷ್ಟವನ್ನು ಅನುಭವಿಸುವುದು ಕಡಿಮೆಯಾಗುವುದು ಮತ್ತು ರೈತರು ಯಾವ ಉತ್ಪನ್ನಗಳನ್ನು ಬೆಳೆಯಬೇಕು ಮತ್ತು ಹೇಗೆ ಉತ್ಪನ್ನಗಳನ್ನು ಮಾರುಕಟ್ಟೆಗೆ ತಂದು ಮಾರಲು ಅನುಕೂಲವಾಗುವುದು ಎನ್ನುವ ಅಂಶವನ್ನು ತಿಳಿಸಿದ್ದಾರೆ. ಲೇಖನವು ಮಾರುಕಟ್ಟೆಯ ಮತ್ತು ರೈತರ ಸಮಸ್ಯೆಗಳನ್ನು ಹಾಗೂ ಅವುಗಳ ನೀತಿನಿಯಮಗಳನ್ನು ಚರ್ಚಿಸಿದ್ದಾರೆ. ಈ ಅಂಶವು ನನ್ನ ಅಧ್ಯಯನದ ಉದ್ದೇಶಗಳಿಗೆ ಪೂರಕವಾಗಿದೆ.

ರೂರಲ್ ಮಾರ್ಕೆಟಿಂಗ್ ಇನ್ ಇಂಡಿಯಾ ಚಾಲೆಂಜಸ್ ಆ್ಯಂಡ್ ಅಪರ್ಚುನಿಟೀಸ್ (8th aug. 2013) ಈ ಅಧ್ಯಯನದಲ್ಲಿ ಹೇಳುವಂತೆ ಗ್ರಾಮೀಣ ಮಾರುಕಟ್ಟೆಯಲ್ಲಿ ಹೇರಳವಾಗಿ ಮಾರಾಟಕ್ಕೆ ಅವಕಾಶಗಳಿರುವ ಕುರಿತು ಮತ್ತು ಗ್ರಾಮೀಣ ಮಾರುಕಟ್ಟೆಯು ಅದರದೇ ಆದ ಕೆಲವು ಕಠಿಣ ಸವಾಲುಗಳನ್ನು ಹೊಂದಿದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಗ್ರಾಮೀಣ ಮಾರುಕಟ್ಟೆಯಲ್ಲಿ 68.84%ರಷ್ಟು ಜನರು, 638000 ಸಾವಿರ ಹಳ್ಳಿಗಳಲ್ಲಿ ವಾಸ ಮಾಡಿತ್ತಿದ್ದಾರೆ, ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಜನರ ಬೇಡಿಕೆಗಳು ಹೆಚ್ಚಾಗುತ್ತಿವೆ ಎಂಬುದನ್ನು ತಿಳಿಸಿದ್ದಾರೆ.[33] ಹಸಿರುಕ್ರಾಂತಿಯ ನಂತರ ಗ್ರಾಮೀಣ ಮಾರುಕಟ್ಟೆಯಲ್ಲಿ ಕೈಗಾರಿಕಾ ಉತ್ಪನ್ನಗಳಿಗೆ ಮತ್ತು ಉತ್ಪಾದನೆಗೆ(manufacturing) ಉತ್ಪನ್ನಗಳಿಗೆ ಹೆಚ್ಚಿನ ಬೇಡಿಕೆ ಇದೆ ಎಂಬುದನ್ನು ತಿಳಿಸುತ್ತಾ, ಇತ್ತೀಚಿನ ದಿನಮಾನಗಳಲ್ಲಿ ಗ್ರಾಮೀಣ ಜನತೆಯು ಅಕ್ಷರಸ್ಥರಾಗುತ್ತಿರುವುದರಿಂದ ಅವರ ಬೇಡಿಕೆಗಳು ಬದಲಾಗುತ್ತಿವೆ. ಹಾಗಾಗಿ ಮಾರಾಟಗಾರರು ಉತ್ತಮ(marketing strategy)

ಮಾರುಕಟ್ಟೆಯ ಯೋಜನೆಗಳನ್ನು ರೂಪಿಸಬೇಕಾಗುತ್ತದೆನ್ನುವ ಸವಾಲಿನ ಅಂಶವನ್ನು ವಿಶ್ಲೇಷಿಸಿದ್ದಾರೆ. ಸಂಶೋಧಕರ ಪ್ರಕಾರ 1980ರಿಂದಲೂ ಗ್ರಾಮೀಣ ಮಾರುಕಟ್ಟೆಯನ್ನು ಸೆಳೆಯಲು ಮಾರಾಟಗಾರರು ಪ್ರಯತ್ನಿಸು ತ್ತಿದ್ದಾರೆ. ಹಾಗೆಯೇ ಭಾರತದಲ್ಲಿ ಶೇ.70% ಜನರು ಗ್ರಾಮೀಣ ಭಾಗದಲ್ಲಿದ್ದು, 2013ರಲ್ಲಿ Agri-produce price and MNREGA ಅಡಿಯಲ್ಲಿ ಬಜೆಟ್‌ನಲ್ಲಿ ಗ್ರಾಮೀಣ ಭಾಗಕ್ಕೆ ಹೆಚ್ಚಿನ ಅನುದಾನವನ್ನು ಕಾಯ್ದಿರಿಸಿದ್ದಾರೆ. ಇದರಿಂದಲೂ ಗ್ರಾಮೀಣ ಜನರ ಕೊಳ್ಳುವ ಸಾಮರ್ಥ್ಯ ಹೆಚಾಗಿದ್ದು, ರೈತರ ಕೊಳ್ಳುವಿಕೆಯ ಒಲವೂ ಕೂಡ ಬ್ರ್ಯಾಂಡ್ ವಸ್ತುಗಳ ಕಡೆ ವಾಲಿದೆ. National Councial for Applied Economics Research(NCAER) ಪ್ರಕಾರ ಗ್ರಾಮೀಣ ಎಂದರೆ, ಎಲ್ಲಿ 5000ಕ್ಕಿಂತ ಕಡಿಮೆ ಜನತೆ ಇರುವುದೊ, ಹಾಗೆಯೇ ಶೇ.75%ರಷ್ಟು ಗಂಡಸರು ಕೃಷಿ ಕೆಲಸದಲ್ಲಿ ತೊಡಗಿಕೊಳ್ಳುವರೋ ಅದಕ್ಕೆ ಗ್ರಾಮೀಣ ಭಾಗ ಎಂದು ಕರೆಯುವರು.

ಅಧ್ಯಯನದಲ್ಲಿ ಸ್ಪಷ್ಟಪಡಿಸಿರುವಂತೆ, ಗ್ರಾಮೀಣ ಮಾರುಕಟ್ಟೆಯನ್ನು ಹೇಗೆ ದೊಡ್ಡ ದೊಡ್ಡ ಕಂಪನಿಗಳು ತಮ್ಮ ಬಂಡವಾಳ ಹೂಡಿಕೆಗೆ ಜಾಗ ಕಲ್ಪಿಸಿಕೊಂಡಿವೆ ಮತ್ತು ಗ್ರಾಮೀಣ ಭಾಗದ ಜನರನ್ನು ಯಾವ ರೀತಿ ಸೆಳೆಯಬೇಕೆನ್ನುವ ಅಂಶಗಳಿಗೆ ಹೆಚ್ಚು ಮಹತ್ವವನ್ನು ನೀಡಿದ್ದಾರೆ ವಿನಹ, ಸಂಶೋಧಕರು ಎಲ್ಲಿಯೂ ಗ್ರಾಮೀಣ ಭಾಗದ ರೈತರು ತಾವು ಬೆಳೆದ ಬೆಳೆಗಳಿಗೆ ಸರಿಯಾದ ಮಾರುಕಟ್ಟೆ ದೊರೆಯದೆ, ಬೆಲೆಯೂ ದೊರೆಯದೆ ನಷ್ಟ ಅನುಭವಿಸುತ್ತಿರುವ ಸಂಗತಿಗಳನ್ನು ಹೆಚ್ಚಾಗಿ ಚರ್ಚಿಸಿರುವುದಿಲ್ಲಾ, ಇದು ಲೇಖನದ ನ್ಯೂನತೆಯಾಗಿರುತ್ತದೆ.

ರೈತರ ಮಾರುಕಟ್ಟೆ ಸಮಸ್ಯೆಗಳು ಮತ್ತು ಪರಿಹಾರಗಳು, ಡಾ. ಎಂ. ಚಂದ್ರ ಪೂಜಾರಿ, ಅಭಿವೃದ್ಧಿ ಅಧ್ಯಯನ, ಸಮಾಜ ವಿಜ್ಞಾನ ಪತ್ರಿಕೆ, ಅಧ್ಯಯನದಲ್ಲಿ ರೈತರು ಎದುರಿಸುತ್ತಿರುವ ಮಾರುಕಟ್ಟೆ ಸಮಸ್ಯೆಗಳನ್ನು ಒಂದು ಆಂತರಿಕ ಅಥವಾ ನಮ್ಮ ಸಂಸ್ಕೃತಿಯೊಳಗಿನ ಬೆಳವಣಿಗೆಯ ದೃಷ್ಟಿಯಿಂದ ನೋಡಿದ್ದಾರೆ.[34] ಅವರ ವಾದವು ರೈತರ ಇಂದಿನ ಸ್ಥಿತಿಗೆ ಕೇವಲ ಬಾಹ್ಯ ಅಂಶಗಳು ಮಾತ್ರ ಅಲ್ಲ, ಅಷ್ಟೇ ಪ್ರಮಾಣದಲ್ಲಿ ಆಂತರಿಕ ಅಂಶಗಳು ಕೂಡ ಕಾರಣವಾಗಿವೆ. ಈ ಲೇಖನದಲ್ಲಿ ಪ್ರಧಾನವಾಗಿ ಚರ್ಚಿಸಿರುವ ಅಂಶಗಳೆಂದರೆ ಹೇಗೆ ರೈತರ ಮಾರುಕಟ್ಟೆ ಸಂಬಂಧವನ್ನು ಪ್ರಭಾವಿಸಿವೆ? ಮತ್ತು ರೈತರು ಎದುರಿಸುತ್ತಿರುವ ಈ ಆಂತರಿಕ ಸಮಸ್ಯೆಗಳನ್ನು ಹೇಗೆ ಪರಿಹರಿಸಬಹುದು ಎಂಬವುಗಳಾಗಿವೆ. ಮುಖ್ಯವಾಗಿ ಮಾರುಕಟ್ಟೆಗೆ ಸಂಬಂಧಿಸಿದಂತೆ, ಬೇಡಿಕೆ ಮತ್ತು ಪೂರೈಕೆ ನಡುವೆ ಹೊಂದಾಣಿಕೆ ಇಲ್ಲದಿರುವುದನ್ನು ವಿವರಿಸಿದ್ದಾರೆ. ದೋಷಪೂರಿತ ಅಭಿವೃದ್ಧಿ ನೀತಿಗಳನ್ನು ವಿಶ್ಲೇಷಿಸಿದ್ದಾರೆ. ಹಾಗೆಯೇ ಆರ್ಥಿಕೇತರ ವಿಚಾರಗಳನ್ನು ಚರ್ಚಿಸಿದ್ದಾರೆ.

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಭೀವೃದ್ಧಿ ಅಧ್ಯಯನ, ಮಹದೇವ ಎಂ. ಸಿಂಧಗಿ, 1996, ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆ ಎಂದರೆ ರೈತರಿಂದ ಬೇಸಾಯ ಹಿಡುವಳಿಗಳ ಸಂಗ್ರಹಣೆ ಮತ್ತು ಹೊಲಗದ್ದೆಗಳಿಂದ ಗ್ರಾಹಕರಿಗೆ ಕೃಷಿ ಉತ್ಪನ್ನಗಳನ್ನು ಸಾಗಾಟದ ಸಂಬಂಧಿತ ಚಟುವಟಿಕೆಗಳ ಸಂಸ್ಥೆಗಳ ಮತ್ತು ನೀತಿಗಳ ಅಧ್ಯಯನವಾಗಿದೆ.[35] ಹೀಗೆ ಮಾರುಕಟ್ಟೆ ಎಂದರೆ ಕೇವಲ ಉತ್ಪನ್ನಗಳನ್ನು ಮಾರಾಟ ಮಾಡುವ ಕಾರ್ಯ ಮಾತ್ರವಲ್ಲ. ಅದು ಉತ್ಪಾದಕನಿಂದ ಅನುಭೋಗಿಗಳಿಗೆ ಸರಕುಗಳು ತಲುಪಿಸುವ ಎಲ್ಲ ಉದ್ಯಮಗಳನ್ನು ಒಳಗೊಂಡಿರುವ ವ್ಯವಸ್ಥೆ ಯಾಗಿದೆ. ಅಧ್ಯಯನದಲ್ಲಿ ಮಾರುಕಟ್ಟೆಯನ್ನು ಮೂರು ವಿಧಗಳಾಗಿ ವಿಂಗಡಿಸಿದ್ದಾರೆ. ಮೊದಲನೆ ಯದು, ಪ್ರಾಥಮಿಕ ಮಾರುಕಟ್ಟೆ, ಎರಡನೆಯದು ದ್ವಿತೀಯ ಮಾರುಕಟ್ಟೆ, ಮೂರನೆಯದು ಅಂತಿಮ ಮಾರುಕಟ್ಟೆ. ಇದರೊಂದಿಗೆ ಈ ಅಧ್ಯಯನದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಮಾರುಕಟ್ಟೆಯಲ್ಲಿ ವ್ಯವಹರಿಸುವ ಅಧಿಕ ಪ್ರಮಾಣದ ಕೃಷಿ ಉತ್ಪನ್ನದ ಆಧಾರದ ಮೇಲೆ ವಿಂಡಗಣೆ ಮಾಡಬಹುದು ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸ ಮತ್ತು ಕೃಷಿ ಮಾರುಕಟ್ಟೆಯ ನಿಯಂತ್ರಣ, ಅಲ್ಲಿಯ ಸೌಲಭ್ಯ, ಅದರ ರಚನೆ, ಅದರ ಕರ್ತವ್ಯ ಅಧಿಕಾರಿಗಳ ಬಗ್ಗೆ ತಿಳಿದುಕೊಳ್ಳುವುದು, ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸದ ಬಗ್ಗೆ ಹಾಗೂ ಪ್ರಗತಿಯ ಬಗ್ಗೆ ತಿಳಿಯುವುದಾಗಿದೆ. ಈ ಅಧ್ಯಯನವು ಅನುಷಂಗಿಕ ವಿಧಾನ, ಸಂದರ್ಶನದ ಮೂಲಕ ಹಾಗೂ ಸಮಿತಿಯು ಪ್ರಕಟಿಸಿದ ವಾರ್ಷಿಕ ವರದಿ, ಅಪ್ರಕಟಿತವಾದುದು ಅಂತರ್ಜಾಲದಿಂದಲೂ ಸಂಗ್ರಹಿಸಲಾಗಿದೆ. ಅಧ್ಯಯನದಲ್ಲಿ ಸಂಶೋಧಕರು ಮಹಾಲಿಂಗಪುರವನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ಅಧ್ಯಯನದಲ್ಲಿ ರೈತರು ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಕೆಲವೊಂದು ಯೋಜನೆಗಳಿಂದ ಹೇಗೆ ಅಭಿವೃದ್ಧಿ ಸಾಧಿಸಿದ್ದಾರೆ ಅಥವಾ ಇಲ್ಲವೇ ಎಂಬುದನ್ನು ಎಲ್ಲಿಯೂ ವಿಶ್ಲೇಷಿಸಿಲ್ಲ.

ಮಾರ್ಕೆಟಿಂಗ್ ಆಫ್ ಅಗ್ರಿಕಲ್ಚರಲ್ ಪ್ರೊಡ್ಯೂಸಸ್ ಇನ್ ಗುಲಬರ್ಗ ಡಿವಿಸನ್ ಆಫ್ ಕರ್ನಾಟಕ್ ಬೈ ಭೊಗಪ್ಪ(1988) ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ಆಚರಣೆಯ ದೇಶದ ಮಾರುಕಟ್ಟೆಗಳಲ್ಲಿ ಒಂದೇ ರೀತಿಯಾಗಿರಬೇಕು, ಇದರಿಂದ ಮಾರುಕಟ್ಟೆಯು ಬೆಳೆಯುತ್ತದೆ ಮತ್ತು ದರಗಳಲ್ಲಿಯೂ ಕೂಡ ಒಂದೇ ತೆರನಾಗಿರುವುದರಿಂದ ರೈತರಿಗಾಗುವ ಬೆಲೆ ನಷ್ಟವನ್ನು ತಪ್ಪಿಸಬಹುದು ಎಂದಿದ್ದಾರೆ.[36] ಈ ರೀತಿಯಾದ ಹಲವು ಯೋಜನೆಗಳನ್ನು ಎಲ್ಲ ರಾಜ್ಯಗಳಲ್ಲಿ ಕೃಷಿ ಮಾರುಕಟ್ಟೆಯಲ್ಲಿ, ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಜಾರಿಗೆ ತರಬೇಕು, ಇದರಿಂದ ರೈತರಿಗೆ ಆಗುವ ನಷ್ಟವನ್ನು ತಪ್ಪಿಸಬಹುದು ಎಂದು ಹೇಳಿದ್ದಾರೆ. ಅಧ್ಯಯನದಲ್ಲಿ ಮುಖ್ಯವಾಗಿ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ಪಾತ್ರವನ್ನು ತಿಳಿಸಿದ್ದಾರೆ. ರೈತರು ಹೆಚ್ಚಾಗಿ

ಆಹಾರ ಉತ್ಪನ್ನಗಳನ್ನು ಬೆಳೆಯುತ್ತಾರೆ ಮತ್ತು ಕೆಲವು ವಾಣಿಜ್ಯ ಬೆಳೆಗಳನ್ನು ಲಾಭಕ್ಕಾಗಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಾರೆ. ಈ ಅಧ್ಯಯನವನ್ನು ಕೆಳಕಂಡ ಕ್ಷೇತ್ರಗಳಲ್ಲಿ ಕೈಗೊಳ್ಳಲಾಗಿದೆ.

1. ಗುಲ್ಬರ್ಗಾ, ರಾಯಚೂರು, ಮತ್ತು ಬೀದರ್ ಜಿಲ್ಲೆಗಳ ಕೃಷಿ ಉತ್ಪನ್ನಗಳ ಮಾರಾಟವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ ಮತ್ತು
2. ಬಳ್ಳಾರಿ ಜಿಲ್ಲೆಯ ಆಯಕಟ್ಟು ಪ್ರದೇಶವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಅಧ್ಯಯನವು ಕೃಷಿ ಮಾರುಕಟ್ಟೆಯೊಂದರ ಪ್ರಾದೇಶಿಕ ಅಧ್ಯಯನವಾಗಿದೆ ಮತ್ತು ಹಿಂದುಳಿದ ಪ್ರದೇಶ ಮತ್ತು ಹೆಚ್ಚಿನ ಪ್ರಮಾಣದ ನೀರಾವರಿ ಪ್ರದೇಶದಲ್ಲಿ ಮಾರಾಟಗಾರರು ಮತ್ತು ಮಧ್ಯವರ್ತಿಗಳಿಂದ ಹೇಗೆ ಶೋಷಣೆಗೆ ಒಳಗಾಗಿದ್ದಾರೆ ಎಂಬುದನ್ನು ಈ ಅಧ್ಯಯನವು ಒಳಗೊಂಡಿದೆ. ರೈತರು ಅವರು ಬೆಳೆದ ಬೆಳೆಗಳಿಗೆ ಒಳ್ಳೆಯ ಬೆಲೆಯನ್ನು ಪಡೆಯುವ ಸಾಧ್ಯತೆಯ ಕುರಿತು ಚರ್ಚಿಸಿದ್ದಾರೆ. ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ಕುರಿತಾಗಿ ಇರುವ ಕಾನೂನು ಕಟ್ಟಳೆಗಳನ್ನು ಗುಲ್ಬರ್ಗಾ ಜಿಲ್ಲೆಯ ಪ್ರಾದೇಶಿಕ ಕೃಷಿ ಮಾರುಕಟ್ಟೆಯ ಪರಿಧಿಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ರೈತರು ತಾವು ಬೆಳೆದ ಫಸಲಿಗೆ ಸರಿಯಾದ ಬೆಲೆ ಸಿಗದೆ ಹೇಗೆ ಯೋಜಿತ ಮಾರುಕಟ್ಟೆಯಲ್ಲಿ ಮೋಸಗೊಳಿಸಲ್ಪಡುತ್ತಾರೆ ಎಂಬುದನ್ನು ವಿವರಿಸಲಾಗಿದೆ. ಹಾಗೆಯೇ ತುಂಗಭದ್ರಾ ನೀರಾವರಿ ಅಚ್ಚುಕಟ್ಟು ಪ್ರದೇಶಕ್ಕೂ ಮಳೆಯಾಧರಿತ ಒಣಬೇಸಾಯದ ಪ್ರದೇಶವನ್ನು ತುಲನೆ ಮಾಡಿ ಮಾರುಕಟ್ಟೆಯ ಸ್ವರೂಪವನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿರುವುದು ಗಮನಾರ್ಹ. ಮಾಹಿತಿ ಸಂಗ್ರಹಣೆಯನ್ನು ಈ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯದ ಮೂಲಕ ಹಾಗೂ ಸಂಬಂಧಿತ ಕೃಷಿ ಮಾರುಕಟ್ಟೆಯ ಕಛೇರಿಗಳಲ್ಲಿನ ದಾಖಲೆಗಳ ಪರಿಶಿಲನೆಯ ಮೂಲಕ ಪಡೆಯಲಾಗಿದೆ. ಹಾಗೆಯೇ ಸಂದರ್ಶನದ ವಿಧಾನ ಮತ್ತು ಪ್ರಶ್ನಾವಳಿಯ ಮೂಲಕ ಅಧ್ಯಯನ ಕ್ಷೇತ್ರದ ಒಟ್ಟು 85 ಮಾದರಿಗಳನ್ನು ತೆಗೆದುಕೊಂಡು ಐದು ವರ್ಷಗಳ ಕಾಲ ಅಧ್ಯಯನ ನಡೆಸುತ್ತಾರೆ. ಅಧ್ಯಯನದ ಕೊರತೆಗನ್ನು ಹೀಗೆ ಹೇಳಬಹುದಾಗಿದೆ. ಈ ಅಧ್ಯಯನವನ್ನು ಕೈಗೊಂಡು 30 ವರ್ಷಗಳು ಕಳೆದಿವೆ. ಆದ್ದರಿಂದ ಅಂದಿನ ಸಂದರ್ಭದ ಸಮಸ್ಯೆಗಳು ಸನ್ನಿವೇಶಗಳು ಸ್ವಲ್ಪ ಮಟ್ಟಿಗೆ ಭಿನ್ನವಾಗಿದ್ದವು. ಸಂಶೋಧಕರು ಪ್ರಬಂಧದಲ್ಲಿ ಎತ್ತಲಾದ ಪ್ರಶ್ನೆಗಳನ್ನು ಪರಿಗಣಿಸಿ ಅಧ್ಯಯನದ ಸಂದರ್ಭದಲ್ಲಿ ಪ್ರಸ್ತುತ ಕೃಷಿ ಮಾರುಕಟ್ಟೆಯ ಸ್ವರೂಪವನ್ನು ಅರ್ಥೈಸಲು ಪ್ರಯತ್ನಿಸಲಾಗುವುದು. ಈ ಅಧ್ಯಯನದ ಮತ್ತೊಂದು ಪ್ರಮುಖ ಕೊರತೆಯೆಂದರೆ ಅಧ್ಯಯನ ವಿಷಯದ ಭಿನ್ನ ಆಯಾಮಗಳನ್ನು ಮತ್ತು ಅವು ಉಂಟುಮಾಡುವ ಒಟ್ಟು ಪರಿಣಾಮಗಳನ್ನು ಗುರುತಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ ನಡೆಯದಿರುವುದು. ಕೃಷಿ ಮಾರುಕಟ್ಟೆಯ ಸ್ವರೂಪದಲ್ಲಿ ರೈತನೊಂದಿಗೆ ಇಡೀ ಗ್ರಾಮೀಣ ಸಮುದಾಯವೇ ಅಂತರ್ಗತವಾಗಿರುತ್ತದೆ. ಕೃಷಿ ಹುಟ್ಟುವಳಿಗಳ ಹಿಂದೆ ರೈತನೊಂದಿಗೆ ಕೃಷಿ ಕಾರ್ಮಿಕರು,

ಗ್ರಾಮ ಸಮುದಾಯದ ಕರಕುಶಲ ಸಮುದಾಯ, ಹಣಕಾಸು ಒದಗಿಸುವ ಗ್ರಾಮೀಣ ಮೂಲಗಳು, ರೈತರಿಂದ ಕೊಳ್ಳುವ ವ್ಯಾಪಾರಿವರ್ಗ, ವ್ಯಾಪಾರ ಕುದುರಿಸುವ ದಲ್ಲಾಳಿಗಳು, ಸರಕು ಸಾಗಾಣಿಕೆಗೆ ಸಹಕರಿಸುವ ಶ್ರಮಿಕರು ಹೀಗೆ ಎಲ್ಲವನ್ನೂ ಒಳಗೊಂಡ ಕಡೆಯ ಅಭಿವ್ಯಕ್ತಿಯಾಗಿ ಮಾರುಕಟ್ಟೆಯ ಸ್ವರೂಪವನ್ನು ಕಾಣಬಹುದಾಗಿದೆ.

ವರ್ಕಿಂಗ್ ಆಫ್ ಎ.ಪಿ.ಎಂ.ಸೀಸ್ ಎ ಕೇಸ್ ಸ್ಟಡಿ ಆಫ್ ಬೆಲ್‌ಗಾಮ್ ಡಿಸ್ಟ್ರಿಕ್ಟ್ ಬೈ ಭಜಂತ್ರಿ(2002)ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ಅಧ್ಯಯನವನ್ನು ಕೈಗೊಂಡಿದ್ದಾರೆ. ಅಧ್ಯಯನದಲ್ಲಿ ಕರ್ನಾಟಕದ ಗ್ರಾಮಗಳಲ್ಲಿ ಆರ್ಥಿಕ ಅಭಿವೃದ್ಧಿಯಲ್ಲಿ ಕೃಷಿ ಮಾರುಕಟ್ಟೆಯ ಪಾತ್ರವನ್ನು ವಿಶ್ಲೇಷಿಸಿದ್ದಾರೆ.[37] ಕೃಷಿಯ ಉತ್ಪನ್ನಗಳನ್ನು ಬೆಳೆಯಲು ಎಲ್ಲ ರೀತಿಯ ಯೋಜನೆಗಳನ್ನು ಹಾಕಿಕೊಂಡು ಬೆಳೆದರೂ ಅದರಿಂದ ಏನೂ ಪ್ರಯೋಜನವಿರುವುದಿಲ್ಲ. ಯಾವಾಗ ರೈತರಿಗೆ ಅವರು ಬೆಳೆದ ಫಸಲಿಗೆ ಒಳ್ಳೆಯ ಬೆಲೆ ಸಿಗುವುದೋ ಆಗ ಮಾತ್ರ ಪ್ರಯೋಜನವಾಗುವುದು. ಆದ್ದರಿಂದ ಅದಕ್ಕಾಗಿ ಯೋಜಿತ ಮಾರುಕಟ್ಟೆಯ ಅವಶ್ಯಕತೆ ಇರುತ್ತದೆ. ಈ ಅಧ್ಯಯನವನ್ನು ರೈತರು ಅವರು ಬೆಳೆದ ಬೆಳೆಗಳಿಗೆ ಸರಿಯಾದ ಬೆಲೆ ಸಿಗದೆ ಮತ್ತು ಮಾರುಕಟ್ಟೆ ಸಿಗದೆ ಹೇಗೆ ನಷ್ಟಕ್ಕೆ ಒಳಗಾಗುತ್ತಾರೆ ಎಂಬುದನ್ನು ಅಧ್ಯಯನ ಮಾಡಿದ್ದಾರೆ. ಯಾವಾಗ ಉತ್ಪಾದಕರಿಗೆ ಮತ್ತು ಕೊಳ್ಳುವವರಿಗೆ ಮತ್ತು ಸಕ್ರಮ ಮಾರುಕಟ್ಟೆಗೆ ಸರಿಯಾದ ಸಂಬಂಧವಿರುತ್ತದೋ, ಅದು ರೈತರಿಗೆ ಮತ್ತು ಗ್ರಾಹಕರಿಗೆ ನೇರವಾಗಿ ಅನುಕೂಲವಾಗುತ್ತದೆ. ಇದು ಕೇವಲ ಉತ್ಪಾದಕರಿಗೆ ಮತ್ತು ಕೊಳ್ಳುವವರಿಗಲ್ಲದೆ ಒಟ್ಟಾರೆ ದೇಶದ ಆರ್ಥಿಕ ಮತ್ತು ಸಾಮಾಜಿಕವಾಗಿ ಅಭಿವೃದ್ಧಿ ಆಗಲು ಸಹಕಾರಿಯಾಗುತ್ತದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅಧ್ಯಯನದ ಉದ್ದೇಶಗಳಾಗಿ ಈ ಅಧ್ಯಯನವು ಕೃಷಿ ಮಾರುಕಟ್ಟೆಯಲ್ಲಿ ರೈತರಿಗೆ ಆಗುತ್ತಿರುವ ಅನ್ಯಾಯವನ್ನು ಅಂದರೆ ಅಳತೆ ಪ್ರಮಾಣಗಳಲ್ಲಿ ಆಗುವ ಮೋಸ, ಅನಧಿಕೃತ ಮಾರುಕಟ್ಟೆಗಳಿಂದ ಆಗುವ ನಷ್ಟ, ಕಾಲಾನುಗುಣದಿಂದ ಬೆಲೆ ಕಡಿಮೆಯಾಗುವುದು ಮುಂತಾದ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಿದೆ. ಕೊಳ್ಳುವವರು ಮಾರುವವರ ನಡುವಿನ ಪೈಪೋಟಿ, ರೈತರಿಗೆ ಇರುವ ಕಾನೂನಾತ್ಮಕ ಸೌಲಭ್ಯಗಳನ್ನು ಸರಿಯಾಗಿ ಅನುಷ್ಠಾನಗೊಳಿಸಲಾಗಿದೆಯೇ ಇಲ್ಲವೇ ಎಂಬುದನ್ನು ಚರ್ಚಿಸಲಾಗಿದೆ. ಅಧ್ಯಯನ ವಿಧಾನವಾಗಿ ಈ ಅಧ್ಯಯನವು ಆನುಷಂಗಿಕ ವಿಧಾನ, ಸಂದರ್ಶನದ ಮೂಲಕ ಹಾಗೂ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಕೃಷಿ ಮಾರುಕಟ್ಟೆಯ ಲೋಪ–ದೋಷಗಳನ್ನು ವಿವರಿಸುವುದರೊಂದಿಗೆ ಸರ್ಕಾರ ಕೂಡ ಮಾಡಿರುವ ಕಾನೂನಾತ್ಮಕ ಸೌಲಭ್ಯಗಳನ್ನು ವ್ಯಾರಾಟ ಗಾರರು ಮತ್ತು ಮಧ್ಯವರ್ತಿಗಳು ಹೇಗೆ ದುರುಪಯೋಗಪಡಿಸಿಕೊಂಡು ರೈತರನ್ನು ಶೋಷಿಸುತ್ತಾರೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಮುಖ್ಯವಾದ ಈ ಅಧ್ಯಯನದ ಕೊರತೆಯನ್ನು

ಹೀಗೆ ವಿವರಿಸಬಹುದಾಗಿದೆ. ರೈತರಿಗೆ ಮಾರುಕಟ್ಟೆಯ ಲೋಪದೋಷಗಳಿಂದ ಮಾತ್ರವಲ್ಲದೆಅನ್ಯ ರೀತಿಯಿಂದಲೂ ನಷ್ಟವಾಗುತ್ತದೆ. ರೈತರು ಗೊಬ್ಬರ, ಕೀಟನಾಶಕಗಳು, ಬೀಜ ಮತ್ತು ಸಾಗುವಳಿಯ ಖರ್ಚಿಗಾಗಿ ಸಾಲ ಪಡೆದ ವರ್ತಕ ಸಮುದಾಯವೇ ಆ ರೈತರಿಂದ ಬಂದ ಫಸಲನ್ನು ಕೊಳ್ಳುವುದರಿಂದ ರೈತನಿಗೆ ಆಗುವ ನಷ್ಟವನ್ನು ಪರಿಗಣಿಸಿರುವುದಿಲ್ಲ. ಇಂತಹ ಸಂಧರ್ಭದಲ್ಲಿ ರೈತನು ವಾಸ್ತವವಾಗಿ ಇರುವ ಮಾರುಕಟ್ಟೆಯ ದರಕ್ಕಿಂತಲೂ ಕಡಿಮೆ ದರಕ್ಕೆ ಮಾರಬೇಕಾದ ಅನಿವಾರ್ಯಕ್ಕೆ ಸಿಲುಕಬೇಕಾಗುತ್ತದೆ.

ಕೃಷಿ ಸಂಪನ್ಮೂಲ ಮಾರುಕಟ್ಟೆಯಲ್ಲಿ ರಸಗೊಬ್ಬರಗಳು, ಕೋಲಾರ ಜಿಲ್ಲೆಯ ಒಂದು ಅಧ್ಯಯನದಲ್ಲಿ ಹೆಚ್. ಎಸ್. ಸೋಮಶೇಖರ್ ಅವರು(2009) ಈ ಅಧ್ಯಯನದಲ್ಲಿ ಭಾರತದಲ್ಲಿ ರಸಗೊಬ್ಬರಗಳ ಬಳಕೆ ಮತ್ತು ವರ್ಷದಿಂದ ವರ್ಷಕ್ಕೆ ರಸಗೊಬ್ಬರಗಳ ಉತ್ಪಾದನೆ ಹೆಚ್ಚಾಗುತ್ತಿದೆ ಎಂದಿದ್ದಾರೆ.[38] ಹಾಗೆಯೇ ಸಮಸ್ಯೆಗಳು ಅದರಿಂದ ತಲೆದೋರುತ್ತಿವೆ. ಮಾರುಕಟ್ಟೆ ಎಂದಾಕ್ಷಣ ರೈತ ಕಂಗಾಲಾಗಬಹುದು. ಏಕೆಂದರೆ ಕಾರ್ಖಾನೆಗಳ ಉತ್ಪಾದನೆ ಹೆಚ್ಚಿದ್ದರೂ ರಸಗೊಬ್ಬರಗಳ ಲಭ್ಯತೆಯಲ್ಲಿ ಪ್ರತಿ ವರ್ಷವೂ ಕೊರತೆಯನ್ನು ಕಾಣುತ್ತಿದ್ದೇವೆ. 1970ರಲ್ಲಿ ಹಸಿರುಕ್ರಾಂತಿಯ ಪರಿಣಾಮವಾಗಿ ರಸಗೊಬ್ಬರಗಳ ಬಳಕೆ ಆರಂಭವಾಯಿತು, ಅದಕ್ಕೂ ಮುಂಚೆ ನಮ್ಮಲ್ಲಿ ಸಾಂಪ್ರದಾಯಿಕವಾದ ಬೇಸಾಯವೇ ಜಾರಿಯಲ್ಲಿತ್ತು. ಹೆಚ್ಚುತ್ತಿರುವ ಜನಸಂಖ್ಯೆಗನು ಗುಣವಾಗಿ ಆಹಾರೋತ್ಪಾದನೆಯನ್ನು ಹೆಚ್ಚಿಸಬೇಕಾದ ಅನಿವಾರ್ಯತೆಗೆ ಎಲ್ಲ ದೇಶಗಳು ಒಳಗಾಗಬೇಕಾಯಿತು. ಹೈಬ್ರಿಡ್ ಬೀಜಗಳೊಂದಿಗೆ ಕೃತಕ ರಸಗೊಬ್ಬರಗಳೂ ಮಾರುಕಟ್ಟೆಯನ್ನು ಪ್ರವೇಶಿಸಿದವು. ಇದರಿಂದ ರೈತರಿಗಾಗುವ ಪ್ರಯೋಜನಕ್ಕಿಂತಲೂ ನಷ್ಟವೇ ಅಧಿಕವಾಗತೊಡಗಿತು. ಈ ಸಂಗತಿಯನ್ನು ಅಷ್ಟಾಗಿ ಪರಿಗಣಿಸದಿರುವುದು ಅಧ್ಯಯನದ ದೊಡ್ಡ ಕೊರತೆಯೆಂದೇ ಹೇಳಬಹುದು. ಸಾವಯವ ಕೃಷಿಗೆ ಇಂದು ಹೆಚ್ಚಿನ ಪ್ರಾಮುಖ್ಯತೆ ದೊರಯುತ್ತಿದೆ. ಇಂತಹ ಸಾವಯವದ ಫಸಲಿಗೆ ಅಂತಾರಾಷ್ಟ್ರೀಯ ಮಾರುಕಟ್ಟೆಯೂ ಲಭ್ಯವಾಗುತ್ತದೆ. ಈ ಅಂಶವನ್ನು ಪರಿಗಣಿಸಿದ್ದರೆ ಸೂಕ್ತವಾಗಿರುತ್ತಿತ್ತು.

ಅಗ್ರಿಕಲ್ಚರಲ್ ಮಾಡರ್ನೈಜೇಶನ್ ಆ್ಯಂಡ್ ಲ್ಯಾಂಡ್ ಲೇಬರ್ ಮಾರ್ಕೆಟ್ಸ್ ಇನ್ ನಾರ್ಥ್ ಕರ್ನಾಟಕ ಬೈ ವೀತೋಬ್ ಭೀಮನ್ನ ಆರ್.ಎಸ್.(2008)ಅವರ ಈ ಪ್ರಬಂಧವು ಹಸಿರು ಕ್ರಾಂತಿಯಿಂದಾಗಿ ಗ್ರಾಮಗಳಲ್ಲಿ ಹೆಚ್ಚಿನ ಬದಲಾವಣೆಯಾಗಿದೆ ಹಾಗೆಯೇ ನೀರಾವರಿ ಸೌಲಭ್ಯದಿಂದಾಗಿ ಮತ್ತು ಕೃಷಿಯಲ್ಲಿ ಆಧುನಿಕತೆಯನ್ನು ಬಳಸುತ್ತಿರುವುದರಿಂದಾಗಿ ಭೂಮಿ ಮತ್ತು ಕಾರ್ಮಿಕರ ಮಾರುಕಟ್ಟೆಗಳಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ.[39] ಹೀಗಾಗಿ ಗ್ರಾಮಗಳ ಕಾರ್ಮಿಕರು ಮತ್ತು ಭೂ ಗುತ್ತಿಗೆ ಮಾರುಕಟ್ಟೆಯು ಕ್ರಮೇಣ ಪ್ಲೆಕ್ಸಿಬಲ್ ಆಗಿರುವುದನ್ನು

ಚರ್ಚಿಸುತ್ತಿದ್ದಾರೆ. ಕೃಷಿಯಲ್ಲಿ ಕೂಲಿಗಳನ್ನು ಬಳಸಿಕೊಳ್ಳುವಾಗ ಅವರು ಈ ರೀತಿಯಾಗಿ ವಿಂಗಡಿಸಿದ್ದಾರೆ. ಫಾರ್ಮ್ ಸರ್ವೆಂಟ್ಸ್, ಕ್ಯಾಜುವೆಲ್ ಲೇಬರ್ಸ್, ಫೀಮೇಲ್ ಲೇಬರ್, ಚೈಲ್ಡ್ ಲೇಬರ್, ಕಾಂಟ್ರ್ಯಾಕ್ಟ್ ಗ್ರೂಫ್ ಲೇಬರ್ ಇತ್ಯಾದಿ. ನೀರಾವರಿಯಿಂದಾಗಿ ಕೃಷಿ ಕಾರ್ಮಿಕರಿಗೆ ಹೆಚ್ಚಿನ ಬೇಡಿಕೆಯು ಈ ದಿನಗಳಲ್ಲಿ ಇದೆ ಎಂಬುದಾಗಿ, ಹಾಗೆಯೇ ಅದಕ್ಕೆ ತಕ್ಕಂತೆ ಕೂಲಿಯ ದರವು ಹೆಚ್ಚದಿರುವುದನ್ನು ವಿವರಿಸುತ್ತಾರೆ. ಗುತ್ತಿಗೆ ವ್ಯವಹಾರದಲ್ಲಿ ಸಣ್ಣ ಮತ್ತು ಮಧ್ಯಮ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಗೇಣಿದಾರರಾಗಿರುತ್ತಾರೆ. ಇದಕ್ಕೆ ಸಂಬಂಧಿಸಿದ ಹಲವು ರೀತಿಯ ಒಪ್ಪಂದಗಳು ಜಾರಿಯಲ್ಲಿವೆ. ಉತ್ಪಾದಿಸಿದ ಉತ್ಪಾದನೆಗಳ ಮೇಲೆ ಗೇಣಿಯ ದರ ನಿಗದಿಯಾಗಿರುತ್ತದೆ. ಅವುಗಳು ಕ್ರಾಫ್ ಷೇರ್ಸ್ ಮತ್ತು ಫಿಕ್ಸ್ಡ್ ಕ್ಯಾಷ್ ರೆಂಟ್ ಎಂಬುದಾಗಿ ನಿಗದಿಯಾಗಿರುತ್ತದೆ. ಕೃಷಿಯಲ್ಲಿ ಕಾರ್ಮಿಕ ಮತ್ತು ಭೂಮಿಯ ಮಾರುಕಟ್ಟೆಯಿಂದ ಆರ್ಥಿಕವಾಗಿ ಹೆಚ್ಚಿನ ಬದಲಾವಣೆಯಾಗುತ್ತದೆ. The movement of very small & Marginal farmers from production to labour processes and the entry of small and medium formers in the land lease market have changed the structure of production and productions relations. ಸಂರಚನಾತ್ಮಕ ಮತ್ತು ಸಾಂಸ್ಥಿಕ ಬದಲಾವಣೆಗಳು ಹೇಗೆ ಕೃಷಿ ಕಾರ್ಮಿಕರ ಮತ್ತು ಭೂ ಗುತ್ತಿಗೆ ಮಾರುಕಟ್ಟೆಯಲ್ಲಿ ನೀರಾವರಿ ಪ್ರದೇಶ ಮತ್ತು ಮಳೆಯಾಧಾರಿತ ಪ್ರದೇಶಗಳಲ್ಲಿ ಹೇಗೆ ಇದೆಯೆಂಬುದನ್ನು ಕಾಲಾನುಕ್ರಮವಾಗಿ ಹೇಗೆ ಬದಲಾಗುತ್ತಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಪ್ರಸ್ತುತ ಅಧ್ಯಯನವು ಭಾರತದಲ್ಲಿ ಕೃಷಿ ಕಾರ್ಮಿಕರ ಬೆಳವಣಿಗೆಯನ್ನು ಪರಿವೀಕ್ಷಿಸುತ್ತಿದೆ. ಕೃಷಿ ಕಾರ್ಮಿಕರ ಮಾರುಕಟ್ಟೆಯ ರಚನೆ ಮತ್ತು ಕಾರ್ಮಿಕರ ಸ್ಥಿತಿಗತಿ ಮತ್ತು ಅವರ ಆರ್ಥಿಕತೆಯನ್ನು ಒಳಗೊಂಡಿದೆ. ನೀರಾವರಿ ಪ್ರದೇಶದ ಕಾರ್ಮಿಕರ ಬೇಡಿಕೆ, ಅವರ ಆದಾಯ ಮತ್ತು ಕೃಷಿ ಕಾರ್ಮಿಕರು ಮತ್ತು ಗೇಣಿಗೆ ಸಂಬಂಧಿಸಿದ ಕಾನೂನುಗಳು, ಅದರ ಸ್ವರೂಪ ಹೇಗಿದೆ ಎಂಬುದನ್ನು ಈ ಅಧ್ಯಯನ ಒಳಗೊಂಡಿದೆ.

ಅಧ್ಯಯನ ವಿಧಾನವಾಗಿ ಪ್ರಾಥಮಿಕ ಮತ್ತು ಆನುಷಂಗಿಕ ವಿಧಾನವನ್ನು ಅಳವಡಿಸಿ ಕೊಂಡಿದೆ. ಅದರಲ್ಲಿ ನೇರವಾಗಿ ಕೆಲವು ರೈತರನ್ನು ಆಯ್ದುಕೊಂಡು ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಸಂದರ್ಶನ ವಿಧಾನವನ್ನು ಬಳಸಲಾಗಿದೆ. ಈ ಅಧ್ಯಯನದ ಕೊರತೆಯನ್ನು ಹೇಳುವುದಾದರೆ ಮುಖ್ಯವಾಗಿ ಅಧ್ಯಯನಕಾರರು ತಾಂತ್ರಿಕ ಬೆಳವಣಿಗೆ ಮತ್ತು ಅವಲಂಬನೆಯಿಂದಾಗಿ ಕೃಷಿ ಕಾರ್ಮಿಕರಿಗೆ ಕೆಲಸ ದೊರೆಯದೇ ಹೋದ ಸಂಗತಿಯನ್ನು ಗುರುತಿಸಿರುವುದಿಲ್ಲ. ಕೃಷಿ ಕಾರ್ಮಿಕರಿಗೆ ಇರುವ ಕಾರ್ಮಿಕ ಕಾನೂನುಗಳು ಕೇವಲ

ಕಾನೂನಾಗಿಯೇ ಉಳಿದಿವೆಯೇ ಹೊರತು ಆಚರಣೆಯಲ್ಲಿ ಇರುವುದಿಲ್ಲ ಎನ್ನುವ ಅಂಶವನ್ನು ಗುರುತಿಸದೇ ಹೋಗಿದ್ದಾರೆ.

ಮ್ಯಾನೇಜ್‌ಮಂಟ್ ಆಫ್ ಅಗ್ರಿಕಲ್ಚರಲ್ ಪ್ರೊಡ್ಯೂಸಸ್ ಮಾರ್ಕೆಂಟಿಗ್ ಕಮಿಟೀಸ್ ಇನ್ ಕರ್ನಾಟಕ: ಎ ಕೇಸ್ ಸ್ಟಡಿ ಆಫ್ ಗುಲ್ಬರ್ಗಾ ಡಿವಿಜನ್ ಬೈ ಎಸ್. ರಾಮ್‌ಪುರ್(2010) ಈ ಅಧ್ಯಯನದಲ್ಲಿ ಭಾರತವು ಹಲವು ವರ್ಷಗಳಿಂದ ಕೃಷಿಯನ್ನೇ ಅವಲಂಬಿಸಿದೆ, ಶೇ. 70 ರಷ್ಟು ಜನರು ಕೃಷಿಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದಾರೆ ಎಂದಿದ್ದಾರೆ. ಆದರೂ ಹಿಂದಿನಿಂದಲೂ ಕೃಷಿ ವಲಯವು ತುಂಬಾ ನಿರ್ಲಕ್ಷ್ಯಕ್ಕೆ ಒಳಗಾಗಿದೆ.[40] ಸ್ವಾತಂತ್ರ್ಯಾನಂತರವು ಇದು ಹಾಗೆಯೇ ಮುಂದುವರಿದಿದೆ. ಈ ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ರಚನೆ ಕಾನೂನು ಆಡಳಿತ ಕಾರ್ಯರೂಪಗಳ ಬಗ್ಗೆ ಹೆಚ್ಚಿನ ಪ್ರಸ್ತಾಪವನ್ನು ಮಾಡಿದ್ದಾರೆ. ಕೃಷಿ ಮಾರುಕಟ್ಟೆಯ ಕಾರ್ಯವೈಖರಿ ಹೇಗಿದೆ ಮತ್ತು ಅದರಿಂದ ರೈತರಿಗೆ ಎಷ್ಟರ ಮಟ್ಟಿಗೆ ಉಪಯುಕ್ತವಾಗಿದೆ ಎಂಬುದನ್ನು ಚರ್ಚಿಸುತ್ತದೆ. ಅಧ್ಯಯನದಲ್ಲಿ ಕಾನೂನುಗಳ ವ್ಯಾಪ್ತಿ ಮತ್ತು ವಿವರಗಳನ್ನು ಮಾತ್ರ ನೀಡಿದ್ದಾರೆ. ಅವು ಎಷ್ಟರ ಮಟ್ಟಿಗೆ ರೈತರಿಗೆ ಪ್ರಯೋಜನಕಾರಿಯಾಗಿವೆ ಎಂಬುದನ್ನು ಚರ್ಚಿಸಿಲ್ಲ. ವಾಸ್ತವವಾಗಿ ಸರ್ಕಾರವು ಕೇವಲ ನಿಯಮಗಳನ್ನು ಖಾಲಿ ಹಾಳೆಯಲ್ಲಿ ಮಾತ್ರ ರೂಪಿಸಿರುತ್ತದೆ. ವಾಸ್ತವವಾಗಿ ಜಾರಿಯಲ್ಲಿರುವುದಿಲ್ಲ.

'ಮಾರ್ಕೆಂಟಿಗ್ ಆಫ್ ಇನ್ ಮಂಗಳೂರು ಸಿಟಿ: ಎ ಕೇಸ್ ಸ್ಟಡಿ ಇನ್‌ಟು ದಿ ಪ್ರಾಬ್ಲಮ್ ಆಫ್ ಕನ್ಸ್‌ಜೂಮರ್ಸ್ ಆ್ಯಂಡ್ ಡೀಲರ್ಸ್' ಬೈ ಗೀತಾ ಕುಮಾರಿ(1987) ಅಧ್ಯಯನವು ಮಂಗಳೂರು ನಗರದ ತರಕಾರಿ ಮಾರುಕಟ್ಟೆಯ ಸ್ವರೂಪವನ್ನು ಅಧ್ಯಯನಕ್ಕೆ ಒಳಪಡಿಸಿದೆ.[41] ಗ್ರಾಹಕರು ಮತ್ತು ಮಧ್ಯವರ್ತಿಗಳಿಂದಾಗಿ ಹೇಗೆ ಬೆಲೆ ನಿಗದಿಯಾಗುತ್ತದೆ ಮತ್ತು ಇದರಿಂದ ರೈತರಿಗೆ ಮತ್ತು ಗ್ರಾಹಕರಿಗೆ ನಷ್ಟವುಂಟಾಗಿ ಮಧ್ಯವರ್ತಿಗಳು ಮತ್ತು ಮಾರಾಟಗಾರರು ಹೇಗೆ ಲಾಭ ಪಡೆಯುತ್ತಾರೆಂಬುದನ್ನು ವಿಶ್ಲೇಷಿಸಲಾಗಿದೆ. ಇದು ಕೇವಲ ತರಕಾರಿ ಮಾರುಕಟ್ಟೆಗೆ ಮಾತ್ರ ಸೀಮಿತವಾದುದಾಗಿರದೇ ಇಡೀ ಕೃಷಿ ಮಾರುಕಟ್ಟೆಯ ಸಾಮಾನ್ಯ ಅಂಶವಾಗಿರುವುದನ್ನು ಗಮನಿಸಬಹುದಾಗಿದೆ. ಇಲ್ಲಿ ಅಧ್ಯಯನಕಾರರು ನಗರೀಕೃತ ಮಾರುಕಟ್ಟೆಯ ವ್ಯವಸ್ಥೆಯನ್ನು ಅಧ್ಯಯನ ಮಾಡಿದರೂ ಅದು ಪರೋಕ್ಷವಾಗಿ ಗ್ರಾಮಗಳ ಕೃಷಿ ಮಾರುಕಟ್ಟೆಗೆ ಸಂಬಂಧಿಸಿದ ವಿಸ್ತರಿಸಿದ ವ್ಯವಸ್ಥೆಯ ಅಧ್ಯಯನವಾಗಿದೆ.

'ಅಗ್ರಿಕಲ್ಚರಲ್ ಲೇಬರ್ ಇನ್ ಬ್ಯಾಕ್‌ವರ್ಡ್ ರೀಜಿನ್, ಎ ಕೇಸ್ ಸ್ಟಡಿ ಆಫ್ ಹೈದರಾಬಾದ್ ಕರ್ನಾಟಕ' ಬೈ ಹೆಚ್. ಎಸ್. ಥಾಭ(1996)ಅವರು ಹಿಂದುಳಿದ ಪ್ರದೇಶವಾದ ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಕೃಷಿ ಕಾರ್ಮಿಕರ ಸ್ಥಿತಿ-ಗತಿಗಳ ಕುರಿತಾದ ಅಧ್ಯಯನ ಮಾಡಿದ್ದಾರೆ.[42]

ಅಸಂಘಟಿತ ವಲಯವಾದ ಕೃಷಿಯಲ್ಲಿ ರೈತರ ಶೋಷಣೆಗೆ ಒಳಪಡುವಾಗ ಇನ್ನು ಕಾರ್ಮಿಕರ ಪರಿಸ್ಥಿತಿಯಂತೂ ಭೀಕರವಾಗಿದೆ. ನೀರಾವರಿ ಪ್ರದೇಶವನ್ನು ಹೊರತುಪಡಿಸಿದರೆ ಮಳೆಯಾಧಾರಿತ ಕೃಷಿ ಪ್ರದೇಶದಲ್ಲಿ ಕಾರ್ಮಿಕರಿಗೆ ವರ್ಷದುದ್ದಕ್ಕೂ ಕೂಲಿ ಸಿಗುವುದಿಲ್ಲ. ಸಿಕ್ಕರೂ ಮುಂಗಾರು ಮತ್ತು ಹಿಂಗಾರಿನ ಸೀಮಿತ ಅವಧಿಯಲ್ಲಿ ಮಾತ್ರ. ಜೀವನೋಪಾಯಕ್ಕಾಗಿ ಇವರು ಅರೆ ಕೃಷಿ ಕಾರ್ಮಿಕರಾಗಿ ಮತ್ತು ಅರೆ ನಗರವಾಸಿ ಕಾರ್ಮಿಕರಾಗಿ ಜೀವನ ನಿರ್ವಹಿಸಬೇಕಾದ ಸಂದರ್ಭವಿದೆ. ಈ ಅಂಶಗಳು ಅತ್ಯಂತ ಸಮರ್ಪಕವಾಗಿ ಅಧ್ಯಯನಕ್ಕೊಳಪಟ್ಟಿವೆ.

'ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ' ಕೃತಿಯಲ್ಲಿ ಹೆಚ್. ನಾಗರಾಜ ಶೆಟ್ಟಿಯವರು ಮಾರಾಟವು ಯಾವಾಗಲೂ ಮನಸೆಳೆಯುವಂತಹ ವಿಷಯವೇ. ಆರ್ಥಿಕ ವ್ಯವಸ್ಥೆಯಲ್ಲಿ ಎಲ್ಲ ಪ್ರಯತ್ನಗಳು ಉತ್ಪಾದನೆಯ ಬಗೆಗಿದ್ದು, ಅದೇ ಮಾರಾಟದ ವಿಷಯಕ್ಕೆ ಬಂದಾಗ ಶುದ್ಧ ಗೊಂದಲವೇ ಏಳುತ್ತದೆ[43] ಹಾಗೂ ಅನಿಶ್ಚಿತತೆಗಳು ಎದ್ದು ಕಾಣುತ್ತವೆ. ಮಾರಾಟ ತತ್ವಗಳು ಮತ್ತು ಯಶಸ್ವೀ ಮಾರಾಟಕ್ಕೆ ಅನುಸರಿಸಬೇಕಾದ ನೀತಿಗಳು. ಔದ್ಯೋಗಿಕ ಉತ್ಪನ್ನಗಳಿಗೆ ಹೇಗೋ ಹಾಗೆಯೇ ಕೃಷಿ ಉತ್ಪನ್ನಗಳನ್ನು ಸತತವಾಗಿ ಕಂಡುಕೊಳ್ಳುತ್ತಲೇ ಹೋಗಬೇಕಾಗುತ್ತದೆ. ಮಾರುಕಟ್ಟೆ ಕ್ಷೇತ್ರದ ಮೂಲಭೂತ ಸೌಲಭ್ಯವು ಯಶಸ್ವಿ ಮಾರಾಟಕ್ಕೆ ಮುಖ್ಯ ಸಾಧನೆಯಾಗಿದೆ. ಅರ್ಥವ್ಯವಸ್ಥೆಯ ಜಾಗತೀಕರಣ ಹಾಗೂ ಅದು ಆರ್ಥಿಕಾಭಿವೃದ್ಧಿಯ ಮೇಲೆ ಬೀರಬಹುದಾದ ಪರಿಣಾಮದ ಹಿನ್ನೆಲೆಯಲ್ಲಿ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳ ಮಾರಾಟಕ್ಕೆ ಅಗತ್ಯವಾದ ಮೂಲಭೂತ ಸೌಲಭ್ಯಗಳ ವಿಶ್ಲೇಷಣೆಯ ಪ್ರಯತ್ನವೊಂದನ್ನು ಅಧ್ಯಯನದಲ್ಲಿ ಮಾಡಲಾಗಿದೆ. ಈ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಮಾರುಕಟ್ಟೆ ಇಲಾಖೆ ಮತ್ತು ಅದಕ್ಕೆ ಸಂಬಂಧಿಸಿದ ಸಂಸ್ಥೆಗಳಿಂದ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸುತ್ತಾರೆ. ಪೂರಕವಾಗಿ ಕ್ಷೇತ್ರಕಾರ್ಯದಿಂದಲೂ ಪಡೆದ ಮಾಹಿತಿಯನ್ನು ಕ್ರೋಡೀಕರಿಸಿದ್ದಾರೆ. ಇವರ ಕೃತಿಯಲ್ಲಿ ಮಾರಾಟ, ಆರ್ಥಿಕ ಅಭಿವೃದ್ಧಿ, ಪೇಟೆಯ ಅಭಿವೃದ್ಧಿಗಾಗಿ ಒದಗಿಸಲಾಗುವ ಮೂಲಭೂತ ವ್ಯವಸ್ಥೆ ಮುಂತಾದವುಗಳ ವಿಶ್ಲೇಷಣೆಯನ್ನು ಸಹ ಕಾಣಬಹುದಾಗಿದೆ. ಅಲ್ಲದೆ ಈ ಕೃತಿಯಲ್ಲಿ ಭಾರತದ ಕೃಷಿ ಮಾರಾಟದ ಕುರಿತು ಐತಿಹಾಸಿಕ ಬೆಳವಣಿಗೆಯನ್ನು ವ್ಯಾಖ್ಯಾನಿಸಿರುವುದು ವಿಶೇಷ. ಮಾರಾಟದ ಧೋರಣೆ ಮತ್ತು ಕಾನೂನಿನ ಚೌಕಟ್ಟು, ಕರ್ನಾಟಕದಲ್ಲಿ ಪೇಟೆಯ ಅಭಿವೃದ್ಧಿ ಧೋರಣೆಗಳು ಪೇಟೆಗಳ ಬೆಳವಣಿಗೆ ಮತ್ತು ವಿಕಾಸದ ವಿಶ್ಲೇಷಣೆ, ಕೃಷಿ ಮಾರಾಟಕ್ಕಾಗಿ ಸಾಂಸ್ಥಿಕ ವ್ಯವಸ್ಥೆಯ ವಿಕಸನ, ಮಾರಾಟದ ಮೂಲಭೂತ ವ್ಯವಸ್ಥೆ ಹಾಗೂ ಉತ್ಪಾದನೆ, ಉತ್ಪಾದಕತೆ ಮತ್ತು ಪೇಟೆ ಆವಕಗಳ ಮೇಲೆ ಅದರ ಪರಿಣಾಮ, ಪೇಟೆಯ ಅಭಿವೃದ್ಧಿಯ ಸವಾಲುಗಳು ಧೋರಣೆಯ ಆಯ್ಕೆಗಳು ಮುಂತಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಪ್ರಾಜೆಕ್ಟ್ ರಿಪೋರ್ಟ್ ಆನ್ ಯ್ಯಾನ್ ಇಂಪ್ಯಾಕ್ಟ್ ಸಬ್‌ಸಿಡಿ ಆನ್ ಆನಿಯನ್ ಗ್ರೋವರ್ಸ್ ಇನ್ ಸಂಡೂರು ಬೈ ಶರೀಫ್(2015) ಅಧ್ಯಯನದಲ್ಲಿ ಸಂಶೋಧಕರು, ಸಂಡೂರು ತಾಲೂಕಿನ 5 ಗ್ರಾಮಗಳನ್ನು ಆಯ್ದು, ಆಯ್ದ ಗ್ರಾಮಗಳಲ್ಲಿ ತೋಟಗಾರಿಕೆ ಬೆಳೆಯಾದ ಈರುಳ್ಳಿ ಬೆಳೆಯನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈರುಳ್ಳಿಯನ್ನು ತೆಗೆದುಕೊಳ್ಳಲು ಕಾರಣವನ್ನು ಈರೀತಿಯಾಗಿ ಪ್ರಸ್ತಾಪಿಸುತ್ತಾ, ಈರುಳ್ಳಿ ಬೆಳೆಯೂ ಒಂದು ತೋಟಗಾರಿಕೆ ಬೆಳೆಯಾಗಿದ್ದು, ಈರುಳ್ಳಿಯನ್ನು ಬೆಳೆಯುವ ರೈತರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು, ಹಾಗೂ ಈರುಳ್ಳಿ ಬೆಳೆಗೆ ನೀಡುತ್ತಿರುವ ಸಬ್ಸಿಡಿಯ ಕುರಿತು, ಮತ್ತು ರೈತರು ಈ ಭಾಗದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯಯಿಸುವುದಾಗಿದೆ ಎಂದು ವಿವರಿಸುತ್ತಾರೆ.[44] ಈ ಭಾಗದಲ್ಲಿ, ರೈತರು ಹೆಚ್ಚಾಗಿ ಈರುಳ್ಳಿ ಬೆಳೆಯನ್ನು ಬೆಳೆಯುತ್ತಿದ್ದು, ಇತ್ತೀಚಿನ ದಿನಗಳಲ್ಲಿ ತೋಟಗಾರಿಕೆ ಬೆಳೆಗಳಲ್ಲಿ ಬಾಳೆಯನ್ನು ಬೆಳೆಯುತ್ತಿದ್ದಾರೆ. ಆದರೂ ಹಿಂದಿನಿಂದಲೂ ಹೆಚ್ಚಾಗಿ ಈರುಳ್ಳಿಯನ್ನು ಬೆಳೆಯುತ್ತಿದ್ದಾರೆ. ಅದಕ್ಕೆ, ಈ ಭಾಗದ ಹವಾಗುಣವು ಮತ್ತು ಮಣ್ಣಿನ ಗುಣವೇ ಕಾರಣ ಎನ್ನುತ್ತಾರೆ. ಏಕೆಂದರೆ ಇಲ್ಲಿಯ ಭೂಮಿಯು ಈರುಳ್ಳಿಯ ಹೆಚ್ಚಿನ ಇಳುವರಿಗೆ ತುಂಬಾ ಸೂಕ್ತವಾಗಿದೆ ಎನ್ನುವ ಅಂಶವನ್ನು ಸಂಶೋಧಕರು ವಿಶ್ಲೇಷಿಸಿದ್ದಾರೆ. ಸಂಶೋಧಕರು ಸಂಡೂರಿನಲ್ಲಿ ಐದು ಗ್ರಾಮಗಳನ್ನು ಆಯ್ದು, ಒಟ್ಟು 45 ರೈತರನ್ನು ಸಂದರ್ಶಿಸಿ, ಎಲ್ಲ ರೈತರು ಈರುಳ್ಳಿಯನ್ನು ಬೆಳೆಯುತ್ತಿದ್ದು, 45ರಲ್ಲಿ 38 ರೈತರು, ಈರುಳ್ಳಿ ಬೆಳೆಯಲ್ಲಿ, ತಾವು ಕೆಲ ತೊಂದರೆಗಳನ್ನು ಎದುರಿಸುತ್ತಿದ್ದೇವೆ (ಮಾರುಕಟ್ಟೆ, ಬೆಲೆನಿಗದಿ, ಶೇಖರಣೆ) ಎಂದರೆ, ಒಟ್ಟು 45 ರೈತರಲ್ಲಿ 13.33%ರಷ್ಟು ರೈತರ ಆದಾಯವು, ತಿಂಗಳಿಗೆ 15000–12000 ಸಾವಿರವಿದ್ದರೆ, 33.33% ರೈತರದ್ದು 12000–10000 ಸಾವಿರವಿದ್ದರೆ, ಉಳಿದ 11.11%ರಷ್ಟು ರೈತರ ಆದಾಯವು 8000–6000 ಸಾವಿರವಿರುತ್ತದೆ. ಎಲ್ಲ ರೈತರು ಸಾಲವನ್ನು ಬ್ಯಾಂಕುಗಳಲ್ಲಿ ಪಡೆದಿರುತ್ತಾರೆ ಎನ್ನುವ ಅಂಶವನ್ನು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ. ಮೊದಲನೆಯದಾಗಿ ಈರುಳ್ಳಿಯು ತೋಟಗಾರಿಕೆ ಬೆಳೆ, ಎರಡನೆಯದಾಗಿ ಈ ಅಧ್ಯಯನವನ್ನು ಸಂಡೂರು ತಾಲೂಕಿನಲ್ಲಿ ಕೈಗೊಳ್ಳಲಾಗಿದೆ.

ಒಟ್ಟಾರೆ ಈ ಅಧ್ಯಯನದಿಂದ ನನ್ನ ಅಧ್ಯಯನಕ್ಕೆ ಹೊಸ ಆಯಾಮ ಸಿಕ್ಕಿದೆ. ಏಕೆಂದರೆ ಇಲ್ಲಿ ಸಂಶೋಧಕರು ತೋಟಗಾರಿಕೆ ಬೆಳೆಯಲ್ಲಿ ಈರುಳ್ಳಿಯನ್ನು ಆಯ್ದುಕೊಂಡು ಕೇವಲ 45 ರೈತರನ್ನು ಸಂದರ್ಶಿಸಿದ್ದಾರೆ, ಮತ್ತು ಅವರ ಅಧ್ಯಯನದ ಸಾರಾಂಶವು ರೈತರು ಇಲಾಖೆಯ ಯೋಜನೆಗಳಿಂದ ತೃಪ್ತಿಯಾಗಿದ್ದಾರೆ ಎನ್ನುವುದಾಗಿದೆ. ಈ ಅಧ್ಯಯನದಲ್ಲಿ ಲೇಖಕರು 21ನೇ ಶತಮಾನಕ್ಕೆ ಕಾಲಿಡುತ್ತಲೇ ಕೃಷಿಯಲ್ಲಿ ಬೃಹತ್ ಬದಲಾವಣೆಯ ಗಾಳಿ ಬೀಸಿದೆ. 1930ರ

ಆಸುಪಾಸಿನಲ್ಲಿ ನಮ್ಮ ಕೃಷಿಯು ಯಾವುದೇ ಅಧುನಿಕತೆಯತ್ತ ವಾಲಿರಲಿಲ್ಲ ಎಂಬುದನ್ನು ಹೇಳುತ್ತಾ 1940ರ ವೇಳೆಗೆ ಕಾಲಿಟ್ಟ ರಸಗೊಬ್ಬರಗಳು ಮೊದಲ ಬಾರಿಗೆ ಬದಲಾವಣೆಯ ರುಚಿಯನ್ನು ತಂದವು. ಆಧುನಿಕತೆಯ ಗಾಳಿ ಆರಂಭಗೊಂಡಿದ್ದು ಹಾಗೆಯೇ 20–25 ವರ್ಷಗಳಲ್ಲಿ ಅಂದರೆ 1960ರ ವೇಳೆಗೆ ರಸಗೊಬ್ಬರಗಳು ಪ್ರಭಾವಶಾಲಿ ಒಳಸುಳಿಗಳಾಗಿ ಎಲ್ಲರೂ ಈ ರಾಸಾಯನಿಕಗಳ ಮಾಂತ್ರಿಕತೆಯ ಮೋಹಕ್ಕೆ ಒಳಗಾದವರೇ ಹೆಚ್ಚು. ಹೀಗೆ ಆರಂಭಗೊಂಡ ಮಾರುಕಟ್ಟೆ ಆಧಾರಿತ ಒಳಸುಳಿಗಳು ಒಂದೊಂದಾಗಿ ಕೃಷಿಯನ್ನು ಆಕ್ರಮಿಸತೊಡಗಿದವು. ಹಾಗೆಯೇ ಹೆಚ್ಚು ಕಡಿಮೆ ಇಡೀ ಭಾರತೀಯ ಕೃಷಿಯು ಮುಂಗಾರು ಮಳೆಯೊಂದಿಗಿನ ಆಟ ಎಂದೇ ಬಿಂಬಿತವಾಗಿದೆ. ಹಾಗೆಂದು ಮಳೆಯನ್ನು ನಂಬಿ ಬಿತ್ತುವ ಆಲೋಚನೆಯಿಂದ ಹೊರಬರಲು ನೀರಾವರಿ ಯೋಜನೆಗಳು ಜಾರಿಗೆ ಬಂದವು ಎಂಬುದನ್ನು ಹೇಳಿದ್ದಾರೆ. ಹೀಗೆ ಪ್ರತಿಬಾರಿಯು ಹೊಸತೊಂದು ಇನ್‌ಪುಟ್, ಅದರ ಮಾರುಕಟ್ಟೆ ಕಂಪನಿಯ ಲಾಭ ನಷ್ಟದ ಹೊರೆ, ಹೊಸ ಹೊಸ ಉತ್ಪನ್ನಗಳ ನಿಯಂತ್ರಿಸುವ ಆಯಾಮಗಳ ಹಿಡಿತದಲ್ಲಿ ನಷ್ಟದ ಹೊರೆ, ಹೊಸ ಹೊಸ ಉತ್ಪನ್ನಗಳ ನಿಯಂತ್ರಿಸುವ ಆಯಾಮಗಳ ಹಿಡಿತದಲ್ಲಿ ಕೃಷಿ ಅಭಿವೃದ್ಧಿಯನ್ನು ಕೈಗೊಳ್ಳಲಾಯಿತು. ಈ ಪ್ರಸ್ತುತ ಅಧ್ಯಯನದಲ್ಲಿ ಹಿಂದೊಮ್ಮೆ ಬೌದ್ಧಿಕ ಆಸ್ತಿ ಹಕ್ಕುಗಳಿಗೆ ಕೇವಲ ಎಂಜಿನಿಯರಿಂಗ್ ಉತ್ಪನ್ನಗಳಿಗೆ ಒಗ್ಗಿಕೊಂಡಿದ್ದ ನಾವು ಈಗ ಜೈವಿಕ ಉತ್ಪನ್ನಗಳ ಮೇಲಿನ ಪರಿಣಾಮವನ್ನು ನೋಡುತ್ತಿದ್ದೇವೆ ಎಂಬುದನ್ನು ತಿಳಿಸಿದ್ದಾರೆ. ಆದರೆ ವಾಸ್ತವ ಸ್ಥಿತಿಯ ಮೇಲಿನ ಪರಿಣಾಮವು ಮುಖ್ಯವಾಗಿದೆ. ಇದರಲ್ಲಿ ಮುಖ್ಯವಾಗಿ ರೈತರನ್ನು ಕಾಡುತ್ತಿರುವ ಎಲ್ಲ ಮಾಧ್ಯಮಗಳು, ರೈತ ಸಂಘಟನೆಗಳು, ಕಾರ್ಯಕರ್ತರು ಬಿಂಬಿಸುತ್ತಿರುವುದು ರೈತರಿಗೆ ಹೊಸ ಬೀಜ ಮಸೂದೆಯನ್ನು ಜಾರಿಗೊಳಿಸಬೇಕು. ಹೀಗೆ ಮಸೂದೆಗಳು ಜಾರಿಗೊಳ್ಳುತ್ತವೆ. ಆದರೆ ಬೀಜವೊಂದರ ಮಸೂದೆ ಹೊಸ ಹಿಡಿತವಷ್ಟೇ ಆದರೆ ರಸಗೊಬ್ಬರದಿಂದ ಆರಂಭಗೊಂಡ ಈ ಮಾದರಿ ಹಿಡಿತಗಳು ರೈತರಿಗೇನೂ ಹೊಸದಲ್ಲ ಎನ್ನುವ ಅಂಶವನ್ನು ತಿಳಿಸಿದ್ದಾರೆ.

ಮಾರ್ಕೆಟಿಂಗ್ ಮಂತ್ರಗಳು ಮುರುಗೇಶ ಹನಿಗೋಡಿಮಠ ಅವರ ಪುಸ್ತಕದಲ್ಲಿ ಕೃಷಿ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಅಧ್ಯಯನದ ಉದ್ದೇಶವು ಕೃಷಿ ಮಾರುಕಟ್ಟೆಯನ್ನು ಅಧ್ಯಯನ ಮಾಡುವುದಾಗಿರುವುದರಿಂದ ಇದು ಸಂಶೋಧನ ವಿಷಯಕ್ಕೆ ಪೂರಕವಾಗಿದೆ.[45] ಈ ಅಧ್ಯಯನದಲ್ಲಿ ಮಾರುಕಟ್ಟೆಯ ಕುರಿತಾಗಿ ಕೆಲವು ಮುಖ್ಯವಾದ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಜಾಗತೀಕರಣದ ಪರಿಣಾಮವಾಗಿ ಇಡಿ ಪ್ರಪಂಚವೇ ಒಂದು ಭೂಗ್ರಾಮವಾಗಿರುವ ಸಂದರ್ಭದಲ್ಲಿ, ಎಲ್ಲ ಕೈಗಾರಿಕಾ ರಂಗಗಳಲ್ಲಿಯೂ, ಬೃಹತ್ ಉದ್ದಿಮೆ

ಗಳಲ್ಲಿಯೂ ಅತ್ಯಂತ ಬಲವಾದ ಸ್ಪರ್ಧೆ, ಪೈಪೋಟಿಯು ಉದ್ಭವಿಸಿದೆ. "ಯಾರು ಹೆಚ್ಚು ಪೈಪೋಟಿಯನ್ನು ಎದುರಿಸಲು ಸಾಧ್ಯವೋ ಅಂತಹ ಉದ್ಯಮಿ ಮಾತ್ರ ಉಳಿಯಲು ಸಾಧ್ಯ ಎನ್ನುವ "ಡಾರ್ವಿನ್" ಹೇಳಿಕೆಯನ್ನು ವಿವರಿಸಿದ್ದಾರೆ. ಜಾಗತೀಕರಣದ ಈ ಸಂದರ್ಭದಲ್ಲಿ ಉತ್ಪಾದಕನು ಉತ್ಪನ್ನಗಳನ್ನು ಗ್ರಾಹಕನಿಗೆ ತಲುಪಿಸಬೇಕಾದಲ್ಲಿ ಸಮರ್ಥ ಸೇಲ್ಸ್‌ಮ್ಯಾನ್ ಅಗತ್ಯವಿದೆ ಎಂದು ಹೇಳುತ್ತಾ, ಮಧ್ಯವರ್ತಿಗಳ ಪಾತ್ರವನ್ನು ಮತ್ತು ಪ್ರಾಮುಖ್ಯತೆಯನ್ನು ಕಂಪನಿಗಳು ತಿಳಿದು ಉತ್ಪನ್ನಗಳನ್ನು ಮಾರಾಟ ಮಾಡಲು ಸಮರ್ಥ ರಾಯಭಾರಿಯನ್ನು(Brand ambassadar) ರೂಪಿಸಿಕೊಳ್ಳುವ ಅವಶ್ಯಕತೆಯೂ ಇದೆ ಎನ್ನುವ ಅಂಶವನ್ನು ತಿಳಿಸಿದ್ದಾರೆ.

ಮಾರ್ಕೆಟಿಂಗ್ ಮಂತ್ರಗಳು ಮುರುಗೇಶ ಹನಗೋಡಿಮಠ 4ಪಿ'ಗಳು ಜಗತ್ತು ವ್ಯಾಪಾರದ ಬೀಜ ಮಂತ್ರಗಳು ಅಧ್ಯಯನದಲ್ಲಿ ತಿಳಿಸಿರುವ 4ಪಿ' ಅಂದರೆ marketing principles ಹೇಗೆ ಕೃಷಿ ಉತ್ಪನ್ನವಲ್ಲದ ಉತ್ಪಾದಕರು(ವ್ಯಾಪಾರಿಗಳು) ತಾವು ಉತ್ಪಾದಿಸಿದ ಉತ್ಪನ್ನಗಳಿಗೆ ತಮ್ಮ ಹೆಸರನ್ನು, ತಾವೆ ಬೆಲೆಯನ್ನು ನಿಗದಿ ಮಾಡಿ ಮಾರುಕಟ್ಟೆಯಲ್ಲಿ ಮಾರಾಟಮಾಡುತ್ತಾರೆ.[46] ಈ ಸೌಲಭ್ಯವು ರೈತರಿಗೆ ದೊರೆತಲ್ಲಿ ಈ marketing principles ತುಂಬಾ ಉಪಯೋಗವಾಗುತ್ತದೆ ಎನ್ನುವುದಾಗಿದೆ. ಈ ಅಧ್ಯಯನದಲ್ಲಿ ವಾಪಾರದಲ್ಲಿ ಬರುವ ನಾಲ್ಕು ಮುಖ್ಯವಾದ ಬೀಜಮಂತ್ರಗಳ ವಿಷಯವಾಗಿ ಲೇಖಕರು ಚರ್ಚಿಸಿದ್ದಾರೆ. ವ್ಯಾಪಾರಿಜಗತ್ತಿನಲ್ಲಿ, ಮೂಲವ್ಯಾಪಾರದ ತತ್ವಗಳು ಎಂದು(marketing principles) ವಿಶ್ವದ ವ್ಯಾಪಾರಿ ಗುರುಗಳು ನಾಲ್ಕು ಅದ್ಭುತವಾದ ಬೀಜ ಮಂತ್ರಗಳನ್ನು ಕಂಡುಹಿಡಿದಿದ್ದಾರೆ, ಅವರು ಹೇಳುವಂತೆಯೇ ಆ ನಾಲ್ಕು ಅಂಶಗಳು ಇಂತಿವೆ. ಉತ್ಪನ್ನ ಅಥವಾ ವಸ್ತು(product), ಮೌಲ್ಯ ಅಥವಾ ಬೆಲೆ(price), ಸ್ಥಾನ ಅಥವಾ ಮಾನ (promotion) ಮಾರಾಟದ ಅಭಿವೃದ್ಧಿಗೆ ಸಹಾಯಕಾರಿ ಸಲಕರಣೆಗಳು. ಈ 4ಫಿ ಯಾವುದೇ ಒಂದು ವಸ್ತುವನ್ನು ಜಗತ್ತಿ(market)ಗೆ ಹೊಸದಾಗಿ ಪರಿಚಯಿಸಬೇಕೆಂದಾಗ ವ್ಯಾಪಾರಿಯು ಚೆನ್ನಾಗಿ ಅಧ್ಯಯನ ಮಾಡಿಯೇ ಉತ್ಪನ್ನಗಳನ್ನು ತಯಾರು ಮಾಡಿ ಬಿಡುಗಡೆ ಮಾಡಬೇಕೆಂದೂ, ಆಗಲೇ ಉತ್ಪನ್ನಗಳನ್ನು ಯಶಸ್ವಿಯಾಗಿ ಮಾರಾಟ ಮಾಡಬಹುದು ಎನ್ನುವ ಅಂಶವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಈ ನಾಲ್ಕು ಅಂಶಗಳನ್ನು ಕಳೆದ ಎರಡು ಶತಮಾನಗಳಿಂದ ವಿಶ್ವದ ಅಗ್ರಮಾನ್ಯ ಕಂಪನಿಯವರು ಅತ್ಯಂತ ಶ್ರದ್ಧೆಯಿಂದ ಪಾಲಿಸಿ ತಮ್ಮ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ಅತ್ಯಂತ ಸುಭದ್ರ ಸ್ಥಾನಮಾನಗಳನ್ನು ಪಡೆದುಕೊಂಡಿವೆ. ಈ ಸೂತ್ರಗಳಿಂದ ವ್ಯಾಪಾರಿ ಮಾರುಕಟ್ಟೆಯಲ್ಲಿ ಅತ್ಯಂತ ವೇಗವಾಗಿ ಬೆಳೆಯುತ್ತಿದ್ದಾನೆ. ಆದರೆ ಇದು ಒಬ್ಬ ರೈತನಿಗೆ ಸಾಧ್ಯವಾಗುವದಿಲ್ಲ ಎನ್ನುವ ಅಂಶವು ಲೇಖಕರ ವಿವರಣೆಯಿಂದ ತಿಳಿದುಬರುತ್ತದೆ. ಅನೇಕ

ರೈತರು ಒಂದು ಕಂಪನಿಯ ಬೀಜ, ಗೊಬ್ಬರ ಮತ್ತು ರಾಸಾಯನಿಕಗಳನ್ನೇ ಬಳಸುತ್ತಾರೆ. ಹಾಗೆಯೇ ಅವರು ಬಳಸುವ ಅನೇಕ ಕೃಷಿ ಉಪಕರಣೆಗಳು ಬ್ರಾಂಡ್(company)ಗಳನ್ನೇ ಹೊಂದಿರುತ್ತವೆ. ಆದರೂ ರೈತರು ಬೆಳೆದ ಯಾವೊಂದು ಉತ್ಪನ್ನಕ್ಕೂ ಎಲ್ಲಿಯೂ ಕಂಪನಿಯ ಹೆಸರನ್ನು ನಿಗದಿಪಡಿಸುವುದಿಲ್ಲ. marketing principles ಹೇಳುವ ಹಾಗೆ ಅವುಗಳನ್ನು ಕೃಷಿಗೆ ಅಳವಡಿಸಿದಾಗ, ಕೃಷಿಯಲ್ಲಿ ಆಗುವ ಬೆಲೆ ನಿಗದಿ ಸಮಸ್ಯೆಯನ್ನು, ಹಾಗೆಯೇ ಅನೇಕ ರೈತರಿಗೆ ಆಗುವ ತೋಂದರೆಯನ್ನು ಕಡಿಮೆಗೊಳಿಸಬಹುದು. ಈ ಅಂಶವು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.

ಮಾರ್ಕೆಟಿಂಗ್ ಮಂತ್ರಗಳು ಮುರುಗೇಶ ಹನಗೋಡಿಮಠ ಅವರ(AIDA) ಮಾರ್ಕೆಟಿಂಗ್ ಜೀವನಾಡಿ ಈ ಅಧ್ಯಯನದಲ್ಲಿ ಒಬ್ಬ ವ್ಯಾಪಾರಿಯು ತಾನು ಉತ್ಪಾದಿಸಿದ ಉತ್ಪನ್ನಗಳನ್ನು ಮಾರುಕಟ್ಟೆಯಲಿ ಮಾರಾಟ ಮಾಡಬೇಕಾದಾಗ ಗ್ರಾಹಕರ ಮನವೊಲಿಸುವ ಚತುರತೆಯ ಅವಶ್ಯಕತೆಯ ಕುರಿತಾಗಿ ವಿವರಿಸಿದ್ದಾರೆ. ಈ ಅಂಶವು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.[47] ಲೇಖಕರು ಗ್ರಾಹಕರ ಮನವೋಲಿಸಲು 4ಫಿ' ಪಾತ್ರ ಬಹಳ ಪ್ರಮುಖವಾದ ಅಂಶವಾಗಿದೆ. ಹಾಗೆಯೇ ಲೇಖಕರು ಮಾರ್ಕೆಟಿಂಗ್ ತತ್ವವನ್ನು ವಿಶ್ಲೇಷಿಸಿದ್ದಾರೆ. ಮಾರ್ಕೆಟಿಂಗ್ ತತ್ವವು, ಮಾರುಕಟ್ಟೆಯಲ್ಲಿ ವ್ಯಾಪಾರಿಯು ತನ್ನ ವ್ಯಾಪಾರವನ್ನು ಕುದುರಿಸಿಕೊಳ್ಳಲು ಮತ್ತು ತುಂಬಾ ದಿನಗಳವರೆಗೆ ಮಾರುಕಟ್ಟೆಯಲ್ಲಿ ಉಳಿಯಲು ಸಹಕಾರಿಯಾಗುತ್ತದೆ. ಮಾರ್ಕೆಟಿಂಗ್ ತತ್ವವನ್ನು ಲೇಖಕರು ಈ ರೀತಿಯಾಗಿ ವಿವರಿಸಿದ್ದಾರೆ:

A- Attention(ಗಮನ ಸೆಳೆಯುವುದು)

I- Interest or Inclination(ಆಸಕ್ತಿಯನ್ನು ಕುದುರಿಸುವುದು)

D- Desire or Decision(ಮಾರುಕಟ್ಟೆಯ ನಿರ್ಧಾರವನ್ನು ತೆಗೆದುಕೊಳ್ಳುವಂತೆ ಪ್ರೇರೇಪಿಸುವುದು)

A- Action(ಕ್ರಿಯಾಶೀಲರಾಗುವಂತೆ ಮಾಡುವುದು)

ಕ್ರಿಯಾಶೀಲರಾಗುವಂತೆ ಮಾಡುವುದು ಈ ಮೇಲಿನ ತತ್ವವಗಳನ್ನು ಪ್ರತಿಯೊಬ್ಬ ಮಾರಾಟ ಗಾರನು, ಅಂದರೆ ವಾಣಿಜ್ಯ ಉತ್ಪನ್ನಗಳನ್ನು ಉತ್ಪಾದಿಸುವ ಕಂಪನಿಗಳು, software company' ಗಳು ರೈತರು, ಇತರೆ ಯಾವುದೇ ಮಾರಾಟಗಾರರು ತಮ್ಮ ಉತ್ಪನ್ನಗಳನ್ನು ಮಾರುವಾಗ ಮೇಲಿನ ತತ್ವಗಳನ್ನು ಅಳವಡಿಸಿಕೊಂಡು, ಉತ್ಪನ್ನಗಳನ್ನು ನೇರವಾಗಿ ಮಾರುಕಟ್ಟೆಗೆ ಹೋಗಿ ಗ್ರಾಹಕರನ್ನು ಸಂಪರ್ಕಿಸಿದಾಗ, ವ್ಯಾಪಾರಿಗಳು ಮತ್ತು ಗ್ರಾಹಕರು ನಷ್ಟ ಅನುಭವಿಸುವುದನ್ನು ತಡೆಯಬಹುದು ಎನ್ನುವ ಅಂಶವನ್ನು ಲೇಖಕರು ತಿಳಿಸಿದ್ದಾರೆ. ಈ ರೀತಿಯಾಗಿ ವಿವರಿಸುತ್ತಾ marketing theoryಯ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ. ವ್ಯಾಪಾರಿಯು ಮಾರ್ಕೆಟಿಂಗ್

ತತ್ವಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡಾಗ ತಾನು ಬೆಳೆದ ಉತ್ಪನ್ನಗಳಿಗೆ ಒಳ್ಳೆಯ ಮಾರುಕಟ್ಟೆಯನ್ನು ಹಾಗೂ ಲಾಭವನ್ನು ಗಳಿಸಬಹುದು ಎಂದು ತಿಳಿಸಿದ್ದಾರೆ. ಈ ಅಂಶವು, ಅಂದರೆ marketing theory ಮತ್ತು ಮಾರ್ಕೆಟಿಂಗ್ ತತ್ವಗಳನ್ನು ರೈತರು ಅಳವಡಿಸಿಕೊಂಡಲ್ಲಿ ಹೆಚ್ಚಿನ ಲಾಭವನ್ನು ಪಡೆಯಬಹುದಾಗಿದೆ ಎನ್ನುವ ಅಂಶವು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.

ಎನ್.ದೇವರಾಜ ರೆಡ್ಡಿ(1998) ಅವರ 'ಕೊಳವೆಬಾವಿಗೆ ಜಲ ಮರುಪೂರಣ' ಈ ಅಧ್ಯಯನದಲ್ಲಿ ಕೊಳವೆಬಾವಿಗೆ ಸಂಬಂಧಿಸಿದಂತೆ ರೈತರಿಗೆ ಸರಕಾರದಿಂದ ದೊರೆಯುವ ಯೋಜನೆಗಳ ಉಪಯೋಗ, ಮತ್ತು ಅದರಿಂದ ಆಗುವ ಪ್ರಕೃತಿ ವಿಕೋಪಗಳನ್ನು ವಿವರಿಸಿದ್ದಾರೆ.[48] ಈ ಅಂಶವು ಅಧ್ಯಯನದ ಉದ್ದೇಶಗಳಿಗೆ ಪೂರಕವಾಗಿದೆ. ರೈತರು ಕೆಲವು ಭಾಗಗಳಲ್ಲಿ ಹೆಚ್ಚಿನ ಬೆಳೆಯನ್ನು ಬೆಳೆಯುವ ಉದ್ದೇಶದಿಂದ ಕೊಳವೆ ಬಾವಿಗಳನ್ನು ಕೊರೆಯಿಸಿ, ರೈತರು ಕೇವಲ ಬೆಳೆಗಳನ್ನು ಬೆಳೆಯುವಲ್ಲಿ ನಿರತರಾಗುತ್ತಾರೆ ವಿನಃ ಕೊಳವೆ ಬಾವಿಗಳಿಗೆ ನೀರಿನ ಮರುಪೂರಣದ ಬಗ್ಗೆ ಗಮನ ಹರಿಸುವುದಿಲ್ಲ. ಹೀಗಾಗಿ ಹಿಂದಿನ ಕಾಲದಲ್ಲಿ 80ರಿಂದ 100 ಅಡಿಯಲ್ಲಿ ಕೊಳವೆ ಬಾವಿಯಲ್ಲಿ ಬರುತ್ತಿದ್ದ ನೀರು ಇಂದಿನ ದಿನಮಾನಗಳಲ್ಲಿ 700ರಿಂದ 1000 ಅಡಿ ಭೂಮಿಯನ್ನು ಕೊರೆದರೂ ನೀರು ಸಿಗದ ಪರಿಸ್ಥಿತಿ ಎದುರಾಗಿದೆ.

ಈ ಅಧ್ಯಯನದಲ್ಲಿ ಮುಖ್ಯವಾಗಿ ಅಡಿಕೆ ಬೆಳೆಗಾರರು, ತೆಂಗು ಬೆಳೆಗಾರರು ಎದುರಿಸುತ್ತಿರುವ ಇಂದಿನ ಮಾರುಕಟ್ಟೆಯ ಸಮಸ್ಯೆಯನ್ನು ಅದಕ್ಕೆ ಕಾರಣಗಳನ್ನು ನೀಡುತ್ತಾ, ರೈತರು ಯಾವಾಗ ಮಾರುಕಟ್ಟೆಯಲ್ಲಿ ಯಾವ ಉತ್ಪನ್ನಗಳ ಬೇಡಿಕೆ ಬರುತ್ತದೆಯೋ ಅಂತಹ ಉತ್ಪನ್ನಗಳನ್ನು ಹೆಚ್ಚಾಗಿ ಬೆಳೆಯುವುದರಿಂದ ಉತ್ಪನ್ನ ಹೆಚ್ಚಾಗಿ ಬೆಲೆ ಕಡಿಮೆಯಾಗುತ್ತದೆ. ಅದರ ಪರಿಣಾಮವಾಗಿ ಅನೇಕ ರೈತರು ಬೆಲೆ ಹೆಚ್ಚಳಕ್ಕೆ ಬೇಡಿಕೆ ಇಡುತ್ತಾರೆ, ಬೇಡಿಕೆಗೆ ಸರ್ಕಾರ ಸ್ಪಂದಿಸದೆ ಇದ್ದ ಪಕ್ಷದಲ್ಲಿ ಆತ್ಮಹತ್ಯೆಯಂತಹ ಕೃತ್ಯಕ್ಕೆ ಶರಣಾಗುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ರೈತರು ಬೆಳೆಗಳನ್ನು ಬೆಳೆಯಲು ಯಾವೊಂದು ವೈಜ್ಞಾನಿಕ ಪದ್ಧತಿಯನ್ನು ಅಳವಡಿಸಿಕೊಳ್ಳದೆ, ಕೇವಲ ಮಾರುಕಟ್ಟೆಯಲ್ಲಿ ಯಾವ ಉತ್ಪನ್ನಗಳಿಗೆ ಹೆಚ್ಚಿನ ಬೇಡಿಕೆ ಇರುವುದೋ ಅಂತಹ ಬೆಳೆಗಳನ್ನು ಬೆಳೆಯುತ್ತಾರೆ, ಅದಕ್ಕೆ ಬೇಕಾಗುವ, ಉಪಕರಣಗಳನ್ನು ಹೇಗೋ ಸಾಲ ಸೋಲ ಮಾಡಿ ಹೊಂದಿಸುತ್ತಾರೆ, ಹಾಗೆಯೇ ನೀರಿನ ಅವಶ್ಯಕತೆ ಎದುರಾದಾಗ ಕೊಳವೆಬಾವಿಗಳನ್ನು ಕೊರೆಸುತ್ತಾರೆ. ಕೊನೆಗೆ ಉತ್ಪನ್ನಗಳನ್ನು ಮಾರುಕಟ್ಟೆಗೆ ತಂದಂತಹ ಸಂದರ್ಭದಲ್ಲಿ ಬೆಲೆ ಇಳಿಮುಖವಾಗಿ ನಷ್ಟ ಅನುಭವಿಸುತ್ತಾರೆ. ಇಲ್ಲವೇ ಕೊಳವೆಬಾವಿಯಲ್ಲಿ ನೀರು ಬತ್ತಿ ಹೋಗಿ, ಬೆಳೆ ಒಣಗಿ ನಾಶವಾಗಿ, ಬೆಳೆ ಕೈಗೆ ಸಿಗದೆ, ಮಾಡಿದ ಸಾಲವನ್ನು ತೀರಿಸದೆ ಅನೇಕ ರೈತರು ನಷ್ಟ ಅನುಭವಿಸುತ್ತಾರೆ ಎನ್ನುವ ಅಂಶವನ್ನು ವಿವರಿಸಿದ್ದಾರೆ. ರೈತರು ಕೇವಲ ಲಾಭದ ಆಸೆಗೆ

ಬೆಳೆ ಗಳನ್ನು ಬೆಳೆಯದೆ ವೈಜ್ಞಾನಿಕವಾಗಿ ಕೃಷಿಯನ್ನು ಅಳವಡಿಸಿಕೊಂಡು ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುತ್ತಾ ತಾವು ಪ್ರಗತಿ ಹೊಂದಬೇಕು, ಎನ್ನುವುದರ ಜೊತೆಗೆ ಸರ್ಕಾರವು ರೈತರಿಗೆ ಅನುಕೂಲಕರ ಯೋಜನೆಗಳನ್ನು ಕಾಲಕಾಲಕ್ಕೆ ರೂಪಿಸಬೇಕು ಮತ್ತು ಯೋಜನೆಗಳ ಮಾಹಿತಿಯನ್ನು ರೈತರಿಗೆ ತಲುಪಿಸುವಲ್ಲಿ ಸರಿಯಾದ ಕ್ರಮವನ್ನು ತೆಗೆದುಕೊಳ್ಳಬೇಕು ಎನ್ನುವ ಅಂಶವನ್ನು ತಿಳಿಸಿದ್ದಾರೆ.

ಈ ಅಧ್ಯಯನದಲ್ಲಿ ಗುರುತಿಸಿರುವ ಮತ್ತೊಂದು ಅಂಶವೆಂದರೆ ಸರ್ಕಾರವು ರೂಪಿಸುವ ಯೋಜನೆಯು ಕೆಲವು ಸಲ ರೈತರಿಗೆ ಅನನುಕೂಲವುಂಟುಮಾಡುತ್ತದೆ. ಉದಾ: ಗಂಗಾ ಕಲ್ಯಾಣ ಯೋಜನೆ, ಕೇಂದ್ರ ಸರ್ಕಾರದ ಗುಟಕಾ ಮಾರಾಟ ನಿಷೇಧ, ಬೆಂಬಲ ಬೆಲೆಯ ವಿಚಾರ ಇತ್ಯಾದಿ. ಇದರಲ್ಲಿ ಗುಟಕಾ ಮಾರಾಟ ನಿಷೇಧದಿಂದ ಅಡಿಕೆ ಬೆಲೆ ಇಳಿಮುಖವಾಗಿದೆ. ಹಾಗೆಯೇ ಈಗಾಗಲೇ ಅಂತರ್ಜಲ ಕೊರತೆಯಿಂದ ಅಡಿಕೆ ತೋಟಗಳು ಒಣಗುತ್ತಿರುವುದು, ಒಂದು ಕಡೆಯಾದರೆ, ರೈತರು ಬೆಳೆದ ಬೆಳೆ ಮಾರಾಟವಾಗದೆ ಅಥವಾ ಕಡಿಮೆ ಬೆಲೆಯ ಕಾರಣ ಇಂದು ಅಡಿಕೆ ಬೆಳೆಗಾರರು ಬೀದಿಗೆ ಬರುವ ಪರಿಸ್ಥಿತಿ ಎದುರಾಗಿದೆ. ಇಂತಹ ಅನೇಕ ತೊಂದರೆಗಳು ಸರ್ಕಾರವು ರೂಪಿಸುವ ಯೋಜನೆಗಳಿಂದ, ಮುಂಚಿನಿಂದಲೂ ಇದೆ, ಆದರೆ ಸರ್ಕಾರವು ಕೇವಲ ಯೋಜನೆಯನ್ನು ರೂಪಿಸುತ್ತಿದೆಯೇ, ವಿನಹ ರೈತರಿಗೆ ಆಗುವ ಯೋಜನೆಗಳ ತೊಂದರೆಯನ್ನು ಗಣನಗೆ ತೆಗೆದುಕೊಂಡು ಯಾವುದೇ ಪರ್ಯಾಯ ವ್ಯವಸ್ಥೆಯನ್ನು ತೆಗೆದುಕೊಳ್ಳುತ್ತಿಲ್ಲ ಎನ್ನುವ ಮತ್ತೋಂದು ಮುಖ್ಯವಾದ ಅಂಶವನ್ನು ಲೇಖಕರು ತಿಳಿಸಿದ್ದಾರೆ.

ಅಗ್ರಿಕಲ್ಚರ್ ಮಾರ್ಕೆಟಿಂಗ್ ಆ್ಯಂಡ್ ಅಸೆಸ್ಸ್ ಟು ಟ್ರಾನ್ಸ್‌ಪೋರ್ಟ್ ಸರ್ವೀಸಸ್ ಬೈ ಜೆ.ಎಲ್. ಹೈನ್ ಆ್ಯಂಡ್ ಎಸ್.ಡಿ. ಇಲ್ಲೈಸ್ ಅಧ್ಯಯನವು ರಸ್ತೆ ಸಾರಿಗೆಯ ಕುರಿತಾಗಿ ಚರ್ಚಿಸುತ್ತಾ ಕೃಷಿ ಅಭಿವೃದ್ಧಿಗೆ ಸಾರಿಗೆಯ ಮಹತ್ವವನ್ನು ವಿಶ್ಲೇಷಿಸಲಾಗಿದೆ. ಆಹಾರ ಸಂರಕ್ಷಣೆ ಮತ್ತು ಹಳ್ಳಿಗಳ ಉದ್ಧಾರವು ಹೇಗೆ ರಸ್ತೆಯ ಅಭಿವೃದ್ಧಿಯ ಮೇಲೆ ಅವಲಂಬಿತವಾಗಿದೆ ಎಂಬುದನ್ನು ವಿಮರ್ಶಿಸಿದ್ದಾರೆ.[49] ಇದರಲ್ಲಿ ಪ್ರಮುಖವಾಗಿ ಮಾರುಕಟ್ಟೆಗಳನ್ನು ಗುರುತಿಸುವುದು ಅವುಗಳನ್ನು ಹೇಗೆ ಅಭಿವೃದ್ಧಿಪಡಿಸುವುದು ಮತ್ತು ಅವುಗಳಿಗೆ ಪೂರಕವಾಗಿ ರಸ್ತೆಗಳ ಪಾತ್ರ ಏನು ಎಂಬುದನ್ನು ಹೇಳುತ್ತಾ ಸಾರಿಗೆ ವೆಚ್ಚವು ಹೇಗೆ ಕೃಷಿ ಉತ್ಪನ್ನಗಳ ಮೇಲೆ, ಕೊಳ್ಳುವವರ ಮೇಲೆ ಪರೋಕ್ಷವಾಗಿ ಪರಿಣಾಮ ಬೀರುತ್ತವೆ ಎಂಬುದನ್ನು ವಿವರಿಸಲಾಗಿದೆ.

ಒಂದು ಒಳ್ಳೆಯ ಮಾರ್ಗವು ಕೃಷಿ ಮಾರುಕಟ್ಟೆಗೆ ತುಂಬಾ ಅವಶ್ಯಕ. ಅದರಿಂದ ಕೃಷಿ ಚಟುವಟಿಕೆಗಳು ಅಭಿವೃದ್ಧಿ ಹೊಂದುತ್ತವೆ. ರಸ್ತೆ ಸೇವೆ ಸೌಲಭ್ಯಗಳು ಸರಿಯಾಗಿ ಇಲ್ಲದಿದ್ದ ಪಕ್ಷದಲ್ಲಿ ಅಥವಾ ಸಾಗಣೆಗೆ ಅನುಕೂಲಕರವಲ್ಲದ ಮಾರ್ಗಗಳಿದ್ದರೆ ಅದರಿಂದ ರೈತರಿಗೆ

ತಾವು ಬೆಳೆದ ಬೆಳೆಗಳನ್ನು ಸರಿಯಾದ ವೇಳೆಗೆ ಮಾರುಕಟ್ಟೆಗೆ ತಲುಪಿಸಲು ಸಾಧ್ಯವಾಗದೆ ಅನೇಕ ಸಲ ಬೆಳೆದ ಸರಕು ಹಾಳಾಗಿ ನಷ್ಟವನ್ನು ಅನುಭವಿಸುವಂತಾಗುತ್ತದೆ. ಉದಾಹರಣೆಗೆ ಹಾಲು ಹಣ್ಣು ಮತ್ತು ತರಕಾರಿಗಳು. ಸರಿಯಾದ ರಸ್ತೆಗಳೊಂದಿಗೆ ಶೀಥಲೀಕರಣ ಘಟಕಗಳೂ ಇರಬೇಕಾಗುತ್ತದೆ. ಇಲ್ಲವೆಂದಲ್ಲಿ ರೈತರು ಹಾಳಾದ ಪದಾರ್ಥಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಬೇಕಾಗುವ ಸಂಭವ ಬರುತ್ತದೆ. ಕೃಷಿ ಉತ್ಪನ್ನಗಳಿಗೆ ಅನುಗುಣವಾಗಿ ಸಾರಿಗೆ ವೆಚ್ಚವು ಉತ್ಪನ್ನಗಳಿಗೆ ತಗುಲುತ್ತದೆ. ಉದಾಹರಣೆಗೆ ಉತ್ಪನ್ನಗಳ ವಿಧಗಳು ಅವುಗಳ ಗುಣಮಟ್ಟ ಮತ್ತು ಮಾರುಕಟ್ಟೆಗಳ ವಿಭಾಗಗಳು ಮತ್ತು ಅವುಗಳು ತಲುಪಿಸುವ ದೂರಗಳಿಗೆ ಅನುಗುಣವಾಗಿ ರೈತರು ವೆಚ್ಚವನ್ನು ಭರಿಸಬೇಕಾಗುತ್ತದೆ.

ಸಪ್ಲೈ ಚೈನ್ ಮ್ಯಾನೇಜ್‌ಮೆಂಟ್ ಇನ್ ವೆಜಿಟೆಬಲ್ಸ್ ಮಾರ್ಕೆಟ್: ಎ ಕಂಪ್ಯಾರಿಟಿವ್ ಅನಾಲಿಸಸ್ ಬೈ ಶಿಲ್ಪ ಕೆ.(2005) ಅವರ ಅಧ್ಯಯನದಲ್ಲಿ ಸಂಶೋಧಕರು, ಪೂರೈಕೆಯ ಕೊಂಡಿಯ ನಿರ್ಣಯ ಕುರಿತಾಗಿ, ತರಕಾರಿ ಮಾರುಕಟ್ಟೆಗೆ ಸಂಬಂಧಿಸಿದಂತೆ ಒಂದು ತೌಲನಿಕ ಅಧ್ಯಯನವನ್ನು ಮಾಡಿದ್ದಾರೆ.[50] ಪೂರೈಕೆಯ ನಿರ್ಣಯಗಳು ಮಾರುಕಟ್ಟೆಯ ಮೇಲೆ ಪೂರೈಕೆದಾರರ ಮತ್ತು ಗ್ರಾಹಕರಿಗೆ ಹೇಗೆ ಅನೂಕೂಲಕರವಾಗಲಿವೆ ಎನ್ನುವ ಅಂಶವನ್ನು ತಿಳಿಸಿದ್ದಾರೆ. ಪೂರೈಕೆಯ ಕೊಂಡಿಯ ನಿರ್ಣಯದ ವ್ಯವಸ್ಥೆಯೂ ಯೋಜನೆ ಅನುಷ್ಠಾನ ಮತ್ತು ಹಿಡಿತಗಳನ್ನು ಹೇಗೆ ಒಂದು ಕಾರ್ಯದ ಮೇಲೆ ಪ್ರಯೋಗಿಸಬಹುದು ಮತ್ತು ಅದರಲ್ಲೂ ತರಕಾರಿ ಮಾರುಕಟ್ಟೆಯಲ್ಲಿ ಸರಿಯಾದ ಪೂರೈಕೆಯ ಕೊಂಡಿಯನ್ನು ಅಳವಡಿಸುವುದರಿಂದ ಉತ್ಪಾದಕರಿಗೂ ಮತ್ತು ಗ್ರಾಹಕರಿಗೂ ತುಂಬಾ ಅನುಕೂಲವಾಗುತ್ತದೆ ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ.

ಪೂರೈಕೆಯ ವ್ಯವಸ್ಥೆಯಿಂದ ಉತ್ಪನ್ನಗಳ ಶೇಖರಣೆಯ ಪ್ರಮಾಣ, ಉತ್ಪನ್ನಗಳ ಹಾಳಾಗುವಿಕೆಯ ಪ್ರಮಾಣ ಮತ್ತು ಉತ್ಪನ್ನಗಳ ಸಮರ್ಪಕ ಬಳಕೆ ಸಾಧ್ಯವಾಗುತ್ತದೆ. ಹಾಗೆಯೇ ಸಂಶೋಧಕರು ಆಧುನಿಕ ಪೂರೈಕೆ ನಿರ್ಣಯಗಳನ್ನು ಹೇಳುತ್ತಾ, ಆಧುನಿಕ ಪೂರೈಕೆ ಕೊಂಡಿಯು, ಉತ್ಪನ್ನಗಳಿಗೆ ಬ್ರ್ಯಾಂಡ್ ಹೆಸರನ್ನು ಕೊಡುವುದು, ಮತ್ತು ಉತ್ಪನ್ನಗಳಿಗೆ ಸರಿಯಾದ ಬೆಲೆಯನ್ನು ನಿಗದಿ ಮಾಡುವುದಕ್ಕೂ ಅನುಕೂಲವಾಗಿದೆ ಎಂದು ಹೇಳುತ್ತಾ, ಸಂಶೋಧಕರು ಅಧ್ಯಯನಕ್ಕೆ ಬೆಂಗಳೂರಿನ ತರಕಾರಿ ಮಾರುಕಟ್ಟೆಯನ್ನು ಆಯ್ದುಕೊಳ್ಳಲಾಗಿದೆ. ಬೆಂಗಳೂರನ್ನು ಅಧ್ಯಯನದ ಕ್ಷೇತ್ರವಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಅದಕ್ಕೆ ಕಾರಣವನ್ನು ಹೇಳುತ್ತಾ ಬೆಂಗಳೂರು ವೇಗವಾಗಿ ಬೆಳೆಯುವ ನಗರ, ಬೆಂಗಳೂರು ನಗರದಲ್ಲಿ ಎಲ್ಲ ತರಹದ ಉತ್ಪನ್ನಗಳಿಗೂ ಹೆಚ್ಚಿನ ಬೇಡಿಕೆ ಇದ್ದು, ಅದರಲ್ಲೂ ಐ.ಟಿ, ಬಿ.ಟಿ ಕಂಪನಿಗಳಿಂದ, ವಿವಿಧ ರೀತಿಯ ವಸ್ತುಗಳಿಗೆ ಬೇಡಿಕೆ

ಹೆಚ್ಚಾಗಿದೆ. ಹಾಗೆಯೇ ದಿನನಿತ್ಯದ ವಸ್ತುಗಳ ಬೇಡಿಕೆಯೂ ಹೆಚ್ಚಿದೆ. ಹಾಗಾಗಿ ಅದರಲ್ಲಿ ಅಧ್ಯಯನಕ್ಕೆ ತರಕಾರಿಬೆಳೆಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ತರಕಾರಿ ಬೆಳೆಯು ತೋಟಗಾರಿಕೆ ಬೆಳೆಯಾಗಿದ್ದು, ತರಕಾರಿ ಬೆಳೆಗಳ ಪೂರೈಕೆಯೂ ನಿರ್ಣಯವು ತುಂಬಾ ಮುಖ್ಯವಾಗಿದೆ. ಸರಿಯಾದ ಪೂರೈಕೆಯ ಕೊಂಡಿಯ ನಿರ್ಣಯದಿಂದ ರೈತರು ಬೆಳೆದ ಉತ್ಪನ್ನಗಳ ಶೇಖರಣೆ, ಬೆಳೆಗಳ ಬೆಲೆ ನಿಗದಿ, ಬೆಳೆಗಳ ಹಾಳಾಗುವಿಕೆಯನ್ನು ತಡೆಯಬಹುದು. ಅಲ್ಲದೆ ಪೂರೈಕೆಯಲ್ಲಿ ಉಂಟಾಗುವ ತೊಂದರೆಗಳು ಕಡಿಮೆಯಾಗುತ್ತವೆ. ಸಂಶೋಧಕರು ತರಕಾರಿ ಬೆಳೆಗಳಲ್ಲಿ, ಟೊಮೋಟೊ, ಕ್ಯಾಪ್ಸಿಕಮ್, ಕ್ಯಾರೆಟ್, ಹೂಕೋಸುಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. 45 ರೈತರನ್ನು, 4 ವರ್ತಕರನ್ನು, 65 ಗ್ರಾಹಕರನ್ನು ಸ್ಯಾಂಪಲ್ಲಾಗಿ ತೆಗೆದುಕೊಂಡಿದ್ದಾರೆ.

ಸಂಶೋಧಕರು ಅಧ್ಯಯನದಲ್ಲಿ ಕೇವಲ ಆಧುನಿಕ ಪೂರೈಕೆಯ ವ್ಯವಸ್ಥೆಯನ್ನು ಮತ್ತು ಹಳೆಯಕಾಲದ ಪೂರೈಕೆಯ ವ್ಯವಸ್ಥೆಯನ್ನು ಹೋಲಿಕೆ ಮಾಡಿರುತ್ತಾರೆಯೇ ಹೊರತು, ಎಲ್ಲಿಯೂ ರೈತರು ಮಾರುಕಟ್ಟೆಯಲ್ಲಿ ಎದುರಿಸುತ್ತಿರುವ ತೊಂದರೆಗಳಾನ್ನಾಗಲಿ, ರೈತರು ಆಧುನಿಕ ಮಾರುಕಟ್ಟೆಯಲ್ಲಿ ಅನಿಭವಿಸುತ್ತಿರುವ ನಷ್ಟವನ್ನಾಗಲಿ ವಿಶ್ಲೇಷಿಸಿಲ್ಲ ಹಾಗೆಯೇ ಎಲ್ಲಿಯೂ ತೋಟಗಾರಿಕೆ ಬೆಳೆಗಳಡಿಯಲ್ಲಿ ಅಧ್ಯಯನವನ್ನು ಕೈಗೊಂಡಿರುವುದಿಲ್ಲಾ.

ಅರುಣಾ ಸಿಂಗ್, ಪಿ.ಎ.ಲಕ್ಷ್ಮಿಪ್ರಸನ್ನನ್ ರಮೇಶ್ ಚಂದ್ 'ಫಾರಂ ಸೈಜ್ ಅಂಡ್ ಪ್ರೊಡಕ್ಟಿವಿಟಿ ಅಂಡರ್‌ಸ್ಟ್ಯಾಡಿಂಗ್ ದಿ ಸ್ಟ್ರೆಂಥ್ ಆಫ್ ಸ್ಮಾಲ್ ಹೋಲ್ಡರ್ ಆ್ಯಂಡ್ ಇಂಪ್ರೂವಿಂಗ್ ದೇರ್ ಲೌವಲಿ ಹುಡ್ ಜೂನ್(2011) ಅಧ್ಯಯನದಲ್ಲಿ 1960 ಮತ್ತು 1970ರ ದಶಕದಲ್ಲಿ ಭಾರತದಲ್ಲಿ ರೈತರ ಕೃಷಿ ಹಿಡುವಳಿಗಳ ಮೇಲೆ ಅನೇಕ ಚರ್ಚೆಗಳು ನಡೆಯುತ್ತಿದ್ದವು. ಸಣ್ಣ ಹಿಡುವಳಿದಾರರು ಉನ್ನತ ತಂತ್ರಜ್ಞಾನ, ಆಧುನಿಕರಣಗಳ ಬಳಕೆಯನ್ನು ಅಳವಡಿಸಿಕೊಳ್ಳಲಾಗದೆ, ಹೆಚ್ಚಿನ ಉತ್ಪನ್ನಗಳನ್ನು ಬೆಳೆಯಲು ಸಾಧ್ಯವಾಗುತ್ತಿಲ್ಲ.[51] 21ನೇ ಶತಮಾನದ ರಾಷ್ಟ್ರೀಯ ಮಾದರಿ ಸಮೀಕ್ಷೆಯ ಮಾಹಿತಿ ಪ್ರಕಾರ, ಸಣ್ಣ ಹಿಡುವಳಿದಾರರು ಹೆಚ್ಚಿನ ಉತ್ಪಾದನೆಯನ್ನು ತೋರುತ್ತಿದ್ದರು. ಅವರ ತಲಾ ಆದಾಯಯೂ ಹೆಚ್ಚಾಗಿರುವುದಿಲ್ಲ, ರೈತರ ಬಡತನದ ಮಟ್ಟವೂ ಕಡಿಮೆ ಯಾಗಿರುವುದಿಲ್ಲ. ಭಾರತದಲ್ಲಿ ರೈತರ ಕೃಷಿ ಭೂಮಿಯ ಹಂಚಿಕೆಯಲ್ಲಿ ಭಾರಿ ಅಸಮಾನತೆಯನ್ನು ಹೊಂದಿದೆ ಹಾಗೂ ಕೃಷಿನಿರತ ರೈತರು ಕೃಷಿಯಲ್ಲಿ ಸರಿಯಾದ ಆದಾಯವಿಲ್ಲದೆ, ಅನುಕೂಲಗಳಿಲ್ಲದೆ ಕೆಲಸ ಅರಸಿ ಪಟ್ಟಣಗಳಿಗೆ ವಲಸೆ ಹೋಗುವುದು ಹೆಚ್ಚಾಗಿದೆ. ಇಂದಿಗೂ ಗ್ರಾಮೀಣ ಭಾಗದಲ್ಲಿ ವಲಸೆಯನ್ನು ತಡೆಯಲು ಯಾವುದೇ ರೀತಿಯ ಹೊಸ ತಂತ್ರಗಳನ್ನು ರೂಪಿಸಿರುವುದಿಲ್ಲ ಎನ್ನುವ ಅಂಶಗಳನ್ನು ಲೇಖಕರು ಚರ್ಚಿಸಿದ್ದಾರೆ.

ಎ.ಎಸ್ ಬುಲ್ಲಾರ್ ಅರ್.ಎಸ್.ಸಿಂಧು(2011) ಫಾರ್ಮರ್ ಸೂಯಿಸೈಡ್ ಇನ್ ಪಂಜಾಬ್: ಎ ಸೆನ್ಸಸ್ ಸರ್ವೇ ಆಫ್ ದಿ ಮೋಸ್ಟ್ ಎಫೆಕ್ಟಡ್ ಡಿಸ್ಟ್ರಿಕ್ಟ್; ಭಾರತದಲ್ಲಿ ಜನಗಣತಿಯ ಸಮೀಕ್ಷೆಯ ಆಧಾರದ ಮೇಲೆ ಪಂಜಾಬ್, ಭಟಿಂಡ ಮತ್ತು ಸಂಗ್ರೂರ್‌ನಲ್ಲಿ ಅತಿ ಹೆಚ್ಚು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.[52] ರೈತರ ಆತ್ಮಹತ್ಯಗಳ ಕಾರಣಗಳನ್ನು ನೋಡಿದರೆ, ರೈತರ ಆತ್ಮಹತ್ಯೆಗೆ ಆರ್ಥಿಕ ಕಾರಣ ಮತ್ತು ಸಾಮಾಜಿಕ ಸಂಘರ್ಷ, ಸಾಂಸ್ಕೃತಿಕವಾಗಿ ಹಿಂದುಳಿದಿರುವುದು ಹಾಗೂ ಮೂರನೆಯದಾಗಿ ರಾಜ್ಯದ ಬೆಂಬಲ ಕೊರತೆಗಳು ಎಂದು ಲೇಖಕರು ವಿವರಿಸಿದ್ದಾರೆ.

ಶ್ರೀ ಕೃಷ್ಣ. ವಾಟರ್ ಹಾರ್ವೆಸ್ಟಿಂಗ್ ಟ್ರೆಡಿಶಯನ್ಸ್ ಆ್ಯಂಡ್ ದಿ ಸೋಶಿಯಲ್ ಮೈಲ್ವೀ ಇನ್ ಇಂಡಿಯಾ: ಎ ಸೆಂಕೆಡ್ ಲುಕ್ ಇಂಟರ್ ನ್ಯಾಷನಲ್ ಜರ್ನಲ್ ಆಫ್ ಮ್ಯಾನೇಜ್ಮೆಂಟ್ ಆ್ಯಂಡ್ ಸೋಶಿಯಲ್ ಸೈನ್ಸಸ್ ರಿಸರ್ಚ್(ijmssr) 8th ಆಗಸ್ಟ್ 2013 ರೂರಲ್ ಮಾರ್ಕೆಟಿಂಗ್ ಇನ್ ಇಂಡಿಯಾ ಚಾಲೆಂಜ್ಸ್ ಆ್ಯಂಡ್ ಆಪರ್ಚುನಿಟೀಸ್ ಈ ಪ್ರಸ್ತುತ ಲೇಖನದಲ್ಲಿ ಸಂಶೋಧಕರು ಗ್ರಾಮೀಣ ಮಾರುಕಟ್ಟೆಯಲ್ಲಿ ಹೇರಳವಾಗಿ ಮಾರಾಟಕ್ಕೆ ಅವಕಾಶಗಳಿರುವ ಕುರಿತು ಮತ್ತು ಗ್ರಾಮೀಣ ಮಾರುಕಟ್ಟೆಯು ಅದರದೇ ಆದ ಕೆಲವು ಕಠಿಣ ಸವಾಲುಗಳನ್ನು ಹೊಂದಿದೆ ಎಂಬುದನ್ನು ವಿಶ್ಲೇಷಿಸಿದ್ದಾರೆ.[53] ಗ್ರಾಮೀಣ ಮಾರುಕಟ್ಟೆಯಲ್ಲಿ 68.84% ರಷ್ಟು ಜನರು, 638000 ಸಾವಿರ ಹಳ್ಳಿಗಳಲ್ಲಿ ವಾಸ ಮಾಡಿತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಜನರ ಬೇಡಿಕೆಗಳು ಹೆಚ್ಚಾಗುತ್ತಿವೆ ಎಂಬುದನ್ನು ತಿಳಿಸಿದ್ದಾರೆ. ಹಸಿರುಕ್ರಾಂತಿಯ ನಂತರ, ಗ್ರಾಮೀಣ ಮಾರುಕಟ್ಟೆಯಲ್ಲಿ ಕೈಗಾರಿಕಾ ಉತ್ಪನ್ನಗಳಿಗೆ ಮತ್ತು manufacturing ಉತ್ಪನ್ನಗಳಿಗೆ ಹೆಚ್ಚಿನ ಬೇಡಿಕೆ ಇದೆ ಎಂಬುದನ್ನು ತಿಳಿಸುತ್ತಾ, ಇತ್ತೀಚಿನ ದಿನಮಾನಗಳಲ್ಲಿ ಗಾಮೀಣ ಜನತೆಯೂ ಅಕ್ಷರಸ್ಥರಾಗುತ್ತಿರುವುದರಿಂದ ಅವರ ಬೇಡಿಕೆಗಳು ಬದಲಾಗುತ್ತಿವೆ. ಹಾಗಾಗಿ ಮಾರಾಟಗಾರರು ಉತ್ತಮ(marketing strategy) ಮಾರುಕಟ್ಟೆಯ ಯೋಜನೆಗಳನ್ನು ರೂಪಿಸಬೇಕಾಗುತ್ತದೆ ಎನ್ನುವ ಸವಾಲಿನ ಅಂಶವನ್ನು ವಿಶ್ಲೇಷಿಸಿದ್ದಾರೆ. ಸಂಶೋಧಕರ ಪ್ರಕಾರ 1980ರಿಂದಲೂ ಗ್ರಾಮೀಣ ಮಾರುಕಟ್ಟೆಯನ್ನು ಸೆಳೆಯಲು ಮಾರಾಟಗಾರರು ಪ್ರಯತ್ನಿಸುತ್ತಿದ್ದಾರೆ. ಹಾಗೆಯೇ ಭಾರತದಲ್ಲಿ ಶೇ.70% ಜನರು ಗ್ರಾಮೀಣ ಭಾಗದಲ್ಲಿದ್ದು, 2013ರಲ್ಲಿ Agri-produce price and MNREGA ಅಡಿಯಲ್ಲಿ ಬಜೆಟ್‌ನಲ್ಲಿ ಗ್ರಾಮೀಣ ಭಾಗಕ್ಕೆ ಹೆಚ್ಚಿನ ಅನುದಾನವನ್ನು ಕಾಯ್ದಿರಿಸಿದ್ದಾರೆ, ಇದರಿಂದಲೂ ಗ್ರಾಮೀಣ ಜನರ ಕೊಳ್ಳುವ ಸಾಮರ್ಥ್ಯ ಹೆಚ್ಚಾಗಿದ್ದು, ಅವರ ಕೊಳ್ಳುವಿಕೆಯ ಒಲವೂ ಕೂಡ ಬ್ರ್ಯಾಂಡ್ ವಸ್ತುಗಳ ಕಡೆ ವಾಲಿದೆ. National Council for Applied Economic Research (NCAER) ಪ್ರಕಾರ ಗ್ರಾಮೀಣ ಎಂದರೆ, ಎಲ್ಲಿ

5000ಕ್ಕಿಂತ ಕಡಿಮೆ ಜನತೆಯು ಇರುವುದೋ, ಹಾಗೆಯೇ ಶೇ. 75%ರಷ್ಟು ಗಂಡಸರು ಕೃಷಿ ಕೆಲಸದಲ್ಲಿ ತೊಡಗಿಕೊಳ್ಳುವಿರೋ ಅದಕ್ಕೆ ಗ್ರಾಮೀಣ ಭಾಗ ಎಂದು ಕರೆಯುವರು.

ಈ ಅಧ್ಯಯನದಲ್ಲಿ ಸಂಶೋಧಕರು ಗ್ರಾಮೀಣ ಮಾರುಕಟ್ಟೆಯನ್ನು ಹೇಗೆ ದೊಡ್ಡ ದೊಡ್ಡ ಕಂಪನಿಗಳು ತಮ್ಮ ಬಂಡವಾಳ ಹೂಡಿಕೆಗೆ ಜಾಗ ಕಲ್ಪಿಸಿಕೊಂಡಿವೆ ಮತ್ತು ಗ್ರಾಮೀಣ ಭಾಗದ ಜನರನ್ನು ಯಾವ ರೀತಿ ಸೇಳೆಯಬೇಕೆನ್ನುವ ಅಂಶಗಳಿಗೆ ಹೆಚ್ಚು ಮಹತ್ವವನ್ನು ನೀಡಿದ್ದಾರೆ ವಿನಾ ಸಂಶೋಧಕರು ಎಲ್ಲಿಯೂ ಗ್ರಾಮೀಣ ಭಾಗದ ರೈತರು ಮತ್ತು ಅವರು ಮಾರುಕಟ್ಟೆಯಲ್ಲಿ ಎದುರಿಸುತ್ತಿರುವ ಸಮಸ್ಯೆಯನ್ನು ಹೆಚ್ಚಾಗಿ ತಿಳಿಸಿಲ್ಲ. ಹಣ್ಣುಗಳ ಉತ್ಪಾದನೆಯಲ್ಲಿ ಭಾರತಕ್ಕೆ 2ನೇ ಸ್ಥಾನ: ವರದಿಯೂ ಪ್ರಜಾವಾಣಿ ದಿನಪತ್ರಿಕೆಯಲ್ಲಿ, ದಿನಾಂಕ 26/01/2015ರಂದು TNN ಹೊಸದಿಲ್ಲಿಯ ವರದಿಯನ್ನು ಆಧರಿಸಿ ಪತ್ರಿಕೆಯಲ್ಲಿ ಬಿತ್ತರಿಸಿದೆ.[54] ಈ ವರದಿಯ ಪ್ರಕಾರ ಭಾರತವು ತೋಟಗಾರಿಕೆ ಉತ್ಪಾದನೆಯಲ್ಲಿ ಎರಡನೇ ಸ್ಥಾನವನ್ನು ಹೊಂದಿದ್ದು, ಚೀನಾವೂ ಮೊದಲನೇ ಸ್ಥಾನದಲ್ಲಿದೆ. 70ರ ದಶಕದಲ್ಲಿ ಹಸಿರುಕ್ರಾಂತಿಯ ಮೂಲಕ ಜಗತ್ತಿನ ಕಣ್ಣನ್ನು ತನ್ನತ್ತ ತಿರುಗುವಂತೆ ಮಾಡಿದ್ದ ಭಾರತ ಕೃಷಿ ಕ್ಷೇತ್ರದಲ್ಲಿ ಮತ್ತೊಂದು ಸಾಧನೆಯನ್ನು ಮಾಡಿದೆ. ದೇಶದಲ್ಲಿ ತೋಟಗಾರಿಕೆ ಉತ್ಪನ್ನಗಳ ಉತ್ಪಾದನೆಯೂ ಗಣನೀಯವಾಗಿ ಹೆಚ್ಚುದ್ದು, ಹಣ್ಣುಗಳ ಉತ್ಪಾದನೆಯಲ್ಲಿ ಎರಡನೆಯ ಸ್ಥಾನವನ್ನು ಪಡೆದಿದೆ. 2015ರ ಕೃಷಿ ಸಚಿವಾಲಯದ ಪ್ರಕಾರ ಹಣ್ಣುಗಳ ಪೈಕಿ ದ್ರಾಕ್ಷಿಗೆ ಅಗ್ರ ಸ್ಥಾನವಿದ್ದು, 1086 ಕೋಟಿ ರೂ. ಮೌಲ್ಯದ 107.3 ಸಾವಿರ ಟನ್ ದ್ರಾಕ್ಷಿ ರಫ್ತು ಮಾಡಿದೆ. ಬಾಳೆ ಹಣ್ಣು ಮತ್ತು ಮಾವಿನ ಹಣ್ಣುಗಳು ಎರಡನೇ ಸ್ಥಾನದಲ್ಲಿವೆ. ಹಾಗೆಯೇ ಹಣ್ಣುಗಳ ಉತ್ಪಾದನೆಯಲ್ಲಿ ಪೈಪೋಟಿಯಲ್ಲಿ ಮುಂದಿರುವ ರಾಷ್ಟ್ರಗಳು ಚೀನಾ, ಅಮೆರಿಕ, ಬ್ರೆಜಿಲ್, ಸ್ಪೇನ್, ಮೆಕ್ಸಿಕೊ, ಇಟಲಿ, ಇಂಡೋನೇಷ್ಯಾ, ಫಿಲಿಪ್ಪೀನ್ಸ್ ಮತ್ತು ಟರ್ಕಿ ದೇಶಗಳು ಸ್ಥಾನವನ್ನು ಪಡೆದಿವೆ. ಹಾಗೆಯೇ ಈ ಅಧ್ಯಯನದಲ್ಲಿ ಸಂಶೋಧಕರು ಭಾರತದಲ್ಲಿ ತೋಟಗಾರಿಕೆಯ ಯಶೋಗಾಥೆಗೆ ಸಣ್ಣ ಪಟ್ಟಣಗಳು ಮತ್ತು ಜಿಲ್ಲೆಗಳ ಕೊಡುಗೆ ಮಹತ್ವವಾದದ್ದು, ಅದರಲ್ಲೂ ಆಂಧ್ರದ ಚಿತ್ತೂರು ಮತ್ತು ಅನಂತಪುರ, ಜಮ್ಮು ಕಾಶ್ಮೀರದ ಬಾರಾಮುಲ್ಲಾ, ತೆಲಂಗಾಣದ ನಲಗೊಂಡ, ಮಧ್ಯಪ್ರದೇಶದ ಸಾಗರ್ ಮತ್ತು ಶಹದೋಲ್, ಮಹಾರಾಷ್ಟ್ರದ ಪುಣೆ, ಔರಂಗಾಬಾದ್, ಜಲ್‌ಂಗಾವ್ ಮತ್ತು ಸಾಂಗ್ಲಿ, ಪಶ್ಚಿಮ ಬಂಗಾಳದ ಡಾರ್ಜಿಲಿಂಗ್‌ನ ಪ್ರದೇಶಗಳು 2012–2013ರಲ್ಲಿ ಭಾರತದ ಹಣ್ಣು ಉತ್ಪಾದನೆಯಲ್ಲಿ ಭೂಪಟದಲ್ಲಿ ರಾರಾಜಿಸಿದ್ದವು ಎಂದಿ ತಿಳಿಸಿದ್ದಾರೆ. ಅಲ್ಲದೆ ಹಣ್ಣು ಮತ್ತು ತರಕಾರಿ ಉತ್ಪಾದನೆಯಲ್ಲಿ ಕರ್ನಾಟಕವು 6ನೇ ಸ್ಥಾನದಲ್ಲಿದೆ, ಮಹಾರಾಷ್ಟ್ರವು ಅಗ್ರಸ್ಥಾನದಲ್ಲಿದೆ, ಆಂಧ್ರಪ್ರದೇಶವು 2ನೇ ಸ್ಥಾನದಲ್ಲಿದೆ, ಗುಜರಾತ್ 3ನೇ, ತಮಿಳುನಾಡು 4ನೇ ಮತ್ತು ಉತ್ತರ ಪ್ರದೇಶವು 5ನೆಯ ಸ್ಥಾನದಲ್ಲಿವೆ.

ಒಟ್ಟಾರೆ 2001–02ರಿಂದ 2014–15ರಲ್ಲಿ ಭಾರತದಲ್ಲಿ, ತೋಟಗಾರಿಕೆ ಬೆಳೆಗಳ ಉತ್ಪಾದನಾ ಕ್ಷೇತ್ರವೂ 16.5 ದಶಲಕ್ಷ ಹೆಕ್ಟೇರ್‌ನಿಂದ 23.4 ದಶಲಕ್ಷಕ್ಕೆ ಏರಿಕೆಯಾಗಿದ್ದು, ಉತ್ಪಾದನೆಯಲ್ಲಿ 145.8 ಮೆ.ಟನ್‌ನಿಂದ 283.5 ಮೆ.ಟನ್‌ಗೆ ಏರಿಕೆಯಾಗಿದೆ. ಜೊತೆಗೆ ಈ ವರದಿಯಲ್ಲಿ ತೋಟಗಾರಿಕೆ ಬೆಳೆಗಳೆಂದರೆ, ಹಣ್ಣು, ತರಕಾರಿ, ಹೂವು ಮತ್ತು ಮಸಾಲೆ ಉತ್ಪನ್ನಗಳಿದ್ದು, ಹಣ್ಣುಗಳ ಉತ್ಪಾದನೆಯಲ್ಲಿ ಅಗ್ರಸ್ಥಾನದಲ್ಲಿರುವ ಜಿಲ್ಲೆಗಳು ಮತ್ತು ಮೊದಲ 5 ರಾಜ್ಯಗಳು ಈ ಕೆಳಗಿನಂತಿವೆ. ಕ್ರಮವಾಗಿ ಹಣ್ಣುಗಳಾದ ಮಾವು, ಸೇಬು, ಬಾಳೆ, ನಿಂಬೆ ಮತ್ತು ಕಿತ್ತಳೆ ಹಾಗೂ 5ನೇ ಸ್ಥಾನದಲ್ಲಿ ಸೀಬೆ ಇದ್ದರೆ ಕ್ರಮವಾಗಿ ಜಿಲ್ಲೆಗಳು ಚಿತ್ತೂರು(ಎ.ಪಿ), ಬಾರಾಮುಲ್ಲಾ(ಜ.ಕಾ), ಜಲಂಗಾವ್(ಮ.ರಾ), ನಲ್ಗೊಂಡ(ತೆಲಂಗಾಣ) ಮತ್ತು ಸಾಗರ್ (ಮ.ಪ್ರ).

ಈ ವರದಿಯು ನನ್ನ ಅಧ್ಯಯನಕ್ಕೆ ಪೂರಕವಾಗಿದೆ. ಏಕೆಂದರೆ ಈ ಅಧ್ಯಯನವು ತೋಟಗಾರಿಕೆ ಕೃಷಿನೀತಿ ನಿಯಮಗಳನ್ನು ಪರಿಶೀಲಿಸುವುದು ಮತ್ತು ತೋಟಗಾರಿಕೆ ಯೋಜನೆ ಗಳಿಂದ ರೈತರು ಪ್ರಯೋಜನ ಪಡೆದಿದ್ದಾರೆಯೇ ಎನ್ನುವುದಾಗಿದೆ. ಈ ವರದಿಯ ಪ್ರಕಾರ ಭಾರತವು ಹಣ್ಣುಗಳ ಬೆಳೆಗಳಲ್ಲಿ 2ನೇ ಸ್ಥಾನದಲ್ಲಿದ್ದು, ಕರ್ನಾಟಕವು 6ನೇ ಸ್ಥಾನದಲ್ಲಿದೆ. ಅಂದರೆ ತೋಟಗಾರಿಕೆ ಬೆಳೆಗಳ ಕುರಿತು ರೈತರು ಉತ್ಸುಕರಾಗಿದ್ದಾರೆ ಎನ್ನುವ ಅಂಶವು ಮೇಲ್ನೋಟಕ್ಕೆ ತಿಳಿಯುತ್ತದೆ ಹಾಗಾಗಿ ಪ್ರಸ್ತುತವಿರುವ ತೋಟಗಾರಿಕೆ ಯೋಜನೆಗಳು ರೈತರಿಗೆ ಎಷ್ಟರ ಮಟ್ಟಿಗೆ ಅನುಕೂಲಕರ ವಾಗಿವೆ ಮತ್ತು ಯಾವ ರೀತಿಯ ಹೊಸ ತೋಟಗಾರಿಕೆ ಯೋಜನೆಗಳನ್ನು ರೈತರು ನೀರಿಕ್ಷಿಸುತ್ತಿದ್ದಾರೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲು, ಮತ್ತು ಅಧ್ಯಯನವನ್ನು ಮಾಡಲು ತುಂಬಾ ಕುತೂಹಲವನ್ನು ಹುಟ್ಟುಹಾಕಿದೆ.

ಪ್ರಜಾವಾಣಿ(23–07–2016)ಕೆಮ್ಮಣ್ಣುಗುಂಡಿ ಹಸಿರುಕ್ರಾಂತಿ ಅಧ್ಯಯನವು ಕೃಷಿಯನ್ನು ಹೇಗೆ ಲಾಭದಾಯಕವಾಗಿ ಮಾಡಬಹುದು ಮತ್ತು ದೇಶದಲ್ಲಿ ಹೆಚ್ಚುತ್ತಿರುವ[55] ರೈತರ ಆತ್ಮಹತ್ಯೆಯನ್ನು ಹೇಗೆ ತಪ್ಪಿಸಬಹುದು ಎನ್ನುವ ಸಂಗತಿಯನ್ನು ವರದಿಗಾರರು ಉದ್ಯಮ ವಿವೇಕರಾಜ್ ಅವರ ಸಂದರ್ಶನದ ವಿವರದಲ್ಲಿ ತಿಳಿಸಿದ್ದಾರೆ. ಮೂಲತಃ ಮೈನಿಂಗ್ ಉದ್ಯಮಿಯಾಗಿರುವ ಇವರು ರಾಜ್ಯದಲ್ಲಿ ಹೆಚ್ಚುತ್ತಿರುವ ರೈತರ ಆತ್ಮಹತ್ಯೆಗಳ ಸಂಖ್ಯೆ ಮತ್ತು ರೈತರ ಕೃಷಿಯಲ್ಲಿ ಆಸಕ್ತಿ ಕಳೆದು ಕೊಳ್ಳುತ್ತಿರುವುದನ್ನು ಹೇಗಾದರೂ ಮಾಡಿ ತಪ್ಪಿಸಬೇಕು ಎಂದು, ಪನಾಮ್ ನೇಚರ್ ಪ್ರೈಶ್‌ವೇಟ್ ಲಿಮಿಟೆಡ್ ಹುಟ್ಟುಹಾಕಿದ್ದಾರೆ. ಈ ಸಂಸ್ಥೆಯ ಮೂಲಕ ರೈತರಲ್ಲಿ ಧೈರ್ಯ ತುಂಬಿ, ಕೃಷಿಯನ್ನು ಲಾಭದಾಯಕವಾಗಿಸಿ, ಕೃಷಿಗೆ ಕಾರ್ಪೋರೇಟ್ ಟಚ್ ನೀಡಿ ಕೃಷಿಯತ್ತ ಇಂದಿನ ಯುವ ಪೀಳಿಗೆಯನ್ನು ಸೆಳೆಯಬೇಕೆನ್ನುವ ಮಹತ್ವಾಕಾಂಕ್ಷೆಯನ್ನು ಹೊಂದಿದ್ದಾರೆ. ಇತ್ತೀಚಿನ ದಿನಮಾನಗಳಲ್ಲಿ, ಕೃಷಿಯಲ್ಲಿ ಆಗುತ್ತಿರುವ ಬದಲಾವಣೆಗಳು ಅಂದರೆ ಬೆಲೆ ಕುಸಿತ, ಕೈ

ಕೊಡುವ ಮುಂಗಾರು, ಕಳಪೆ ಗುಣಮಟ್ಟದ ಬೀಜ, ಅವೈಜ್ಞಾನಿಕ ಕೃಷಿವ್ಯವಸ್ಥೆ ಮತ್ತು ಇತರೆ ಕಾರಣದಿಂದ ಅನೇಕ ರೈತರು ಮತ್ತು ಯುವಪೀಳಿಗೆ ಹಿಂದೆ ಸರಿಯುತ್ತಾರೆ. ಹೀಗಾಗಿ ಈ ಉದ್ಯಮಿಯು ಪನಾಮ್ ನೇಚರ್ ಪ್ರೆಶ್ ಪ್ರೈವೆಟ್ ಲಿಮಿಟೆಡ್‌ನಲ್ಲಿ ಸಣ್ಣ ಸಣ್ಣ ರೈತರಿಂದ ಭೂಮಿಯನ್ನು ಬಾಡಿಗೆ ಪಡೆದುಕೊಂಡು ಕಾರ್ಪೋರೆಟ್ ಕಂಪನಿಯೂ ಖುದ್ದು ಕೃಷಿ ಮಾಡುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕೃಷಿಯನ್ನು ಆಧುನೀಕರಿಸಬೇಕು, ಹಳೆಯ ಪದ್ಧತಿಯ ಜೊತೆಗೆ ವೈಜ್ಞಾನಿಕ ಪದ್ಧತಿ ಬಳಕೆ ಅವಶ್ಯಕವಾಗಿದೆ ಎನ್ನುವ ಅಭಿಪ್ರಾಯವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಈ ಅಧ್ಯಯನದಲ್ಲಿ ಅಧ್ಯಯನಕ್ಕೆ ಪೂರಕವಾದ ಅಂಶವೆಂದರೆ, ಕಂಪನಿಯು ರೈತರಿಗೆ ಇರುವ ಭೂಮಿ ಮತ್ತು ಸೌಲಭ್ಯಗಳನ್ನು ಅಂದರೆ ಸರ್ಕಾರಿ ಯೋಜನೆಗಳನ್ನು ಬಳಸಿಕೊಂಡು ಕೃಷಿ ಮಾಡುವುದಕ್ಕೆ ಪ್ರೇರೇಪಿಸುವ ಬದಲು ಇಲ್ಲಿ ಕಂಪನಿಯು ರೈತರ ಭೂಮಿಯನ್ನು ತೆಗೆದುಕೊಂಡು ಸ್ವತಃ ಕಂಪನಿಯೇ ಕೃಷಿಯನ್ನು ಮಾಡುವುದರಿಂದ ರೈತರಿಗೆ ಕೃಷಿಯಲ್ಲಿ ಆಸಕ್ತಿ ಹುಟ್ಟುವ ಬದಲು, ಕಂಪನಿಗೆ ಭೂಮಿಯನ್ನು ಕೊಟ್ಟು, ಕಂಪನಿಯವರು ಭೂಮಿಗಾಗಿ ಕೊಟ್ಟಷ್ಟು ಹಣ ಪಡೆದು ಸೋಮಾರಿಗಳಾಗುತ್ತಾರೆ ಎನ್ನುವುದೊಂದು ಅಂಶವಾದರೆ, ಮತ್ತೊಂದು ಅಂಶವು ಕಂಪನಿಯು ತೆಗೆದುಕೊಂಡ ಭೂಮಿಯಲ್ಲಿ ಹೆಚ್ಚಾಗಿ ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿದ್ದು, ರೈತರು ಹೊಸ ಹೊಸ ತಂತ್ರಜ್ಞಾನಗಳನ್ನು ಬಳಸಿಕೊಂಡು ಹೇಗೆ ತೋಟಗಾರಿಕೆ ಬೆಳೆಗಳನ್ನು ಬೆಳೆಯಬೇಕು ಮತ್ತು ಅದನ್ನು ಹೇಗೆ ಲಾಭದಾಯಕವಾಗಿಸಿಕೊಳ್ಳಬೇಕು ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ ಈ ಅಂಶವು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.

ಕೃಷಿಯಲ್ಲಿರುವ ನಾನಾ ಕುಂದುಕೊರತೆಗಳ ಬಗ್ಗೆ ಗುರುತಿಸುವಿಕೆ "ಸಮಗ್ರ ತೋಟಗಾರಿಕೆ ಅಭಿವೃದ್ಧಿ" ಅಧ್ಯಯನವು ಕೃಷಿ ಪೇಟೆಯಲ್ಲಿ ದಿನಾಂಕ 12/6/2013, ಪ್ರಕಟವಾಗಿ ತೋಟಗಾರಿಕೆಯ ಒಂದು ಮಹತ್ತರವಾದ ಯೋಜನೆಯನ್ನು ಪ್ರಸ್ತಾಪಿಸಿದೆ.[56] ಹಾಗಾಗಿ ಈ ಅಧ್ಯಯನವು ನನ್ನ ಅಧ್ಯಯನಕ್ಕೆ ತುಂಬಾ ಹತ್ತಿರವಾಗಿದೆ. ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೇಯೂ ವೈಜ್ಞಾನಿಕ ಅಭಿವೃದ್ಧಿ ತಳಹದಿಯಲ್ಲಿ ನೆಲೆಗೊಳಿಸಿದೆ, ತೋಟಗಾರಿಕೆ ಯೋಜನೆಯೂ ತೋಟಗಾರಿಕೆ ಬೆಳೆಗಳ ಉತ್ಪಾದನೆಯನ್ನು ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವುದಾಗಿದೆ. ತೋಟಗಾರಿಕೆ ಉತ್ಪನ್ನಗಳ ಗುಣಮಟ್ಟ ವರ್ಧಿಸಿ ಕೊಯ್ಲೋತ್ತರ ಸರಪಳಿಯಲ್ಲಿನ ನ್ಯೂನತೆಗಳನ್ನು ಕಡಿತಗೊಳಿಸು ವುದು, ತೋಟಗಾರಿಕೆ ಉತ್ಪನ್ನ ಹಾಳಾಗುವಿಕೆಯನ್ನು ಕಡಿಮೆ ಮಾಡಿ ಸಂಸ್ಕರಣೆ ಮತ್ತು ಮೌಲ್ಯವರ್ಧನಾಕ್ರಮಗಳ ಅಳವಡಿಕೆಗೆ ಪ್ರೋತ್ಸಾಹ ನೀಡುವುದು, ಉತ್ಪನ್ನಗಳಿಗೆ ಸುವ್ಯವಸ್ಥಿತ ಮಾರುಕಟ್ಟೆಯನ್ನು ಒದಗಿಸುವುದು, ತೋಟಗಾರಿಕೆ ಕೃಷಿ ಅವಲಂಬಿಸಿರುವ ರೈತರ ಆರ್ಥಿಕ

ಮತ್ತು ಸಾಮಾಜಿಕ ಸ್ಥಿತಿ ಬಲಪಡಿಸುವುದುನ್ನು ಉದ್ದೇಶವಾಗಿರಿಸಿಕೊಂಡಿದೆ. ಹಾಗೆಯೇ ತೋಟಗಾರಿಕೆ ಬೆಳೆ ಬೆಳೆಯುವ ಆಸಕ್ತಿ ರೈತರನ್ನು ಗುಂಪುಗಳಾಗಿ ಮಾಡಿ, ನಾನಾ ಬೆಳೆಗಳ ಉತ್ಪಾದನೆಗೆ ಪ್ರೋತ್ಸಾಹಿಸುವುದು ಮತ್ತು ಕೇಂದ್ರ ಸರ್ಕಾರದಿಂದ ಸಣ್ಣರೈತರ ಒಕ್ಕೂಟದ ಮಾರ್ಗಸೂಚಿಯಂತೆ 15ರಿಂದ 20 ರೈತರನ್ನು ಮಾತ್ರ ಸದಸ್ಯರನ್ನಾಗಿ ನೊಂದಾಯಿಸಲಾಗುವುದು.

ಕೃಷಿಯನ್ನು ಕಾರ್ಪೋರೇಟ್ ಹಿಡಿತದಿಂದ ಬಿಡಿಸುವುದೇ ದಾರಿ ಪ್ರಜಾವಾಣಿ 22/5/2016 ಕಿರಣ್.ಎಂ.ಗಾಜೂನೂರು ಅವರ ಅಧ್ಯಯನದಲ್ಲಿ ಭಾರತ ಸರ್ಕಾರದ ಕೃಷಿ ಸಚಿವಾಲಯದ ಇತ್ತೀಚಿನ ಅಂಕಿ-ಅಂಶಗಳ ವರದಿಯು ದಕ್ಷಿಣ ಭಾರತದ ಐದು ಕೃಷಿಪ್ರಧಾನ ರಾಜ್ಯಗಳಾದ ಮಹಾರಾಷ್ಟ್ರ, ತೆಲಂಗಾಣ, ಆಂಧ್ರಪ್ರದೇಶ, ಕರ್ನಾಟಕ ಮತ್ತು ಕೇರಳದಲ್ಲಿ ಕಳೆದ ಮೂರು ವರ್ಷಗಳಲ್ಲಿ 3312 ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ.[57] ಈ ವಿದ್ಯಮಾನಕ್ಕೆ ಅತಿಯಾದ ಅತಿವೃಷ್ಟಿ ಮತ್ತು ಅನಾವೃಷ್ಟಿಯೂ, ಅಸಮರ್ಪಕ ರಾಷ್ಟ್ರೀಯ ಕೃಷಿನೀತಿ, ಬೆಂಬಲ ಬೆಲೆಯಲ್ಲಿ ಭಾರಿ ಕಡಿತ, ಸಮರ್ಥ ರಾಜಕೀಯ ನಾಯಕತ್ವದ ಕೊರತೆ, ನೀರಾವರಿ ಸಮಸ್ಯೆ, ನೀರಾವರಿ ಇರುವಲ್ಲಿ ನೀರಿನ ಅಸಮರ್ಪಕ ವಿತರಣೆ, ಬೀಜ ಗೊಬ್ಬರಗಳ ಬೆಲೆಯಲ್ಲಿ ಹೆಚ್ಚಳ,[57] ಕೃಷಿ ಸಾಲದ ಮೇಲೆ ವಿಪರೀತ ಬಡ್ಡಿ ದರ, ಮಧ್ಯವರ್ತಿಗಳಿಂದ ತುಂಬಿಹೋಗಿರುವ ಮಾರುಕಟ್ಟೆ ವ್ಯವಸ್ಥೆ ಇತ್ಯಾದಿ ಸರಣಿ ಸಮಸ್ಯೆಗಳೇ ರೈತರ ಆತ್ಮಹತ್ಯೆಯಂತಹ ವಿದ್ಯಮಾನಕ್ಕೆ ಕಾರಣ ಎನ್ನುವುದು ಹಲವರವಾದವಾದರೆ, ಇದರ ಜೊತೆಗೆ 1990ರ ನಂತರದ ಉದಾರವಾದಿ ಆರ್ಥಿಕ ನೀತಿಯ ಪರಿಣಾಮವಾಗಿ ಇಂದು, ಕೃಷಿಯೂ ಕಾರ್ಪೋರೇಟ್ ಕಂಪನಿಗಳ ಹಿಡಿತಕ್ಕೆ ಸಿಗುವಂತಾಗಿದೆ. ಕಂಪನಿಗಳ ಹಿಡಿತವು ಬೀಜ, ಗೊಬ್ಬರ ಮಾರುವುದರಿಂದ ಹಿಡಿದು, ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸುವವರಿಗೆ ಬೆಂಕಿಯ ಕೆನ್ನಾಲಿಗೆಯಂತೆ ವ್ಯಾಪಿಸಿದೆ, ಇಂತಹ ಉಸಿರು ಕಟ್ಟಿರುವ ವಾತಾವರಣದಿಂದ ರೈತರು ಆತ್ಮಹತ್ಯೆಯಂತಹ ನಿರ್ಧಾರ ಕೈಗೊಳ್ಳುತ್ತಿದ್ದಾರೆ ಎನ್ನುವ ವಿವರಣೆಯನ್ನು ನೀಡಿದ್ದಾರೆ.

ಹಾಗೆಯೇ ಈ ಅಧ್ಯಯನದಲ್ಲಿ ರೈತರ ಆತ್ಮಹತ್ಯೆಗೆ ಸಂಬಂಧಪಟ್ಟಂತೆ, ಆತ್ಮಹತ್ಯೆಯನ್ನು ತಡೆಯಲು ದೇಶದಲ್ಲೇ ಇಂದು ಸಮರ್ಥ ಮತ್ತು ಕ್ರಿಯಾಶೀಲ ಯೋಜನೆಯನ್ನು ರೂಪಿಸಬೇಕಿದೆ. ಏಕೆಂದರೆ ನಮ್ಮ ದೇಶದಲ್ಲಿ ಶೇ.75%ಕ್ಕೂ ಹೆಚ್ಚಿನ ಜನರು ಕೃಷಿಯನ್ನೇ ಮೂಲ ಉದ್ಯೋಗವನ್ನಾಗಿ ಮಾಡಿಕೊಂಡು ಕೃಷಿಯನ್ನೇ ಅವಲಂಬಿಸಿದ್ದಾರೆ. ಹೀಗಿರುವಾಗ ಅನೇಕ ಅಭಿವೃದ್ಧಿಯ ಯೋಜನೆಗಳು ಮತ್ತು ಅಭಿವೃದ್ಧಿಯ ಮಂತ್ರಗಳು ಕೈಗಾರಿಕೆಯ ಕುರಿತು ಮಾತನಾಡುತ್ತಿವೆಯೇ ಹೊರತು, ಕೃಷಿಯಾಧರಿತ ಅಭಿವೃದ್ಧಿಯ ಮಂತ್ರಗಳೇ ವಿರಳವಾಗಿವೆ. ಒಟ್ಟಾರೆ ಹೇಳುವುದಾದರೆ ಇಪ್ಪತ್ತು ವರ್ಷಗಳ ನವ ಉದಾರವಾದಿ, ಆರ್ಥಿಕ ನೀತಿ ನಿಯಮಗಳು ನಮ್ಮ ದೇಶದ ಬಹು

ಸಂಖ್ಯೆಯ ರೈತರನ್ನು ಸ್ವಾವಲಂಬಿ ಸ್ಥಾನದಿಂದ ಭೂರಹಿತ ಕೃಷಿಕೂಲಿಕಾರರ ಸ್ಥಿತಿಗೆ ದೂಡಿದೆ. ಇಂತಹ ಪರಿಸ್ಥಿತಿಯಲ್ಲಿ ರೈತರ ಸಮಸ್ಯೆಗಳಿಗೆ ಪರಿಹಾರ ಸುಲಭವಾದ ಸಂಗತಿಯಲ್ಲ ಎನ್ನುವ ಅಂಶವನ್ನು ಚರ್ಚಿಸಿದ್ದಾರೆ. ಈ ಅಧ್ಯಯನದಲ್ಲಿ, ಚರ್ಚಿಸಿರುವ ರೈತರ ಆತ್ಮಹತ್ಯೆಯನ್ನು ಕಡಿಮೆ ಗೊಳಿಸುವ ಹೊಸ ವಿಧವಾದ ಯೋಜನೆಗಳ ಅವಶ್ಯಕತೆ ಮತ್ತು ರೈತರು ಅಭಿವೃದ್ಧಿ ಹೊಂದ ಬೇಕಾದರೆ ರೈತರ ಪರವಾದ ವೈಜ್ಞಾನಿಕ ರೂಪುರೇಷೆಗಳನ್ನು, ಸರ್ಕಾರವು ಹಾಕಿ ಕೊಳ್ಳಬೇಕು ಎನ್ನುವ ಅಂಶಗಳು ಅಧ್ಯಯನದ ವಿಷಯಕ್ಕೆ ಪೂರಕವಾಗಿದೆ.

ಮಾರುಕಟ್ಟೆ ಸಮಾನತೆ ಮೇಲ್ನೋಟಕ್ಕೆ ಸೀಮಿತ ಡಾ.ಎಂ.ಚಂದ್ರ ಪೂಜಾರಿ ಅವರು ಕನ್ನಡ ಪ್ರಭ ದಿನಪತ್ರಿಕೆಯಲ್ಲಿ, ದಿನಾಂಕ 8/4/16 ಅಧ್ಯಯನದಲ್ಲಿ ಮಾರುಕಟ್ಟೆಯು ಮೇಲ್ನೋಟಕ್ಕೆ ಕಾಣುವಷ್ಟು ಸಮಾನತೆಯನ್ನು ಹೊಂದಿಲ್ಲ ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ.[58] ಭಾರತವು ಸ್ವಾತಂತ್ರ್ಯಾನಂತರ ಅನುಸರಿಸಿದ ಅಭಿವೃದ್ಧಿ ತತ್ವಗಳಿಂದ ಹಾಗೂ 1990ರ ದಶಕದ ನಂತರ ಖಾಸಗೀಕರಣ, ಉದಾರೀಕರಣ ಜಾಗತೀಕರಣದಿಂದ ಮಾರುಕಟ್ಟೆಯು ನಿರ್ದೇಶಿತ ಅಭಿವೃದ್ಧಿ ಹೊಂದಿದೆ. ಹಾಗೆಯೇ ಎಲ್ಲರೂ ಸಮೃದ್ಧಿಯಿಂದ ಇರುವ ಹಾಗೆ ಬಿಂಬಿತವಾಗಿದೆ ಎಂದು ಹೇಳುತ್ತಾ, ಅದಕ್ಕೆ ಪೂರಕ ಕಾರಣವನ್ನು ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ. ಮೇಲ್ನೋಟಕ್ಕೆ ಕಾಣುವಂತೆ ಅಭಿವೃದ್ಧಿಯು ಎಲ್ಲ ಕ್ಷೇತ್ರಗಳಲ್ಲಿ ಆಗಿರುವುದಿಲ್ಲ ಸಂಪತ್ತು ಹೆಚ್ಚಾದಂತೆ ದೇಶದಲ್ಲಿ ಬಡವರ ಸಂಖ್ಯೆಯೂ ಹೆಚ್ಚುತ್ತಿದ್ದು, ಸಂಪತ್ತು ಕೇವಲ ಕೆಲವರ ಸ್ವತ್ತಾಗುತ್ತಿದೆ ಎಂದಿದ್ದಾರೆ. ಮಾರುಕಟ್ಟೆಯಲ್ಲಿ ಕಾಣುವ ಕೆಲವು ಸಂಗತಿಗಳು ಪರಿಗಣನೆಗೆ ಬರುವುದಿಲ್ಲ. ಅಂದರೆ ಲಿಂಗ, ವಯಸ್ಸು, ಜಾತಿ, ಧರ್ಮ ಇತ್ಯಾದಿಗಳು ಮತ್ತು ಮಾರಾಟಗಾರರು ಮತ್ತು ಕೊಳ್ಳುವವರು ಮಾರುಕಟ್ಟೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದ್ದಾರೆ. ಅಂದರೆ ಸರಕು ಮತ್ತು ಸೇವೆಗಳನ್ನು ತಮ್ಮ ಇಚ್ಛೆಗೆ ಅನುಸಾರ ಮಾರಾಟ ಮಾಡಬಹುದು ಎನ್ನುವುದಾಗಿದೆ. ಈ ಅಂಶಗಳಿಂದ ಮಾರುಕಟ್ಟೆಯಲ್ಲಿ ಸಮಾನತೆಯ ಚಿತ್ರಣ ಕಾಣಸಿಗುತ್ತದೆ. ಆದರೆ, ಇದು ಕೇವಲ ಮೇಲ್ನೋಟಕ್ಕೆ ಮಾತ್ರ ಇದೆ. ಏಕೆಂದರೆ ಮಾರುಕಟ್ಟೆಯಲ್ಲಿ ಸರಕು ಮಾರಲು ಬಂದ ಒಬ್ಬ ಸಾಮಾನ್ಯ ರೈತನಿಗೂ ಹಾಗೂ ಒಬ್ಬ ಬ್ರ್ಯಾಂಡೆಡ್ ಅಥವಾ ಎಂ.ಎನ್.ಸಿ.ಕಂಪನಿಯ ವ್ಯಕ್ತಿಗೆ ಬಹಳ ಭಿನ್ನತೆ ಇರುತ್ತದೆ. ಇಬ್ಬರು ಮಾರಲು ಬಂದ ಸರಕು ಒಂದೇ ತರನಾದದ್ದಾದರೂ ಮಾರುವ ಅನಿವಾರ್ಯತೆ ಸಾಮಾನ್ಯ ರೈತನಿಗೆ ಬಹಳ ಮುಖ್ಯವಾಗಿರುತ್ತದೆ. ಹಾಗಾಗಿ ರೈತರು ಅನಿವಾರ್ಯತೆಯಿಂದ ಬಂದ ಬೆಲೆಗೆ ತಮ್ಮ ಸರಕನ್ನು ಮಾರುತ್ತಾರೆ. ಆದರೆ ಒಬ್ಬ ಕಂಪನಿಯ ವ್ಯಕ್ತಿಗೆ ಈ ಅನಿವಾರ್ಯತೆ ಇರುವುದುಲ್ಲಾ ಹಾಗಾಗಿ ಅವರು ಸರಕನ್ನು ತಾವು ನಿಗದಿಪಡಿಸಿದ ಬೆಲೆಗೆ ಮಾರಿ ಹೆಚ್ಚಿನ ಲಾಭ ಗಳಿಸುತ್ತಾರೆ. ಇಂತಹ ಅನೇಕ ಸಂಗತಿಗಳು ಮಾರುಕಟ್ಟೆಯಲ್ಲಿ

ದಿನನಿತ್ಯ ನಡೆಯುತ್ತಿರುತ್ತವೆ ಎನ್ನುವ ಅಸಮಾನತೆಯ ಮಾರುಕಟ್ಟೆಯ ಚಿತ್ರಣವನ್ನು ಲೇಖಕರು ವಿಶ್ಲೇಷಿಸಿದ್ದಾರೆ.

ಹಾಗೆಯೇ ಮಾರುಕಟ್ಟೆಯ ತತ್ವಗಳು ಆರ್ಥಿಕ ಕ್ಷೇತ್ರಕ್ಕೆ ಸೀಮಿತವಾಗಿದ್ದರೆ ತೊಂದರೆ ಇರುವುದಿಲ್ಲ ಎಂದು ಹೇಳುತ್ತಾ, ಅದೇ ಮಾರುಕಟ್ಟೆಯ ಆರ್ಥಿಕ ತತ್ವಗಳನ್ನು ಮನೆಗೆ, ಸಮುದಾಯಕ್ಕೆ ಅಳವಡಿಸಿದರೆ ಸಂಬಂಧಗಳು ಲಾಭ-ನಷ್ಟಗಳನ್ನು ಲೆಕ್ಕ ಹಾಕುವ ಪರಿಸ್ಥಿತಿ ಬರುತ್ತದೆ ಎನ್ನುತ್ತಾ, ಮಾರುಕಟ್ಟೆಯ ತತ್ವಗಳನುಸಾರ ಶಿಕ್ಷಣ, ಆರೋಗ್ಯ ಕೇಂದ್ರಗಳು ನಡೆದರೆ, ಆಗ ಬಡವರ ಕಷ್ಟ ಲೆಕ್ಕಕ್ಕೆ ಇಲ್ಲದಂತಾಗುತ್ತದೆ. ಹಾಗೆಯೇ ತೊಂಬತ್ತರ ನಂತರ ಮಾರುಕಟ್ಟೆಯ ತತ್ವಗಳು ವಸತಿ, ಆರೋಗ್ಯ, ನೀರು, ನೈರ್ಮಲ್ಯಗಳು ನಿರ್ಧರಿಸುತ್ತವೆ. ಹೀಗಾಗಿ ಬಡವರು ಮತ್ತು ಅಶಕ್ತರು ಈ ಎಲ್ಲ ಮೂಲಸೌಕರ್ಯದಿಂದ ವಂಚಿತರಾಗುತ್ತಿದ್ದಾರೆ. ಒಟ್ಟಾರೆ ಅಧ್ಯಯನದಲ್ಲಿ ಸರಕು ಮತ್ತು ಸೇವೆಗಳನ್ನು ಬೇಡಿಕೆ ಮತ್ತು ಪೂರೈಕೆಗಳು ಮೌಲ್ಯ ನಿರ್ಧರಿಸುತ್ತವೆ, ಮಾರುಕಟ್ಟೆಯಲ್ಲಿ ಸಣ್ಣರೈತರಿಗೆ, ಹಾಗೂ ಸಣ್ಣ ಪುಟ್ಟ ವ್ಯಾಪಾರಿಗಳಿಗೆ ಮಾರುವುದಕ್ಕೆ ಹೆಚ್ಚಿನ ಸ್ವಾತಂತ್ರ್ಯ ಇರುವುದಿಲ್ಲ ಎನ್ನುವ ಮಹತ್ತರವಾದ ಅಂಶಗಳನ್ನು ತಿಳಿಸಿದ್ದಾರೆ. ಅಧ್ಯಯನದಲ್ಲಿ ಚರ್ಚಿಸಿರುವ ಅಂಶವು, ಅಧ್ಯಯನದ ಸಮೀಕ್ಷೆ ನಡೆಸಿದಾಗ ಅನೇಕ ಸಣ್ಣ ರೈತರು ತಾವು ಅನಿವಾರ್ಯ ಕಾರಣಗಳಿಂದ ಮಾರುಕಟ್ಟೆಯಲ್ಲಿರುವ ಬೆಲೆಗಳಿಗೆ ತಾವು ಉತ್ಪಾದಿಸಿ ಉತ್ಪನ್ನಗಳನ್ನು ಮಾರುವುದಾಗಿ ತಿಳಿಸಿದರು.

ಪ್ರವಾಸದಿಂದ ಬರ ಪರಿಸರ ಶುದ್ಧ ಅಸಾಧ್ಯ, ಡಾ.ಎಂ.ಚಂದ್ರ ಪೂಜಾರಿ ಅವರು ದಿನಾಂಕ 6/5/16ರ ಅಧ್ಯಯನದಲ್ಲಿ, ಇಂದಿನ ರೈತರು ಎದುರಿಸುತ್ತಿರುವ ಸಮಸ್ಯೆಗಳ ಕುರಿತು ಮತ್ತು ಇಂದಿನ ರಾಜಕಾರಣಿಗಳು ಅದನ್ನು ಹೇಗೆ ತಮ್ಮ ಪ್ರಚಾರಕ್ಕೆ ಬಳಸಿಕೊಳ್ಳುತ್ತಿವೆ ಎನ್ನುವ ಅಂಶವನ್ನು ಹೇಳುತ್ತಾ ಹಿಂದೆ ಬರಗಾಲವು ರೈತರು ಎದುರಿಸುತ್ತಿರುವ ಸಮಸ್ಯೆಯಾಗಿದ್ದು, ಯಾವ ರೈತರು ನೀರಿನ ಅಂದರೆ ಮಳೆ ಅಭಾವದಿಂದ ಬೆಳೆಗಳನ್ನು ಉತ್ಪಾದನೆ ಮಾಡಲು ಆಗುತ್ತಿರಲಿಲ್ಲವೋ ಅವರು ಬರದ ಸಮಸ್ಯೆಯನ್ನು ಎದುರಿಸುತ್ತಿದ್ದರು. ಆದರೆ ಇಂದು ಬರದ ಛಾಯೆ ಬದಲಾಗಿದೆ. ನೀರಿನ ಸಮಸ್ಯೆಯು ಕೇವಲ ರೈತರಿಗೆ ವ್ಯವಸಾಯಕ್ಕೆ ಅಲ್ಲದೆ, ಜನಗಳಿಗೆ ಕುಡಿಯುವ ನೀರಿನಿಂದಲೇ ಶುರುವಾಗುತ್ತದೆ ಎಂದು ಚರ್ಚಿಸಿದ್ದಾರೆ.[59] ಈ ಎಲ್ಲ ಸ್ಥಿತಿಗಳನ್ನು ಮಾಧ್ಯಮಗಳು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿವೆ. ಆದರೆ ಬರ ಏಕೆ ಸೃಷ್ಟಿಯಾಗುತ್ತಿದೆ ಎನ್ನುವುದರ ಮೇಲೆ ಹೆಚ್ಚಿನ ಬೆಳಕು ಚೆಲ್ಲುವುದಿಲ್ಲ ಎನ್ನುವ ಮಹತ್ತರವಾದ ಅಂಶವನ್ನು ತಿಳಿಸಿದ್ದಾರೆ. ಹಾಗೆಯೇ ಬರ ಪರಿಹಾರದ ಹೆಸರಿನಲ್ಲಿ ರಾಜಕಾರಣಿಗಳು ಪ್ರವಾಸವನ್ನು ಕೈಗೊಳ್ಳುತ್ತಾರೆ. ರಾಜಕಾರಣಿಗಳ ಪ್ರವಾಸವು ಕೇವಲ ನಾಮಮಾತ್ರಕ್ಕೆ ಹೊರತು ಅದರಿಂದ

ಯಾವ ಬರಪಿಡಿತರಿಗೂ ಉಪಯೋಗವಾಗುವುದಿಲ್ಲ. ಈ ಅಧ್ಯಯನದಲ್ಲಿ ಮುಖ್ಯವಾಗಿ ಪ್ರಸ್ತಾಪಿಸಿರುವ ವಿಷಯವು, ಸಮಸ್ಯೆಯು ಕೃಷಿಯಲ್ಲಿ ಹಿಂದೆಯೂ ಇತ್ತು, ಈಗಲೂ ಇದೆ. ಕೇವಲ ಸಮಸ್ಯೆ ಇದೆ ಎಂದು ಗುರುತಿಸುವ ಕೆಲಸದ ಹೊರತಾಗಿ, ಸಮಸ್ಯೆಯ ಮೂಲವನ್ನು ಹುಡುಕಿ ಪರಿಹಾರವನ್ನು ಕೊಡುವಲ್ಲಿ ರಾಜಕಾರಣಿಗಳು, ಮಾಧ್ಯಮಗಳು ಮತ್ತು ಜನ ಸಾಮಾನ್ಯರೂ ರೈತರಿಗೆ ಸಹಕರಿಸುವಲ್ಲಿ ಭಾಗಿಯಾಗಬೇಕು ಎನ್ನುವ ಅಂಶವನ್ನು ಚರ್ಚಿಸಿದ್ದಾರೆ.

ಅನ್ನದಾತ ಅಸುಖಿ: ಸಾಪ್ತಾಹಿಕ ಸಂಪದ ಡಾ.ಎಂ.ಚಂದ್ರ ಪೂಜಾರಿ ಆಗಸ್ಟ್ 2 2015 ಅಧ್ಯಯನದಲ್ಲಿ ಲೇಖಕರು ರೈತರ ಆತ್ಮಹತ್ಯೆಯ ಕುರಿತು ವಿಶ್ಲೇಷಿಸಿದ್ದಾರೆ. ರೈತರ ಆತ್ಮಹತ್ಯೆ ಹೆಚ್ಚಾಗಲು ಎರಡು ಕಾರಣಗಳನ್ನು ಹೇಳುತ್ತಾ, ಒಂದು ದಿನೇ ದಿನೇ ಹೆಚ್ಚುತ್ತಿರುವ ಮಾಧ್ಯಮಗಳ, ದಿನಪತ್ರಿಕೆಗಳ ಪ್ರಚಾರವಾದರೆ ಇನ್ನೊಂದು ಹೊಸ ಆರ್ಥಿಕ ನೀತಿಯೂ ಬಹು ಮುಖ್ಯ ಕಾರಣವೆನ್ನುವ ಗಟ್ಟಿಯಾದ ನಿಲುವನ್ನು ಸ್ಪಷ್ಟಪಡಿಸಿದ್ದಾರೆ.[60] ರೈತರ ಆತ್ಮಹತ್ಯೆ ಹೆಚ್ಚುತ್ತಿರುವುದಕ್ಕೆ ಬಹು ಮುಖ್ಯವೆಂದರೆ(ಎಲ್‌ಪಿಜಿ) ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣವೆಂದು ಅದಕ್ಕೆ ಪೂರಕವಾದ ಅಂಶಗಳನ್ನು ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ. ಎಲ್‌ಪಿಜಿ ಬರುವ ಮುಂಚೆ ರೈತರ ಆತ್ಮಹತ್ಯೆಯು ಶೇ.14%ರಷ್ಟಿದ್ದು, 2011ರ ವೇಳೆಗೆ ಶೇ.16% ರಷ್ಟಾಗಿದೆ. ಆತ್ಮಹತ್ಯೆ ಮಾಡಿಕೊಂಡ ಬಹುತೇಕ ರೈತರು ಸಣ್ಣ ಮತ್ತು ಅತೀ ಸಣ್ಣರೈತರಾಗಿದ್ದು, ಅವರಲ್ಲಿ ಅನೇಕ ರೈತರು ಅವಿದ್ಯಾವಂತರಾಗಿದ್ದು, ಕೆಲವರು ಪ್ರಾಥಮಿಕ ಶಿಕ್ಷಣವನ್ನು ಮಾತ್ರವೇ ಮುಗಿಸಿದ್ದಾರೆ.

ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಿರುವುದೆಂದರೆ ಸಣ್ಣ ಉತ್ಪಾದಕರಿಗೆ ಅಂದರೆ ಸಣ್ಣ ಮತ್ತು ಅತಿ ಸಣ್ಣರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು. ಅಭಿವೃದ್ಧಿಯೆಂದರೆ ಕೇವಲ ಮಾತನಾಡಿದಷ್ಟು ಸುಲಭದ ವಿಷಯವಲ್ಲ. ಕೆಳಸ್ತರದಿಂದ ರೈತರಿಗೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಅವುಗಳ ಪರಿಣಾಮಗಳನ್ನು ಕಾಲಕಾಲಕ್ಕೆ ಪರಿಶೀಲಿಸಿದರೆ ಮಾತ್ರವೇ ರೈತರ ಅಭಿವೃದ್ಧಿ ಸಾಧ್ಯ ಮತ್ತು ರೈತರ ಆತ್ಮಹತ್ಯೆಯಂತಹ ಕರಾಳತೆಯನ್ನು ತಡೆಯಲು ಸಾಧ್ಯವೆಂದು ಹೇಳಿದ್ದಾರೆ. ರೈತರು ಬೆಳೆದ ಬೆಳೆಗಳಿಗೆ ಸರಿಯಾದ ಮಾರುಕಟ್ಟೆಯ ವ್ಯವಸ್ಥೆ ಮಾಡಬೇಕು, ಮತ್ತು ಬೇಡಿಕೆಗಿಂತ ಹೆಚ್ಚಿನ ಪೂರೈಕೆಯಾದಾಗ ಅದರ ಸಂರಕ್ಷಣೆಗೆ ವ್ಯವಸ್ಥಿತವಾದ ದಾಸ್ತಾನುಗಳನ್ನು ನಿರ್ಮಿಸಬೇಕು ಎನ್ನುವ ಸಂಗತಿಗಳನ್ನು ಅನ್ನದಾತ ಅಸುಖಿ ಅಧ್ಯಯನದಲ್ಲಿ ಸ್ಪಷ್ಟಪಡಿಸಿದ್ದಾರೆ.

'ತಪ್ಪು ತಿಳುವಳಿಕೆಗೆ ತುತ್ತಾದ ಮಾಲಿನ್ಯದ ಹುಟ್ಟು' ಕನ್ನಡ ಪ್ರಭ ದಿನಪತ್ರಕೆ ದಿ.28/ 08/2015 ಅಧ್ಯಯನದಲ್ಲಿ ಮಾಲಿನ್ಯದ ಕುರಿತು ಚರ್ಚಿಸಿದ್ದಾರೆ. ಅವುಗಳನ್ನು ಎರಡು ವಿಧವಾಗಿ

ವಿಂಗಡಿಸುತ್ತಾ ಕಣ್ಣಿಗೆ ಕಾಣುವ ಮಾಲಿನ್ಯ ಮತ್ತು ಮೇಲ್ನೋಟಕ್ಕೆ ಗೊತ್ತೇ ಆಗದ ಮಾಲಿನ್ಯ ಎಂದು ಹೇಳುತ್ತಾ ಕೇಂದ್ರ ಸರಕಾರದ ಸ್ವಚ್ಛತಾ ಆಂದೋಲನವು ಪರಿಸರದಲ್ಲಿ ಉಂಟಾಗುತ್ತಿರುವ ಮಾಲಿನ್ಯವನ್ನು ತಡೆಯಲು ಸಹಕಾರಿಯಾಗಿದೆ.[59] ಪರಿಸರ ಮಾಲಿನ್ಯವು ಒಬ್ಬಿಬ್ಬರಿಂದ ಆಗುವುದಲ್ಲ, ಇದರಲ್ಲಿ ಎಲ್ಲರ ಪಾಲು ಇದೆ. ಹಾಗಾಗಿ ಮಾಲಿನ್ಯಕ್ಕೆ ಎಲ್ಲರೂ ಜವಾಬ್ದಾರರು ಅಂದರೆ ಎಲ್ಲರೂ ಪರಿಸರದಲ್ಲಿ ಉಂಟಾಗುವ ಮಾಲಿನ್ಯದಿಂದ ರೋಗಕ್ಕೆ ತುತ್ತಾಗುತ್ತಾರೆ. ಅದರಲ್ಲೂ ವಾಯುಮಾಲಿನ್ಯ ದಿಂದ ಮತ್ತು ಜಲಮಾಲಿನ್ಯದಿಂದ ಜನರಲ್ಲದೆ ಪ್ರಾಣಿ, ಪಕ್ಷಿಗಳು, ಗಿಡ ಮರಗಳು ತುತ್ತಾಗುತ್ತವೆ. ಅದಕ್ಕೆ ಒಂದು ನಿದರ್ಶನವೆಂದರೆ ಎಲ್ಲೆಲ್ಲಿ ಕಾರ್ಖಾನೆಗಳಿವೆಯೊ ಮತ್ತು ಗಣಿಗಾರಿಕೆ ನಡೆಯುತ್ತದೆಯೊ ಅಂತಹ ಊರುಗಳಲ್ಲಿ ವಾಸ ಮಾಡುವ ಜನರಿಗೆ ತಿಳಿದೊ ತಿಳಿಯದೆಯೋ ವಾಯುಮಾಲಿನ್ಯದ ಪರಿಣಾಮ ಉಂಟಾಗುತ್ತದೆ. ಈ ಅಧ್ಯಯನದಲ್ಲಿ ಚರ್ಚಿಸಿರುವ ಅಂಶವು ಅಧ್ಯಯನಕ್ಕೆ ಪೂರಕವಾಗಿದೆ. ಏಕೆಂದರೆ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರದ ಆಯ್ಕೆಯನ್ನು ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಹೊಸಹಳ್ಳಿ ಗ್ರಾಮದಲ್ಲಿ ಸಮೀಕ್ಷೆ ನಡೆಸಿದಾಗ, ಅನೇಕ ರೈತರ ಆಕ್ಷೇಪಣೆಯು(ಗಣಿಗಾರಿಕೆಯಿಂದ) ವಾಯು ಮಾಲಿನ್ಯದಿಂದ ಗ್ರಾಮದಲ್ಲಿ ಉಂಟಾಗುತ್ತಿರುವ ಬೆಳೆಗಳ ಇಳುವರಿ ಕುಂಠಿತವಾಗುವುದು ಮತ್ತು ಜನರ ಆರೋಗ್ಯದ ಮೇಲೆ ನೇರ ಪರಿಣಾಮ ಬೀರುವುದಾಗಿದೆ. ಹಾಗಾಗಿ ಲೇಖನದಲ್ಲಿ ಚರ್ಚಿಸಿರುವ ವಿಷಯವು ತುಂಬಾ ಮಹತ್ವಪೂರ್ಣವಾಗಿದೆ.

ರಿಪೋರ್ಟ್ ಆಫ್ ದಿ ವರ್ಕಿಂಗ್ ಗ್ರೂಪ್ ಆನ್ ಅಗ್ರಿಕಲ್ಚರಲ್ ಮಾರ್ಕೆಂಟಿಗ್ ಇನ್‌ಫ್ರಾಸ್ಟ್ರಕ್ಚರ್ ಪಾಲಿಸಿ ರಿಕ್ವಾರ್ಡ್ ಫಾರ್ ಇಂಟರ್‌ನಲ್ ಅ್ಯಂಡ್ ಎಕ್ಸ್‌ಟ್ರನಲ್ ಟ್ರೇಡ್[61] ಫಾರ್ ದಿ 11 ಫೈನ್ ಇಯರ್ ಪ್ಲ್ಯಾನ್ 2007–2012 ಭಾರತ ಸರ್ಕಾರ(2007) ಪ್ರಸ್ತುತ ವರದಿಯಲ್ಲಿ ಹಸಿರು ಕ್ರಾಂತಿಯ ನಂತರ ಕೃಷಿ ಮಾರುಕಟ್ಟೆಯಲ್ಲಿ ಮತ್ತು ಬಾಹ್ಯ ವ್ಯವಹಾರದಲ್ಲಿ ತುಂಬಾ ಬದಲಾವಣೆಗಳನ್ನು ಮತ್ತು ದೇಶದಲ್ಲಿ ಹಸಿವು ನಿವಾರಣೆ ಮಾಡುವುದು, ರೈತರ ಜೀವನಮಟ್ಟವನ್ನು ಸುಧಾರಿಸುವುದು ಎಂಬ ಕೆಲವು ಅಂಶಗಳನ್ನು ಆದಷ್ಟು ಕಡಿಮೆ ಅವಧಿಯಲ್ಲಿ ಜಾರಿಗೆ ತರಬೇಕು ಎಂಬ ಅಂಶಗಳನ್ನು ಚರ್ಚಿಸುತ್ತಾ ಮಾರುಕಟ್ಟೆಯು ವಿವಿಧ ರೀತಿಯ ಸವಾಲುಗಳನ್ನು ಇತ್ತೀಚಿನ ದಿನಗಳಲ್ಲಿ ಎದುರಿಸುತ್ತಿವೆ ಎನ್ನುವ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ದೇಶದ ಕೃಷಿ ಮಾರುಕಟ್ಟೆಯ ಸಮಸ್ಯೆಗಳು, ಸ್ವದೇಶಿ ಮಾರುಕಟ್ಟೆಯ ವಿನ್ಯಾಸ, ಮಾರುಕಟ್ಟೆಯ ಅಳತೆ, ಪೂರೈಕೆ ಸರಪಳಿಯಲ್ಲಿರುವ ವಿವಿಧ ರೀತಿಯ ಕೃಷಿ ಉತ್ಪನ್ನಗಳು ಕೃಷಿ ಮಾರುಕಟ್ಟೆಯ ಕಾರ್ಯ ವೈಖರಿ, ಸಗಟು ಮಂಡಿಗಳ ಕಾರ್ಯ ವೈಖರಿಗಳನ್ನು ಈ ವರದಿ ಸಿದ್ಧತಾ ಸಮಿತಿಯ ಕಾರ್ಯಕಾರಿ ಗುಂಪು ಗುರುತಿಸಿದೆ. ಹಾಗೆಯೇ ಈ ವರದಯಲ್ಲಿ ಈಗಿನ

ಮಾರುಕಟ್ಟೆಯ ಸ್ಥಿತಿಗತಿಗಳನ್ನು ಮಾರುಕಟ್ಟೆಯ ಮೂಲಭೂತ ಸೌಲಭ್ಯಗಳನ್ನು ಹಳ್ಳಿಯಿರುವ ಉಗ್ರಾಣಗಳ ಪರಿಸ್ಥಿತಿಯನ್ನು ಹಾಗೂ ಕೃಷಿ ಉತ್ಪಾದನೆ ಹೆಚ್ಚಿರುವ ಉತ್ಪನ್ನಗಳನ್ನು ಇಂತಹ ಉಗ್ರಾಣಗಳಲ್ಲಿ ಶೇಖರಿಸುವ ಸಾಧ್ಯಾಸಾಧ್ಯತೆಗಳ ಆಂಶಗಳನ್ನು ಚರ್ಚಿಸಲಾಗಿದೆ. ಇದರ ಜೊತೆಗೆ ಇತ್ತೀಚಿಗೆ ಮಾರುಕಟ್ಟೆಯಲ್ಲಿ ಉದ್ಭವಿಸುತ್ತಿರುವ ವಿವಿಧ ರೀತಿಯ ಮಾರುಕಟ್ಟೆಯ ಹರಿವುಗಳು(ಚಾನಲ್ಸ್) ವಿವಿಧ ಬಗೆಯಲ್ಲಿ ಮಾರಾಟ ವ್ಯವಸ್ಥೆಯಲ್ಲಿ ಕೊಂಡಿಗಳನನ್ನು ಕಲ್ಪಿಸಿ ರೈತರಿಗೆ ಅನುಕೂಲವಾಗುವಂತೆ ನೋಡಿಕೊಳ್ಳುವ ಬಗೆಯನ್ನು ವಿಶ್ಲೇಷಿಸುತ್ತಾರೆ. ಹಾಗೆಯೇ ಈ ವರದಿ ಸಿದ್ಧತಾ ಕಾರ್ಯಕಾರಿ ಗುಂಪು ಕೆಲವು ಶಿಫಾರಸ್ಸುಗಳನ್ನು ಮಾಡಿದೆ. ಅವು ಈ ಕೆಳಗಿನಂತಿವೆ.

1. ಮಾರ್ಕೆಟಿಂಗ್ ಸಿಸ್ಟಮ್ ಇಂಪ್ರೂವ್‌ಮೆಂಟ್ ಆ್ಯಂಡ್ ಕಂಡ್ಯೂಸಿವ್ ಪಾಲಿಸಿ ಎನ್ವಿರಾನ್‌ಮೆಂಟ್.
2. ವೋಲ್‌ಸೆಲ್ ಮಾರ್ಕೆಟಿಂಗ್ ಮ್ಯಾನೇಜ್‌ಮೆಂಟ್.
3. ಪ್ರಮೋಶನ್ ಆಫ್ ಕಾಂಟ್ರ್ಯಾಕ್ಟ್/ಕೋ ಆಪರೇಟಿವ್ ಮಾರ್ಕೆಟಿಂಗ್.
4. ಲೀಗಲ್ ಫ್ರೇಮ್‌ವರ್ಕ್ ಆ್ಯಂಡ್ ಫಿಸಿಕಲ್ ಮ್ಯಾಟರ್.
5. ಪ್ರಮೋಶನ್ ಆಫ್ ಗ್ರೇವಿಂಗ್ ಆ್ಯಂಡ್ ಕ್ವಾಲಿಟಿ.
6. ಸ್ಟ್ರೆಂಥನಿಂಗ್ ಆಫ್ ಮಾರ್ಕೆಟಿಂಗ್ ಇನ್‌ಫ್ರಾಸ್ಟ್ರಕ್ಚರ್.
7. ಸ್ಟ್ರೆಂಥನಿಂಗ್ ಆಫ್ ಅಗ್ರಿಕಲ್ಚರ್ ಮಾರ್ಕೆಟಿಂಗ್ ಇನ್‌ಫಾರ್‌ಮೇಶನ್ ಸಿಸ್ಟಮ್ ಯೂಸಿಂಗ್ ಐ.ಸಿ.ಟಿ.
8. ಸಿಂಪ್ಲಿಫಿಕೇಶನ್ ಆಫ್ ಪ್ರೋಸಿಜರ್ಸ್ ಫಾರ್ ಸ್ಪೀಡೀ ಇಂಪ್ಲಿಮೆಂಟೇಶನ್ ಆಫ್ ಸ್ಕೀಮ್.
9. ಹ್ಯೂಮನ್ ರಿಸೋರ್ಸ್ ಡೆವಲಪ್‌ಮೆಂಟ್ ಫಾರ್ ಅಗ್ರಿಕಲ್ಚರ್ ಮಾರ್ಕೆಟಿಂಗ್.
10. ಪ್ರಮೋಶನ್ ಆಫ್ ಎಕ್ಸ್‌ಪೋರ್ಟ್ಸ್ ಎಕ್ಸ್‌ಟ್ರರ್ನಲ್ ಟ್ರೇಡ್.
11. ರೀಒರಿಯಂಟೇಶನ್ ಆಫ್ ಪಾಲಿಸಿ ಪಾರ್‌ಡಿಯಮ್

**ಉಪಸಂಹಾರ**

ಈ ಅಧ್ಯಾಯದಲ್ಲಿ ವ್ಯಾಪಾರದ ವ್ಯಾಖ್ಯಾನ ಮತ್ತು ವ್ಯಾಪಾರದ ವಿವರಣೆಯೊಂದಿಗೆ, ವಿವಿಧ ಬಗೆಯ ವ್ಯಾಪಾರದ ವಿಧಗಳನ್ನು ಚರ್ಚಿಸಲಾಗಿದೆ ಮತ್ತು ಈಗಾಗಲೆ ಆಗಿರುವ ಅಧ್ಯಯನಗಳ ವಿಮರ್ಶೆಯನ್ನು ಮಾಡಲಾಗಿದೆ. ಅಧ್ಯಯನದಲ್ಲಿ, ಸಂಶೋಧನೆ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶಗಳಿಗೆ ಪೂರಕವಾದ ರಾಜ್ಯದಲ್ಲಾದ, ರಾಷ್ಟ್ರದಲ್ಲಾದ,

ಅಂತಾರಾಷ್ಟ್ರೀಯ ಮಟ್ಟದಲ್ಲಾದ ಅಧ್ಯಯನಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಅಧ್ಯಾಯದಲ್ಲಿ ಗ್ರಾಮೀಣ ಮಾರುಕಟ್ಟೆಗೆ ಸಂಬಂಧಿಸಿದ, ಕೃಷಿಗೆ ಸಂಬಂಧಿಸಿದ, ತೋಟಗಾರಿಕೆ ಕೃಷಿಗೆ ಸಂಬಂಧಿಸಿದ ಹೀಗೆ ಅಧ್ಯಯನಕ್ಕೆ ಪೂರಕವಾದವುಗಳನ್ನು ವಿಶ್ಲೇಷಿಸಿ, ಸಮಸ್ಯೀಕರಣದ ಮೂಲಕ ಅಧ್ಯಯನಕ್ಕೆ ಉದ್ದೇಶಗಳನ್ನು ಕಂಡುಕೊಳ್ಳಲಾಗಿದೆ. ಈ ಅಧ್ಯಯನದ ಮೂಲ ಉದ್ದೇಶವೇ, ಈಗಾಗಲೆ ಆಗಿರುವ ಅಧ್ಯಯನಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸುವುದು ಮತ್ತು ಅಧ್ಯಯನದಲ್ಲಿರುವ ನ್ಯೂನತೆಗಳನ್ನು ಗುರುತಿಸಿ, ಅವುಗಳನ್ನೇ ಸಮಸ್ಯೆಗಳಾಗಿ ಪರಿವರ್ತಿಸುವುದು ಹೀಗೆ ಗುರುತಿಸಿದ ಸಮಸ್ಯೆಗಳನ್ನೇ ಅಧ್ಯಯನದ ಉದ್ದೇಶಗಳಾಗಿ ಮಾಡಿಕೊಳ್ಳುವುದಾಗಿದೆ.

ಈ ಅಧ್ಯಯನವು ಗುರುತಿಸಿರುವ, ಆ ಉದ್ದೇಶಗಳಿಗೆ ಸಂಶೋಧನೆಯ ಮೂಲಕ ಉತ್ತರ ವನ್ನು ಪಡೆಯುವುದು. ಅಧ್ಯಯನದಲ್ಲಿ ವಿವಿಧ ಭಾಗದ ಕೃಷಿಗೆ ಸಂಬಂಧಪಟ್ಟಂತೆ ಮತ್ತು ತೋಟಗಾರಿಕೆ ಕೃಷಿಗೆ ಪೂರಕವಾದ ಅಧ್ಯಯನಗಳನ್ನು ವಿಶ್ಲೇಷಿಸಲಾಗಿದೆ. ಹೀಗೆ ವಿಶ್ಲೇಷಣೆಯಲ್ಲಿ ತಿಳಿದುಬಂದಿರುವ ಕೆಲವು ಮುಖ್ಯವಾದ ಅಂಶಗಳೆಂದರೆ, ಕೆನಡಾದ ಮಾರುಕಟ್ಟೆಗೂ ಮತ್ತು ಭಾರತದ ಮಾರುಕಟ್ಟೆಗೂ ಇರುವ ವ್ಯತ್ಯಾಸ ಮತ್ತು ಸಾಮ್ಯತೆ. ವಿವಿಧ ದೇಶಗಳ ಪ್ರಮುಖ ಬೆಳೆಗಳು, ರೈತರು ಮಾರುಕಟ್ಟೆಯಲ್ಲಿ ಎದುರಿಸುವ ಸಮಸ್ಯೆಗಳು ಹಾಗೂ ಸರ್ಕಾರದಿಂದ ರೈತರಿಗಿರುವ ವಿವಿಧ ಯೋಜನೆಗಳು ಇತ್ಯಾದಿ ಮಾಹಿತಿಯನ್ನು ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ. ಕೃಷಿ ಮತ್ತು ತೋಟಗಾರಿಕೆ ಯೋಜನೆಗಳಿಗೆ ಸಂಬಂಧಪಟ್ಟಂತೆ, ರಾಜ್ಯದಲ್ಲಿ, ದೇಶದಲ್ಲಿ ಮತ್ತು ಹೊರ ದೇಶಗಳಲ್ಲಿಯೂ ತುಂಬಾ ಅಧ್ಯಯನಗಳು ಆಗಿವೆ ಎನ್ನುವ ಮಾಹಿತಿಯನ್ನು ಕಂಡುಕೊಳ್ಳಬಹುದು. ಪ್ರಸ್ತುತ ಅಧ್ಯಯನವು ಈಗಾಗಲೆ ಆಗಿರುವ ಎಲ್ಲ ಅಧ್ಯಯನಗಳನ್ನು ಗಣನೆಗೆ ತೆಗೆದುಕೊಂಡು, ಉದ್ದೇಶಗಳನ್ನೂ ರೂಪಿಸಿಕೊಳ್ಳಲಾಗಿದೆ.

## ಕೊನೆ ಟಿಪ್ಪಣಿಗಳು

1. ಕರ್ನಾಟಕ ಸರ್ಕಾರ, "*ಸಮಾಜ ವಿಜ್ಞಾನ*", ಸಂಚಿಕೆ 1, 2013, ಪು.ಸಂ. 227–233.
2. ಕರ್ನಾಟಕ ಸರ್ಕಾರ, "*ಸಮಾಜ ವಿಜ್ಞಾನ*", ಸಂಚಿಕೆ 2 2014, ಪು.ಸಂ. 234–243.
3. ಬಿ.ಎಂ.ರಾಜಶೇಖರ, "*ಸುವರ್ಣ ಮಯೂರ* 1965–2015" ಸುವರ್ಣ ಮಹೋತ್ಸವ ಸಮಿತಿ, ಸಂಡೂರು, 2016, ಪು.ಸಂ.82–107.
4. ಮೊಹಮ್ಮದ್ ಮಾರಿ, *ಪ್ರೊಡಕ್ಷನ್ ಆ್ಯಂಡ್ ಮಾರ್ಕೆಂಟಿಂಗ್ ಇನ್ ಫೆಚ್ ಸಿಂದ್*, ಪಾಕಿಸ್ತಾನ ಪ್ರಕಟಿತ ಮಹಾಪ್ರಬಂಧ ರಾಜಸ್ಥಾನ ವಿಶ್ವವಿದ್ಯಾಲಯ, 2009, ಪು.ಸಂ.1–

23–180.

5. ಸ್ಟೇಫನ್ ಬೊಜನ್ನೆ(2011), *ಅಗ್ರಿಕಲ್ಚರಲ್ ಆ್ಯಂಡ್ ರೂರಲ್ ಲೇಬರ್ ಮಾರ್ಕೆಟ್ ಇನ್ ಯೂರೋಪಿಯನ್ ಯುನಿಟ್ಸ್* ಕ್ಯಾಂಡಿಡೇಟ್ ಕಂಟ್ರೀಸ್ ಆಫ್ ಫಾರ್ಮರ್, ಯೂರೋಪ್. ಪು.ಸಂ.1–12–242.

6. ಬೈ ರಾಜೇಂದ್ರನ್ ಆ್ಯಂಡ್ ಸೆಲ್ವೆಂಟ್ ಆಲ್, "*ದಿ ಇಂಪ್ಯಾಕ್ಟ್ ಆಫ್ ಅಗ್ರಿಕಲ್ಚರಲ್ ಪಾಲಿಸಿ ಆ್ಯನ್ ಇಂಟಿಗ್ರೇಶನ್ ಮಾರ್ಕೆಟ್ಸ್ ಆಫ್ ಆನಿಯನ್*", ಸೋಶಿಯಲ್ ಆ್ಯಂಡ್ ಇಕನಾಮಿಕ್ ಜರ್ನಲ್, 2001, ಪು.ಸಂ.45–48.

7. ಎ ಸ್ಟಡಿ ಆನ್ ಪ್ರೈಸ್ ಟ್ರೆಂಡ್ ಇಂಟಿಗ್ರೇಶನ್ ಆಫ್ ಹೋಲ್‌ಸೇಲ್ ಮಾರ್ಕೇಟ್ ಫಾರ್ ಆನಿಯನ್ ಇನ್ ಮೆಟ್ರೋ ಸಿಟೀಸ್ ಆಫ್ ಇಂಡಿಯಾ, 2012, ಪು.ಸಂ.222–345.

8. ಲೀಸಾ ಮಾರ್ರೈ ವಾಸ್ಕೋ, *ಅಲ್ಟರ್‌ನೇಟಿವ್ ವಿಂಡ್ ಮ್ಯಾನೇಜ್‌ಮೇಂಟ್ ಪ್ರಾಕ್ಟೀಸಸ್ ಎಫೆಕ್ಟ್ಸ್ ಆನ್ ವಿಂಡ್ ಕಂಟ್ರೋಲ್ ಗ್ರಾಪ್ರೈನ್ ಪರ್‌ಫಾರ್‌ಮೆನ್ಸ್*, ಅಂಡ್ ಸಾಯಿಲ್ ಕ್ವಾಲಿಟಿ ಇನ್ ಆ್ಯನ್ ಎಸ್ಟಾಬ್ಲಿಷ್ಡ್, ಅಪ್ರಕಟಿತ ಮಹಾಪ್ರಬಂಧ, ಕೆನಡಾ, 2010, ಪು.ಸಂ.55–56.

9. ಶರೊನ್ ಮಬಬ್ಬಿ ತ್ತುಮಿ, ಇವ್ಯಾಲ್ಯುವೇಟಿಂಗ್ *ಹಾರ್ಟಿಕಲ್ಚರಲ್ ಪ್ರಾಕ್ಟೀಸಸ್ ಫಾರ್ ಸಸ್‌ಟೇನ್‌ಬಲ್ ಟೊಮೋಟೊ ಪ್ರೊಡಕ್ಷನ್*, ಎ ರಿಪೋರ್ಟ್ ಆನ್ ಹಾರ್ಟಿಕಲ್ಚರ್, ಮಹಾಪ್ರಬಂಧ, ಪಾಕಿಸ್ತಾನ್, 2014, ಪು.ಸಂ.2–45–80.

10. ಮೇಘನ್ ಅಂಡ್ರೀವ್ಸ್, *ಮೈಕ್ರೋಕ್ರೆಡಿಟ್ ಆ್ಯಂಡ್ ಅಗ್ರಿಕಲ್ಚರ್, ಹೌ ಇಟ್ ವರ್ಕ್* (MEDA) ಕೆನಡಾ, 2006, ಪು.ಸಂ.22–32.

11. ಆಡ್ರೈನ್ ಬ್ರೌಸ್ ಕಾರ್ರ್ಡ್, ಚಾಲೆಂಜೆಸ್ ಆ್ಯಂಡ್ ಆಪರ್ಚುನಿಟೀಸ್ ಫಾರ್ ಮಾರ್ಕೆಟಿಂಗ್ ಫ್ರೂಟ್ ಫ್ರಮ್ ದಿ ವೆಸ್ಟನ್ ಸ್ಲೋಪಿ, ವೆಸ್ಟ್ರನ್ ಕಂಟ್ರೀಸ್, ಸೇಲಂ, 2012, ಪು.ಸಂ. 24–30.

12. ಪ್ರದೀಪ್ ಮ್ಹೆತ್, "*ಡೈವರ್‌ಸಿಫಿಕೇಶನ್ ಆ್ಯಂಡ್ ಹಾರ್ಟಿಕಲ್ಚ್‌ರಲ್ ಕ್ರಾಪ್ಸ್*", ಅಭಿಜಿತ್ ಪಬ್ಲೀಕೆಶನ್, 2009, ಪು.ಸಂ.2–4

13. ವಿಜಯಕುಮಾರ್, *ಆ್ಯನ್ ಅನಾಲಿಟಿಕಲ್ ಸ್ಟಡಿ ಆಫ್ ಡಬ್ಲ್ಯುಟಿಓ* ಆನ್ ದಿ ಇಂಡಿಯನ್

ಅಗ್ರಿಕಲ್ಚರ್ ಸೆಕ್ಟರ್, ಸಂಪುಟ–12, ಸಂಚಿಕೆ–120, ಪ್ರಜಾವಾಣಿ, 2014, ಪು.ಸಂ.7.

14. ಭಗವತಿ ಮತ್ತು ಶ್ರೀನಿವಾಸನ್, ವಿದೇಶಿ ವಿನಿಮಯದ ಅಧ್ಯಯನ, ಅಪ್ರಕಟಿತ ಪ್ರಂಬಂಧ, ಧಾರವಾಡ ವಿಶ್ವವಿದ್ಯಾಲಯ, ಧಾರವಾಢ, 1970, ಪು.ಸಂ 28–50.

15. ರಾಜಕುಮಾರ್ ಮಹಾಜನ್ ಶೆಟ್ಟಿ, *ಫಾರ್ಮರ್ಸ್ ಲಿವೆರೆಜೆ ಅಂಡರ್ ಮಾರ್ಕೆಟ್ ಇನ್‌ಟರ್‌ವೆನ್‌ಶನ್ ಸ್ಕೀಮ್*, ಇಪಿಡಬ್ಲ್ಯೂ, 2008, ಪು.ಸಂ.21–24.

16. ಅಲಿ ಮತ್ತು ಕಪೂರ್, *ದಿ ಪರ್‌ಸೆಪ್‌ಷನ್ಸ್ ಆಫ್ ಫಾರ್ಮರ್ಸ್ ಅಬೌಟ್ ರಿಸ್ಕ್ಸ್ ಇನ್ ಪ್ರೊಡಕ್ಷನ್ ಆಫ್ ಫ್ರೂಟ್ ಅಂಡ್ ವೆಜಿಟೆಬಲ್ಸ್*, ಜರ್ನಲ್ ಆಫ್ ರೂರಲ್ ಮಾರ್ಕೆಂಟಿಂಗ್, 2008, ಪು.ಸಂ.12–24.

17. ಮಹೇಶ್ವರಿ, ಅಶೋಕ ಆ್ಯಂಡ್ ಪ್ರದೀಪ್ ವಾರ್ಮ, *ಎ ಸ್ಟಡಿ ಆನ್ ಪ್ರೀಶಿಯಸ್ ಫಾರ್ಮಿಂಗ್ ಟೆಕ್ನಾಲಜಿ ಅಡಾಪಶ್ನನ್ಸ್ ಆ್ಯಂಡ್ ಪ್ರೊಡಕ್ಟಟಿವಿಟಿ ಆಫ್ ವೆಜಿಟೆಬಲ್ಸ್ ಇನ್ ರಿಸೋರ್ಸ್ ಫಾರ್ ಎನ್ವಿರಾನ್‌ಮೆಂಟ್ಸ್*, ಅಪ್ರಕಟಿತ ಮಹಾಪ್ರಬಂದ, ಬಾಂಬೆ ಯೂನಿವರ್ಸಿಟಿ, ಬಾಂಬೆ, 2008, ಪು.ಸಂ.10–45.

18. ನಬಿಬ್ ಬಿ. ಅಹೆರ್, ಡಿಸ್ಟ್ರಸ್ ಆ್ಯಂಡ್ ರಿಲೀಫ್ ಇನ್ ಫಾರ್ಮರ್ ಸೂಯಿಸೈಡ್ಸ್, ರೂರಲ್ ಮಾರ್ಕೆಟ್, ಬಾಂಬೆ ಪಬ್ಲಿಕೇಶನ್, ಬಾಂಬೆ, ಫೆ. 15,2007, ಪು.ಸಂ.21–34.

19. ಅಜಯ್ ನೋಟ್, ಲೇಬರ್ ಮಾರ್ಕೆಟ್ ಇಶ್ಯೂಸ್ ಇನ್ ಇಂಡಿಯಾ, ದಿ ಹಿಂದೂ ದಿನಪತ್ರಿಕೆ, ಸಂಚಿಕೆ 21, ಸಂಪುಟ, 222, ಜನವರಿ 4/2016, ಪು.ಸಂ.8.

20. ಪಂಕಜ್ ಅರೋರ 2008, ಇನ್ನೋವೇಶನ್ ಇನ್ ರೂರಲ್ ಮಾರ್ಕೆಟಿಂಗ್, ಅಧ್ಯಯನ್ ಪಬ್ಲಿಕೇಶನ್, ಪು.ಸಂ.1–5

21. ಸ್ಯಾಡಿಪನ್ ರೈ, "*ಸ್ಟ್ರಕ್ಚರ್ ಆಫ್ ರೂರಲ್ ಮಾರ್ಕೆಟ್ ಫಾರ್ ಅಚ್ವೀವಿಂಗ್ ವರ್ಟಿಕಲ್ ಕೋ ಆರ್ಡಿನೇಶನ್ ಇನ್ ದಿ ಇಂಡಿಯನ್ ಫುಡ್ ಚೈನ್*", ಅಪ್ರಕಟಿತ ಪ್ರಬಂಧ, ಹೈದರಾಬಾದ್, 2007, ಪು.ಸಂ 1–28.

22. ಸೂಭೊ ಚಟ್ಟೋಪಧ್ಯಾಯ ಮತ್ತು ಎ.ಕೆ.ಸರ್ಕಾರ್, "*ಮಾರ್ಕೆಟ್: ಡ್ರೈವೆನ್ ಇನ್ನೋವೇಶನ್ ಫಾರ್ ರೂರಲ್ ಪೆನಟ್ರೇಶನ್*, ಪ್ರಕಟಿತ ಲೇಖನ, ರೂರಲ್ ಮಾರ್ಕೆಟಿಂಗ್, ಸಂಪುಟ–234, ಸೆ.2011, ಪು.ಸಂ.36–38.

23. ರೆಡ್ಡಿ ಪಿ.ಎನ್., "*ರೂರಲ್ ಮಾರ್ಕೆಟ್ ರಿಸರ್ಚ್*" ಹಿಂದೂಸ್ತಾನ್ ಪಬ್ಲಿಕ್ ಹೌಸ್,

ನ್ಯೂಡೆಲ್ಲಿ, 2012, ಪು. ಸಂ. 18–36.

24. ಎಸ್.ಎನ್. ದೀಪಕ್, "*ಮಾರ್ಕೆಟ್ ಸ್ಟ್ರೇಟಜಿಸ್ ಫಾರ್ ರೂರಲ್ ಮಾರ್ಕೆಟಿಂಗ್*" ಹಿಂದೂಸ್ತಾನ್ ಪಬ್ಲಿಕ್ ಹೌಸ್, ನ್ಯೂಡೆಲ್ಲಿ, 2010, ಪು.ಸಂ.11–16.

25. ಶಾಂತಿ ಕನ್ನನ್, *ಟ್ಯಾಪಿಂಗ್ ಇಂಡಿಯಾಸ್ ರೂರಲ್ ಮಾರ್ಕೆಟ್ ಸಾರಾ ಹ್ಯೂಮನ್, ಇನ್‌ಕಮ್–ಜನರೇಟಿಂಗ್ ಪ್ರೊಜೆಕ್ಟ್ಸ್ ಇನ್ ರೂರಲ್ ಕಮಿಟೀಸ್,* ಥಿಯರಿ ಆ್ಯಂಡ್ ಪ್ರಾಕ್ಟಿಸ್ ಎ ಪರ್ಸ್ನಲ್ ರಿಪೋರ್ಟ್, ಲೇಖನ, ಮಾರ್ಕೆಟಿಂಗ್ ಮ್ಯಾನೇಜ್‌ಮೆಂಟ್, ಸಂಚಿಕೆ–38, 2009, ಪು.ಸಂ.2–3.

26. ಆರ್. ವಿ.ಬಡಿ ಮತ್ತು ಎನ್.ವಿ. ಬಡಿ, *ರೂರಲ್ ಮಾರ್ಕೆಂಟಿಂಗ್* ಹಿಮಾಲಯ ಪಬ್ಲಿಕೇಶನ್ ಹೌಸ್, ನ್ಯೂಡೆಲ್ಲಿ, 2002, ಪು.ಸಂ.1–56.

27. ದೇವೇಂದ್ರ ಪ್ರಸಾದ್ ಪಾಂಡೆ, *ರೂರಲ್ ಮಾರ್ಕೆಂಟಿಂಗ್ ಮ್ಯಾನೇಜ್‌ಮೆಂಟ್,* ಸೇಜ್ ಪಬ್ಲಿಕೇಶನ್, ನೂಡೆಲ್ಲಿ, 1998, ಪು.ಸಂ.22–30.

28. ಸಿ.ಎಸ್.ಜಿ.ಕೃಷ್ಣಾಚಾರ್ಯುಲು, ಲಲಿತಾ ರಾಮಕೃಷ್ಣನ್ ಕೇಸಸ್ ಇನ್ ರೂರಲ್ ಮಾರ್ಕೆಂಟಿಂಗ್, ಆ್ಯನ್ ಇಂಟಿಗ್ರೇಟೆಡ್ ಅಪ್ರೋಚ್ ಇನ್ ತಮಿಳುನಾಡು, 1998, ಪು.ಸಂ.34–40.

29. ಡೇವಿಡ್ ಎ. ಆಖಿರ್, *ಮಾರ್ಕೆಟ್ ರಿಸರ್ಚ್ ಇನ್ ಅಗ್ರಿಕಲ್ಚರ್, ಉತ್ತರ್ ಪ್ರದೇಶ್ ಪ್ರಕಟಿತ ಲೇಖನ,* ಇಪಿಡಬ್ಲ್ಯೂ, 2000, ಪು.ಸಂ.18–20.

30. ಡೆವಿಡ್ ಲಿನೋ, *ಸೋಶಿಯಲ್ ಮಾರ್ಕೆಟಿಂಗ್ ಸ್ಟ್ರೇಟಜಿಸ್ ಫಾರ್ ಚೇಂಜಿಂಗ್* ಪಬ್ಲಿಕ್ ಬಿಹೇವಿಯರ್, ಜರ್ನಲ್ ಆಫ್ ಇಪಿಡಬ್ಲ್ಯೂ, 1999, ಪು.ಸಂ.1–4.

31. ಯು. ಎಸ್. ಟ್ರೆಂಡ್ಸ್ ಬೈ ಮೈಲ್‌ಡ್ರೇಡ್ ಇ. ವಾರ್ನರ್, *ಮಾರ್ಕೆಟ್ ಬೇಸ್ಡ್* ಗೌರ್ನಮೆಂಟ್ *ಆ್ಯಂಡ್ ದಿ ಚಾಲೆಂಜಸ್ ಫಾರ್ ರೂರಲ್ ಗೌರ್ನಮೆಂಟ್ ಜರ್‌ನಲ್ ಆಫ್ ರೂರಲ್ ಮಾರ್ಕೆಂಟಿಂಗ್,* 2007, ಪು.ಸಂ.22–29.

32. ಅಗ್ರಿಕಲ್ಚರ್ ಪಾಲಿಸಿ ವಿಜನ್ 2020, ಇಂಡಿಯನ್ ರಿಸರ್ಚ್ ಇನಸ್ಟಿಟ್ಯೂಟ್ ರಿಪೋರ್ಟ್ ಆಫ್ ದಿ ವರ್ಕಿಂಗ್ ಗ್ರೂಪ್ ಆ್ಯನ್ ಅಗ್ರಿಕಲ್ಚರಲ್ ಮಾರ್ಕೆಂಟಿಂಗ್ ಇನ್‌ಫ್ರಾಸ್ಟ್ರಕ್ಚರ್, ಜರ್ನಲ್ ಆಫ್ ರೂರಲ್ ಮಾರ್ಕೆಟಿಂಗ್. ಪು.ಸಂ.12–17.

33. ಎ.ವಡಿವೇಲು ಮತ್ತು ಬಿ.ಆರ್ ಕಿರನ್, ಪ್ರಾಬ್ಲಮ್ಸ್ ಆ್ಯಂಡ್ ಪ್ರಾಸ್‌ಪೆಕ್ಟ್ಸ್ ಆಫ್ ಅಗ್ರಿಕಲ್ಚರಲ್ ಮಾರ್ಕೆಂಟಿಂಗ್ ಇನ್ ಇಂಡಿಯಾ, ಆ್ಯನ್ ಓವರ್‌ವೀವ್, 2009, ಪು.ಸಂ.67–80.

34. ರೂರಲ್ ಮಾರ್ಕೆಟಿಂಗ್ ಇನ್ ಇಂಡಿಯಾ ಚಾಲೆಂಜಸ್ ಆ್ಯಂಡ್ ಅಪಾರ್ಚುನಿಟೀಸ್, ದಿ ಹಿಂದೂ ದಿನಪತ್ರಿಕೆ, ಸಂಪುಟ–21, ಸಂಚಿಕೆ–84, 8th aug. 2013, ಪು.ಸಂ.12.

35. ಎಂ. ಚಂದ್ರ ಪೂಜಾರಿ, *ರೈತರ ಮಾರುಕಟ್ಟೆ ಸಮಸ್ಯೆಗಳು ಮತ್ತು ಪರಿಹಾರಗಳು,* ವಿಜಯ ಕರ್ನಾಟಕ ದಿನಪತ್ರಿಕೆ, ಸಂಪುಟ–4, ಸಂಚಿಕೆ, 200, 2016, ಪು.ಸಂ.7.

36. ಮಹದೇವ ಎಂ. ಸಿಂಧಗಿ, "*ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಭಿವೃದ್ಧಿ ಅಧ್ಯಯನ,* ಎಂ.ಫಿಲ್, ಪ್ರಬಂಧ, ಕ.ವಿ.ವಿ.ಹಂಪಿ, 1996, ಪು.ಸಂ.1–15–30–155.

37. ಭೋಗಪ್ಪ, *ಮಾರ್ಕೆಟಿಂಗ್ ಆಫ್ ಅಗ್ರಿಕಲ್ಚರ್‌ಲ್ ಪ್ರೊಡ್ಯೂಸಸ್ ಇನ್ ಗುಲ್ಬರ್ಗ ಡಿವಿಜನ್ ಆಫ್ ಕರ್ನಾಟಕ,* ಗುಲ್ಬರ್ಗ ವಿಶ್ವವಿದ್ಯಾಲಯ, 1988, ಪು.ಸಂ1–2–220.

38. ಭಜಂತ್ರಿ, ವರ್ಕಿಂಗ್ ಆಫ್ *ಎ.ಪಿ.ಎಂ.ಸೀಸ್ ಎ ಕೇಸ್ ಸ್ಟಡಿ ಆಫ್ ಬೆಲ್‌ಗಾಮ್ ಡಿಸ್ಟ್ರಿಕ್ಟ್ ಬೆಳಗಾಂ,* 2002, ಪು.ಸಂ.1–20–224–245.

39. ಹೆಚ್. ಎಸ್. ಸೋಮಶೇಖರ್, "*ಕೃಷಿ ಸಂಪನ್ಮೂಲ ಮಾರುಕಟ್ಟೆಯಲ್ಲಿ ರಸಗೊಬ್ಬರಗಳು*", ಕೋಲಾರ ಜಿಲ್ಲೆಯ ಒಂದು ಅಧ್ಯಯನ, ಎಂ.ಫಿಲ್ ಪ್ರಬಂಧ, ಉಜಿರೆ, 2009, ಪು.ಸಂ.1–18–29–50.

40. ವೀತೋಬ್ ಭೀಮನ್ನ ಆರ್.ಎಸ್., *ಅಗ್ರಿಕಲ್ಚರಲ್ ಮಾಡರ್ನೈಜೇಶನ್ ಆ್ಯಂಡ್ ಲ್ಯಾಂಡ್ ಲೇಬರ್ ಮಾರ್ಕೆಟ್ಸ್ ಇನ್ ನಾರ್ಥ್ ಕರ್ನಾಟಕ, ಅಪ್ರಕಟಿತ ಪ್ರಬಂಧ,* 2008, ಪು.ಸಂ. 220–258

41. ಎಸ್. ರಾಮ್‌ಪುರ್, *ಮ್ಯಾನೇಜ್‌ಮಂಟ್ ಆಫ್ ಅಗ್ರಿಕಲ್ಚರಲ್ ಪ್ರೋಡ್ಯೂಸಸ್ ಮಾರ್ಕೆಂಟಿಂಗ್ ಕಮಿಟೀಸ್ ಇನ್ ಕರ್ನಾಟಕ: ಎ ಕೇಸ್ ಸ್ಟಡಿ ಆಫ್ ಗುಲ್ಬರ್ಗಾ ಡಿವಿಜನ್* ಅಪ್ರಕಟಿತ ಮಹಾಪ್ರಬಂಧ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, 2010, ಪು.ಸಂ.1–280.

42. ಗೀತಾ ಕುಮಾರಿ, *ಮಾರ್ಕೆಂಟಿಂಗ್ ಆಫ್* ಇನ್ *ಮಂಗಳೂರು ಸಿಟಿ:* ಎ ಕೇಸ್ ಸ್ಟಡಿ ಇನ್‌ಟು ದಿ ಪ್ರಾಬ್ಲಮ್ ಆಫ್ ಕನ್ಸ್‌ಜೂಮರ್ಸ್ ಆ್ಯಂಡ್ ಡೀಲರ್ಸ್, 1987, ಪು.ಸಂ.1–130.

43. ಹೆಚ್. ಎಸ್. ಧಾಭ, *ಅಗ್ರಿಕಲ್ಚರಲ್ ಲೇಬರ್ ಇನ್ ಬ್ಯಾಕ್‌ವರ್ಡ್ ರೀಜಿನ್: ಎ ಕೇಸ್ ಸ್ಟಡಿ* ಆಫ್ ಹೈದರಾಬಾದ್ ಕರ್ನಾಟಕ, 1996, ಪು.ಸಂ.222–230.

44. ಹೆಚ್.ನಾಗರಾಜ ಶೆಟ್ಟಿ, "*ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ*", ಸಹನಾ ಪ್ರಕಾಶನ, ಕ.ವಿ.ವಿ., ಹಂಪಿ. 1998, ಪು.ಸಂ54–68

45. ಶರೀಫ್, "*ಪ್ರಾಜೆಕ್ಟ್ ರಿಪೋರ್ಟ ಆನ್ ಇಂಪ್ಯಾಕ್ಟ್ ಸಬ್‌ಸಿಡಿ ಆನ್ ಆನಿಯನ್ ಗ್ರೋವರ್ಸ್* ಇನ್ ಸಂಡೂರು", ಪ್ರಾಜೆಕ್ಟ್ ರಿಪೋರ್ಟ್, ಸಂಡೂರು, 2015, ಪು.ಸಂ 1–120

46. ಮುರುಗೇಶ ಹನಗೋಡಿಮಠ, *ಮಾರ್ಕೆಟಿಂಗ್ ಮಂತ್ರಗಳು*, ಸಾಹಿತ್ಯ ಪ್ರಕಾಶನ ಹುಬ್ಬಳ್ಳಿ, 1998, ಪು.ಸಂ.28–294

47. ಎನ್.ದೇವರಾಜ ರೆಡ್ಡಿ, "*ಕೊಳವೆಬಾವಿಗೆ, ಜಲ ಮರುಪೂರಣ*", 1998, ಪು.ಸಂ.1–24

48. ಶಿಲ್ಪ ಕೆ., ಸಪ್ಲೈ ಚೈನ್ ಮ್ಯಾನೇಜ್‌ಮೆಂಟ್ ಇನ್ ವೆಜಿಟೆಬಲ್ಸ್ ಮಾರ್ಕೆಟ್: ಎ ಕಂಪ್ಯಾರಿಟಿವ್ ಅನಾಲಿಸಸ್, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಗುಲ್ಬರ್ಗ ವಿಶ್ವವಿದ್ಯಾಲಯ, 2005, ಪು.ಸಂ.1–23–128

49. ಅರುಣಾ ಸಿಂಗ್, ಪಿ. ಎ. ಲಕ್ಷ್ಮಿಪ್ರಸನ್ನನ್ ರಮೇಶ್ ಚಂದ್, ಫಾರಂ ಸೈಜ್ ಆ್ಯಂಡ್ ಪ್ರೊಡಕ್ಟಿವಿಟಿ ಅಂಡರ್‌ಸ್ಟ್ಯಾಡಿಂಗ್ ದಿ ಸ್ಟ್ರೆಂಥ್ ಆಫ್ ಸ್ಮಾಲ್ ಹೊಲ್ಡರ್ ಆ್ಯಂಡ್ ಇಂಪ್ರೂವಿಂಗ್ ದೈರ್ ಲೈವ್ಲಿ ಹುಡ್, 2011, ಪು.ಸಂ.1–275.

50. ಟಿ.ಆರ್.ಚಂದ್ರಶೇಖರ್, "*ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ* ಮತ್ತು ಉನ್ನತಾಧಿಕಾರ ಸಮಿತಿ ವರದಿ", ಪ್ರಸಾರಾಂಗ, ಕ.ವಿ.ವಿ.ಹಂಪಿ, 2005, ಪು.ಸಂ.56–75.

51. ಎ.ಎಸ್ ಬುಲ್ಲಾರ್, ಅರ್.ಎಸ್ ಸಿಂಧು, "*ಫಾರ್‌ಮರ್ ಸೂಯಿಸೈಡ್ ಇನ್ ಪಂಜಾಬ್*: ಎ ಸೆನ್ಸಸ್ ಸರ್ವೇ ಆಫ್ ದಿ ಮೋಸ್ಟ್ ಎಪೆಕ್ಟಡ್ ಡಿಸ್ಟ್ರಿಕ್ಟ್, ಪಂಜಾಬ್, 2004, ಪು.ಸಂ.1–16.

*52. ಶ್ರೀ ಕೃಷ್ಣ, ವಾಟರ್ ಹಾರ್‌ವೆಸ್ಟಿಂಗ್ ಟ್ರೈಡಿಶನ್ಸ್ ಆ್ಯಂಡ್ ದಿ ಸೋಶಿಯಲ್ ಮೈಲ್ವೀ ಇನ್ ಇಂಡಿಯಾ:* ಎ ಸೆಂಕೆಡ್ ಲುಕ್ ಇಂಟರ್ ನ್ಯಾಷನಲ್ ಜರ್ನಲ್ ಆಫ್ ಮ್ಯಾನೇಜ್ಮೆಂಟ್ ಆ್ಯಂಡ್ ಸೋಶಿಯಲ್ ಸೈನ್ಸ್ ರಿಸರ್ಚ್ (ijmssr) *ರೂರಲ್ ಮಾರ್ಕೆಟಿಂಗ್ ಇನ್*

ಇಂಡಿಯಾ ಚಾಲೆಂಜ್ಸ್ ಆ್ಯಂಡ್ ಅಪೋರ್ಚುನಿಟೀಸ್, ಪ್ರಕಟಿತ ಲೇಖನ, 8ನೇ ಆಗಸ್ಟ್ 2013, ಪು.ಸಂ.1–56

53. ಸೊಲಾನ್ ಎಸ್.. "ಪಾಲಿಸಿ ರಿಕ್ವಾರ್ಡ್ ಫಾರ್ ಇಂಟರ್‌ನಲ್ ಆ್ಯಂಡ್ ಎಕ್ಸ್‌ಟ್ರನಲ್ ಟ್ರೇಡ್ ಫಾರ್ ದಿ 11 ಫೈವ್ ಇಯರ್ ಪ್ಲ್ಯಾನ್ 2007–2012", ಸಂ. 56 ಇಪಿಡಬ್ಲ್ಯೂ, 2014, ಪು.ಸಂ.14–20.

54. ಬಳ್ಳಾರಿ ಜಿಲ್ಲಾ ಪಂಚಾಯಿತಿ, ಬಳ್ಳಾರಿ ಗೆಜೆಟೆಡ್ ಮಾಹಿತಿ, ನಾಲ್ಕನೇ ಅಧ್ಯಾಯ 1973 ಬಳ್ಳಾರಿ, 2012–2013, ಪು.ಸಂ.56.

55. ಬಸವ.ಕೆ.ಡಿ, "ಮಾರ್ಕೆಟಿಂಗ್ ಮ್ಯಾನೇಜ್‌ಮೆಂಟ್", ಸುಧಾ ಆಫ್‌ಸೆಟ್ ಪ್ರಿಂಟರ್ಸ್ 1999, ಗದಗ, ಪು. ಸಂ.1–25.

56. ಕೃಷ್ಣಮೂರ್ತಿ, ಇಂಟರ್‌ನ್ಯಾಶನಲ್ ಜರ್ನಲ್ ಆಫ್ ಮ್ಯಾನೇಜ್‌ಮೆಂಟ್ ಆ್ಯಂಡ್ ಸೋಶಿಯಲ್ ಸೈನ್ಸ್ ರಿಸರ್ಚ್, (ಐಜೆಎಮ್‌ಎಸ್‌ಎಸ್‌ಆರ್), 2013, 8ನೇ ಆಗಸ್ಟ್ ಪು.ಸಂ.5–13

57. ವಾಸು ಎಂ., "ಅಗ್ರಿಕಲ್ಚರಲ್ ಮಾಡ್ರನೈಜೇಶನ್ ಆ್ಯಂಡ್ ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಇನ್ ಇಂಡಿಯಾ", ಅಭಿಜಿತ್ ಪಬ್ಲಿಷರ್ಸ್, ಹುಬ್ಬಳ್ಳಿ, 1998, ಪು.ಸಂ.1–53.

58. ಪಿ.ಶಿವಚಿತ್ತಪ್ಪ, "ಗ್ರಾಮೀಣ ಅಭಿವೃದ್ಧಿ" ಅಖಿಲ ಏಜೆನ್ಸಿಸ್ ಅಂಜನಾದ್ರಿ, ಮೈಸೂರು, 2008, ಪು.ಸಂ.34–44.

59. ಟಿ.ಎಸ್.ಚೆನ್ನೇಶ್, "ಕೃಷಿ ಮತ್ತು ಪೇಟೆ", ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, 2008, ಪು.ಸಂ.56–67

60. ಪ್ರಜಾವಾಣಿ ದಿನಪತ್ರಿಕೆಯಲ್ಲಿ, ಸಾಪ್ತಾಹಿಕ ಪುರವಣಿ ರೈತರು ಮತ್ತು ಸಾಲ, ಸಂಚಿಕೆ–32, ಸಂಪುಟ–124 ದಿನಾಂಕ26/01/2015 ಪು.ಸಂ.1–4.

61. ರವೀಂದ್ರ, ಪ್ರಜಾವಾಣಿ, ಕೆಮ್ಮಣ್ಣುಗುಂಡಿ: ಹಸಿರುಕ್ರಾಂತಿ, ಸಂಚಿಕೆ–7, ಸಂಪುಟ–331, 23/07/2016, ಪು.ಸಂ.3.

62. ಕೃಷಿ ಪೇಟೆಯಲ್ಲಿ, "ಕೃಷಿಯಲ್ಲಿರುವ ನಾನಾ ಕುಂದುಕೊರತೆಗಳ ಬಗ್ಗೆ ಗುರುತಿಸುವಿಕೆ, ಸಮಗ್ರ ತೋಟಗಾರಿಕೆ ಅಭಿವೃದ್ಧಿ" 12/6/2013, ಪು.ಸಂ.12–16.

63. ಪ್ರಜಾವಾಣಿ, ಕೃಷಿಯನ್ನು ಕಾರ್ಪೋರೆಟ್ ಹಿಡಿತದಿಂದ ಬಿಡಿಸುವುದೇ ದಾರಿ, ಸಂಚಿಕೆ–12, ಸಂಪುಟ–234, 22/5/2016, ಪು.ಸಂ.7.

64. ಎಂ.ಚಂದ್ರ ಪೂಜಾರಿ, *"ಮಾರುಕಟ್ಟೆ ಸಮಾನತೆ ಮೇಲ್ನೋಟಕ್ಕೆ ಸೀಮಿತ"*, ಕನ್ನಡಪ್ರಭ ದಿನಪತ್ರಿಕೆ, ಸಂಚಿಕೆ–5, ಸಂಪುಟ–222, ದಿನಾಂಕ 8/4/16, ಪು.ಸಂ.6.

65. ಎಂ.ಚಂದ್ರ ಪೂಜಾರಿ, "ಸ್ಥಿತಿ–ಗತಿ" ಅಂಕಣದಲ್ಲಿ *ಪ್ರವಾಸದಿಂದ ಬರ ಪರಿಹಾರ ಶುದ್ಧ ಅಸಾಧ್ಯ*, ಕನ್ನಡ ಪ್ರಭ ದಿನಪತ್ರಿಕೆ, ದಿನಾಂಕ 6/5/16, ಪು.ಸಂ.6.

66. ಎಂ.ಚಂದ್ರ ಪೂಜಾರಿ, *"ಅನ್ನದಾತ ಅಸುಖಿ"*, ಸಾಪ್ತಾಹಿಕ ಸಂಪದ, ವಿಜಯ ಕರ್ನಾಟಕ, ಸಂಚಿಕೆ–3, ಸಂಪುಟ–234, ಆಗಸ್ಟ್ 2 2015, ಪು.ಸಂ.6.

67. ಎಂ.ಚಂದ್ರ ಪೂಜಾರಿ, *ತಪ್ಪು ತಿಳುವಳಿಕೆಗೆ ತುತ್ತಾದ ಮಾಲಿನ್ಯದ ಹುಟ್ಟು*, ಕನ್ನಡಪ್ರಭ ದಿನಪತ್ರಿಕೆ, ಸಂಚಿಕೆ–6, ಸಂಪುಟ–236, ದಿ.28/08/2015, ಪು.ಸಂ.6.

## ಅಧ್ಯಾಯ–ಎರಡು

# ಅಧ್ಯಯನ ಕ್ಷೇತ್ರದ ಪರಿಚಯ

ಪೀಠಿಕೆ

ಕರ್ನಾಟಕದಲ್ಲಿ ಕೃಷಿಯ ಹಿನ್ನೆಲೆ

ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಚಯ

ಸಂಡೂರು ಕ್ಷೇತ್ರದ ಭೌಗೋಳಿಕ ಪರಿಚಯ

# ಅಧ್ಯಾಯ–ಎರಡು

# ಅಧ್ಯಯನ ಕ್ಷೇತ್ರದ ಪರಿಚಯ

## ಪೀಠಿಕೆ

ಹಿಂದಿನ ಅಧ್ಯಾಯದಲ್ಲಿ ಗ್ರಾಮೀಣ ತೋಟಗಾರಿಕೆ ಕೃಷಿಗೆ ಸಂಬಂಧಿಸಿದ ವಿವಿಧ ಅಧ್ಯಯನಗಳ ಕುರಿತು ಚರ್ಚಿಸಲಾಗಿದೆ. ಅಧ್ಯಯನಗಳನ್ನು ವಿಶ್ಲೇಷಣೆಗೆ ಒಳಪಡಿಸಿರುವುದರಿಂದ ಸಂಶೋಧನೆಗೆ ಒಂದು ಹೊಸ ಆಯಾಮ ದೊರೆತಿದೆ. ಪ್ರಸ್ತುತ ಅಧ್ಯಾಯದಲ್ಲಿ ಕಾರ್ಯ ಕ್ಷೇತ್ರದ ಭೌಗೋಳಿಕ ಪರಿಚಯವನ್ನು ಮಾಡಲಾಗಿದೆ. ಅಧ್ಯಯನದ ಕ್ಷೇತ್ರ ಬಳ್ಳಾರಿ ಜಿಲ್ಲೆಯಾಗಿದ್ದು, ಆಯ್ದ ಪ್ರದೇಶಗಳಾದ ಬಳ್ಳಾರಿ ತಾಲೂಕಿನ ಗ್ರಾಮ ಮತ್ತು ಸಂಡೂರು ತಾಲೂಕಿನ ಗ್ರಾಮವನ್ನು ಅಧ್ಯಯನಕ್ಕೆ ಪೂರಕವಾಗುವಂತೆ ಭೌಗೋಳಿಕ ಹಿನ್ನೆಲೆಯಲ್ಲಿ ನೋಡಲಾಗಿದೆ. ಅಧ್ಯಯನ ಕ್ಷೇತ್ರದ ಪರಿಚಯವನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯದು ಕರ್ನಾಟಕದ ಮತ್ತು ಕ್ಷೇತ್ರದ ಸಾಮಾನ್ಯ ಲಕ್ಷಣಗಳು, ಎರಡನೆಯದು ಅಧ್ಯಯನದ ವಿಷಯಕ್ಕೆ ಸಂಬಂಧಿಸಿದ ಕ್ಷೇತ್ರದ ಲಕ್ಷಣಗಳು.

## ಕರ್ನಾಟಕದಲ್ಲಿ ಕೃಷಿಯ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವ ಭಾಗದಲ್ಲಿದ್ದು ರಾಜ್ಯದಲ್ಲಿ ಇಂದು ಪ್ರಮುಖ ವ್ಯಾಪಾರ ಕೇಂದ್ರವಾಗಿದೆ. ಈ ಜಿಲ್ಲೆಯಲ್ಲಿ ತುಂಗಭದ್ರಾ ನದಿಯು ಹರಿಯುತ್ತಿದ್ದು ಅ ನದಿಗೆ ಹೊಸಪೇಟೆಯಲ್ಲಿ ಅಣೆಕಟ್ಟನ್ನು ನಿರ್ಮಿಸಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ. ತುಂಗಭದ್ರಾ ನದಿಯ ನೀರಾವರಿಯಿಂದ ಜಿಲ್ಲೆಯ ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ, ಹಡಗಲಿ ಮೆತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಕಾಲುವೆ ಮೂಲಕ ಮತ್ತು ಲಿಫ್ಟ್ ಇರಿಗೇಷನ್ ಮುಖಾಂತರ ನೀರಾವರಿ ಸೌಲಭ್ಯವನ್ನು ರೈತರು ಪಡೆದಿದ್ದಾರೆ.[1] ತುಂಗಭದ್ರಾ ನದಿಯು

ಜಿಲ್ಲೆಯ ಮೂಲ ನೀರಾವರಿಯ ವ್ಯವಸ್ಥೆಯಾಗಿದ್ದು, ಜಿಲ್ಲೆಯಲ್ಲಿ ರೈತರ ಜೀವನಾಡಿಯಾಗಿದೆ. ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿ ಐತಿಹಾಸಿಕ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿಯು ಇದ್ದು, ಶ್ರೀ ಕೃಷ್ಣದೇವರಾಯನ ಕಾಲದಿಂದಲೂ ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದ್ದು ಅಂದಿನ ಕಾಲದಲ್ಲಿಯೇ ಕೃಷಿಗೆ ಅವಶ್ಯಕವಾದ ನೀರಿನ ವ್ಯವಸ್ಥೆಯನ್ನು ಜಿಲ್ಲೆಯಲ್ಲಿ ಮಾಡಲಾಗಿತ್ತು. ಸಂಡೂರು ತಾಲೂಕಿನಲ್ಲಿ ಕಬ್ಬಿಣದ ಅದಿರು ಹೆಚ್ಚಾಗಿರುವುದರಿಂದ ಈ ಜಿಲ್ಲೆಯಲ್ಲಿ ಕಬ್ಬಿಣ, ಉಕ್ಕು ಮತ್ತು ಸಿಮೆಂಟ್ ತಯಾರಿಸುವ ಕಾರ್ಖಾನೆಗಳು ಸ್ಥಾಪಿತವಾಗಿದ್ದು ಬಳ್ಳಾರಿ ಜಿಲ್ಲೆಯು ಕಬ್ಬಿಣದ ಅದಿರು ಜಿಲ್ಲೆಯೆಂದೇ ಪ್ರಸಿದ್ಧವಾಗಿದೆ. ಜಿಲ್ಲೆಯಲ್ಲಿ ಹಂಪಿ, ಹೊಸಪೇಟೆ, ದೋಣಿಮಲೈ, ಕೊಟ್ಟೂರು, ದರೋಜಿ ಮುಂತಾದ ಪ್ರೇಕ್ಷಣೀಯ ಮತ್ತು ಧಾರ್ಮಿಕ ಸ್ಥಳಗಳು ಇವೆ. ಈ ಜಿಲ್ಲೆಯಲ್ಲಿ 7 ತಾಲೂಕುಗಳು ಇವೆ. ಅವು 1. ಬಳ್ಳಾರಿ 2. ಸಿರುಗುಪ್ಪ 3. ಹೊಸಪೇಟೆ 4. ಸಂಡೂರು 5. ಹಡಗಲಿ 6. ಹಗರಿಬೊಮ್ಮನಹಳ್ಳಿ 7. ಕೂಡ್ಲಿಗಿ. ಬಳ್ಳಾರಿ ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯದಿಂದ ಮುಖ್ಯವಾಗಿ ಭತ್ತ, ಹತ್ತಿ, ಮೆಣಸಿನಕಾಯಿ, ಮೆಕ್ಕೆಜೋಳ ಬೆಳೆಗಳನ್ನು ರೈತರು ಬೆಳೆಯುತ್ತಿದ್ದಾರೆ. ಒಣ ಬೇಸಾಯದಲ್ಲಿ ಜೋಳ, ಗೋದಿ, ಕಡಲೆ, ಸಜ್ಜೆ, ಸೂರ್ಯಕಾಂತಿ, ಶೇಂಗಾ, ರಾಗಿ, ತೊಗರಿ, ಉದ್ದು ಮುಂತಾದ ಬೆಳೆಗಳನ್ನು ರೈತರು ಬೆಳೆಯುತ್ತಿರುವರು. ಬಳ್ಳಾರಿ ಜಿಲ್ಲೆಯ ಸಂಕ್ಷಿಪ್ತ ವಿವರವನ್ನು ನೋಡುವ ಮೊದಲು, ಕರ್ನಾಟಕದ ಭೌಗೋಳಿಕ ಮಾಹಿತಿಯನ್ನು ತಿಳಿದುಕೊಳ್ಳೋಣ. ಭಾರತದ 28 ರಾಜ್ಯಗಳಲ್ಲಿ ಕರ್ನಾಟಕವು ಒಂದಾಗಿದೆ.[2] ಕರ್ನಾಟಕವು ಭಾರತದ ದಕ್ಷಿಣದಲ್ಲಿದ್ದು, ಪರ್ಯಾಯ ದ್ವೀಪದ ಪಶ್ಚಿಮ ಮಧ್ಯಭಾಗದಲ್ಲಿದೆ. ಇದು 110–310 ಮತ್ತು 180–450 ಉತ್ತರ ಅಕ್ಷಾಂಶಗಳು ಹಾಗೂ 740–120 ಮತ್ತು 780–400, ಪೂರ್ವ ರೇಖಾಂಶಗಳ ನಡುವೆ ವಿಸ್ತರಿಸಿದೆ.

ಉತ್ತರದ ತುದಿಯಾದ ಬೀದರ್ ಜಿಲ್ಲೆಯ ಔರಾದ್ ತಾಲೂಕಿನಿಂದ ದಕ್ಷಿಣದ ತುದಿಯಾದ ಚಾಮರಾಜನಗರ ಜಿಲ್ಲೆಯವರೆಗೆ ಒಟ್ಟು 750 ಕಿ.ಮೀ ಉದ್ದವಾಗಿದೆ. ಪಶ್ಚಿಮದಿಂದ ಪೂರ್ವಕ್ಕೂ 400 ಕಿ.ಮೀ.ಗಳಷ್ಟು ಅಗಲವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಕಾರವಾರವು ಅತ್ಯಂತ ಪಶ್ಚಿಮದಲ್ಲಿದ್ದು, ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕು ಪೂರ್ವ ತುದಿಯಲ್ಲಿದೆ. ಕರ್ನಾಟಕ ರಾಜ್ಯವು ಭೂ ಮತ್ತು ಜಲ ಮೇರೆಗಳೆರಡನ್ನೂ ಒಳಗೊಂಡಿದೆ. ಪಶ್ಚಿಮಕ್ಕೆ ಅರಬ್ಬಿ ಸಮುದ್ರವಿದ್ದು, ಉತ್ತರಕ್ಕೆ ಮಹಾರಾಷ್ಟ್ರ. ಪೂರ್ವಕ್ಕೆ ಆಂಧ್ರಪ್ರದೇಶ, ದಕ್ಷಿಣಕ್ಕೆ ಮತ್ತು ಆಗ್ನೇಯಕ್ಕೆ ತಮಿಳುನಾಡು ಇದ್ದು, ನೈಋತ್ಯಕ್ಕೆ ಕೇರಳ, ವಾಯವ್ಯಕ್ಕೆ ಗೋವಾ ರಾಜ್ಯಗಳು ಮೇರೆಗಳಾಗಿವೆ. ಕರ್ನಾಟಕ ರಾಜ್ಯವು 1,91,791 ಚದರ ಕಿ.ಮೀ. ವಿಸ್ತಾರವಾಗಿದೆ. ವಿಸ್ತೀರ್ಣದಲ್ಲಿ ಭಾರತದ ಎಂಟನೆಯ

ದೊಡ್ಡ ರಾಜ್ಯವಾಗಿದೆ. ಜನಗಣತಿಯ ಪ್ರಕಾರ 6,11,30,704 ಜನಸಂಖ್ಯೆಯನ್ನು ಹೊಂದಿದ್ದು, ಜನಸಂಖ್ಯೆಯಲ್ಲಿ ಒಂಬತ್ತನೇ ಸ್ಥಾನದಲ್ಲಿದೆ. ಕರ್ನಾಟಕದಲ್ಲಿ ಉಷ್ಣವಲಯದ ಮಾನ್ಸೂನ್ ವಾಯುಗುಣವಿದೆ. ಅತಿ ಶಾಖ ಮತ್ತು ತೇವಾಂಶವುಳ್ಳ ಬೇಸಿಗೆ ಹಾಗೂ ತಂಪಾದ ಶುಷ್ಕ ಚಳಿಗಾಲವಿರುವ ವಾಯುಗುಣವಿದೆ. ಕರ್ನಾಟಕದ ವಾಯುಗುಣದಲ್ಲಿ ವೈವಿಧ್ಯತೆಯಿದೆ, ಹೀಗಾಗಿ ವಾರ್ಷಿಕ ಉಷ್ಣಾಂಶ ಮತ್ತು ಮಳೆಯ ಹಂಚಿಕೆಯೂ ರಾಜ್ಯಾದ್ಯಂತ ಒಂದೇ ರೀತಿಯಾಗಿಲ್ಲ.

ಕೃಷಿ ಅಭಿವೃದ್ಧಿಗೆ ಭೂಮಿಯ ಮೇಲಿನ ಫಲವತ್ತಾದ ಮಣ್ಣುಗಳೇ ಆಧಾರ. ಕರ್ನಾಟಕದ ಮಣ್ಣುಗಳು ವೈವಿಧ್ಯತೆಯಿಂದ ಕೂಡಿವೆ. ಅವುಗಳನ್ನು ಈ ರೀತಿಯಾಗಿ ವಿಂಗಡಿಸಲಾಗಿದೆ. 1. ಕೆಂಪುಮಣ್ಣು 2. ಕಪ್ಪುಮಣ್ಣು, 3. ಜಂಬಿಟ್ಟಿಗೆ ಮಣ್ಣು ಮತ್ತು 4. ಕರಾವಳಿಯ ಮೆಕ್ಕಲು ಮಣ್ಣು. ಕರ್ನಾಟಕದ ಪುರಾತನ ಮೂಲವೃತ್ತಿಗಳಲ್ಲಿ ವ್ಯವಸಾಯವೂ ಒಂದು. ಇದು ಮುಖ್ಯ ಜೀವನಾಧಾರಿತ ವೃತ್ತಿ.[3] ಇದು ನಮ್ಮ ದೇಶದ ಆರ್ಥಿಕತೆಯ ಬೆನ್ನಲಬು. ದೇಶದ ಆರ್ಥಿಕಾಭಿವೃದ್ಧಿಯು ವ್ಯವಸಾಯವನ್ನಾಧರಿಸಿದೆ. ಜೀವನ ನಡೆಸಲು ಉದ್ಯೋಗವನ್ನು ನೀಡಿದೆ. ಕೃಷಿಯು ರಾಜ್ಯದಲ್ಲಿ ವಿದೇಶಿ ವಿನಿಮಯವನ್ನು ಗಳಿಸಿಕೊಡುತ್ತದೆ. ಕಾಫಿ, ರೇಷ್ಮೆ, ಸಾಂಬಾರ ಪದಾರ್ಥಗಳು, ತಂಬಾಕು, ಹತ್ತಿ ಮುಂತಾದವುಗಳು ರಫ್ತಾಗುವ ಕೃಷಿ ಉತ್ಪನ್ನಗಳು. ಕರ್ನಾಟಕದಲ್ಲಿ ವ್ಯವಸಾಯದ ವಿಧಗಳು. ಭೂ ಹಿಡುವಳಿಯ ಜೊತೆಗೆ, ಫಲವತ್ತತೆ, ನೀರಿನ ಲಭ್ಯತೆ, ಮಳೆಯ ಪ್ರಮಾಣ, ವಾಯುಗುಣ, ಭೂಸ್ವರೂಪ, ಮಾರುಕಟ್ಟೆ ಇವುಗಳಿಗನುಗುಣವಾಗಿ ವಿವಿಧ ಬೆಳೆಗಳನ್ನು ಬೆಳೆಯಲಾಗುತ್ತದೆ. ಇವುಗಳನ್ನು ಅನುಸರಿಸಿ, ವ್ಯವಸಾಯದ ವಿಧಗಳನ್ನು ವಿಂಗಡಿಸಲಾಗಿದೆ. ಜೀವನಾಧಾರ ಬೇಸಾಯ, ನೀರಾವರಿ ಬೇಸಾಯ, ಒಣ ಬೇಸಾಯ, ಮಿಶ್ರ ಬೇಸಾಯ, ಸ್ಥಳಾಂತರ ಬೇಸಾಯ, ವಾಣಿಜ್ಯ ಬೇಸಾಯ, ನೆಡುತೋಟ ಬೇಸಾಯ ಇತ್ಯಾದಿಗಳನ್ನು ಒಳಗೊಂಡಿದೆ. ಕರ್ನಾಟಕದ ಮುಖ್ಯ ಬೆಳೆಗಳು–ಆಹಾರ ಬೆಳೆಗಳು ಭತ್ತ, ರಾಗಿ, ಮೆಕ್ಕೆ ಜೋಳ, ದ್ವಿದಳ ಧಾನ್ಯ, ತೃಣಧಾನ್ಯಗಳು ಇತ್ಯಾದಿ. ವಾಣಿಜ್ಯ ಬೆಳೆಗಳು–ಹತ್ತಿ, ತಂಬಾಕು, ಕಬ್ಬು, ಹಿಪ್ಪುನೇರಳೆ ಇತ್ಯಾದಿ. ಎಣ್ಣೆ ಕಾಳುಗಳು, ಶೇಂಗಾ, ಎಳ್ಳು, ಹುಚ್ಚೆಳ್ಳು, ಸೂರ್ಯಕಾಂತಿ ಇತ್ಯಾದಿ. ನೆಡುತೋಟದ ಬೆಳೆಗಳು–ಕಾಫಿ, ತೆಂಗು, ಅಡಿಕೆ, ರಬ್ಬರ್, ಬಾಳೆ ಇತ್ಯಾದಿ. ಅಲ್ಲದೆ ಕರ್ನಾಟಕದಲ್ಲಿ ವಿವಿಧ ತೋಟಗಾರಿಕೆ ಮತ್ತು ಪುಷ್ಪ ಬೆಳೆಗಳನ್ನೂ ಸಹ ಬೆಳೆಯಲಾಗುತ್ತದೆ.

## ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಚಯ

ಅಧ್ಯಯನ ಕ್ಷೇತ್ರದ ವಿಷಯಕ್ಕೆ ಸಂಬಂಧಿಸಿದ ಲಕ್ಷಣಗಳು, ಕ್ಷೇತ್ರದ ಲಕ್ಷಣಗಳನ್ನು ವಿವಿಧ ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯದು ಭೌಗೋಳಿಕತೆ, ಎರಡನೆಯದು

ವಾಯುಗುಣ, ಮೂರನೆಯದು ವ್ಯವಸಾಯ ಮಾದರಿ, ನಾಲ್ಕನೆಯದು ನದಿಗಳು, ಐದನೆಯದು ನೈಸರ್ಗಿಕ ಸಂಪನ್ಮೂಲಗಳು ಮುಂತಾದವುಗಳ ಪರಿಚಯವನ್ನು ಮಾಡಲಾಗಿದೆ. ಬಳ್ಳಾರಿ ಜಿಲ್ಲೆಯು ರಾಜ್ಯದ ದಕ್ಷಿಣ ಭಾಗದಲ್ಲಿದ್ದು, ಒಣಭೂಮಿಯನ್ನು ಹೊಂದಿದ್ದು, ನೀರಾವರಿಯ ಮೂಲಗಳು, ತುಂಗಭದ್ರಾ ನದಿಯು ಕೃಷಿ ಮೂಲವಾಗಿದ್ದು, ಕೃಷಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿದೆ, ಅಲ್ಲದೆ ಹಗರಿ ಮತ್ತು ಚಿಕ್ಕಹಗರಿಗಳು ನೀರಾವರಿಯ ವ್ಯವಸ್ಥೆಯನ್ನು ಒದಗಿಸುತ್ತಿವೆ. ಜಿಲ್ಲೆಯಲ್ಲಿ 7 ತಾಲೂಕುಗಳಿವೆ. ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಸಂಡೂರು, ಹೊಸಪೇಟೆ ಮತ್ತು ಹೂವಿನಹಡಗಲಿ ತಾಲೂಕುಗಳು ಕೆಂಪುಮಿಶ್ರಿತ ಮಣ್ಣನ್ನು ಹೊಂದಿದ್ದು, ಈ ಭಾಗದ ಭೂಮಿಗಳು ತೋಟಗಾರಿಕೆ ಬೆಳೆಗಳಿಗೆ ಯೋಗ್ಯವಾಗಿವೆ. ಈ ಭಾಗದ ರೈತರು ತೋಟಗಾರಿಕೆ ಬೆಳೆಗಳಡಿಯಲ್ಲಿ ಬಾಳೆ, ದಾಳಿಂಬೆ, ಮಾವು, ಮಲ್ಲಿಗೆ, ಈರುಳ್ಳಿ ಅಲ್ಲದೆ ಕೆಲವು ತರಕಾರಿ ಬೆಳೆಗಳನ್ನು ಬೆಳೆಯುತ್ತಿದ್ದಾರೆ.[4] ಹಾಗೆಯೇ ಬಳ್ಳಾರಿ ಮತ್ತು ಸಿರುಗುಪ್ಪ ತಾಲೂಕುಗಳು ಕಪ್ಪುಮಿಶ್ರಿತ ಮಣ್ಣನ್ನು ಹೊಂದಿದ್ದು, ಹೆಚ್ಚಾಗಿ ಮೆಣಸಿನ ಕಾಯಿ ಬೆಳೆ, ಅಂಜೂರ ಹಣ್ಣು, ದಾಳಿಂಬೆ, ಮಾವು ಸೇರಿದಂತೆ ಅನೇಕ ತರಕಾರಿ ಬೆಳೆಗಳನ್ನು ಬೆಳೆಯುತ್ತಿದ್ದಾರೆ. 2013ರಲ್ಲಿ ಒಟ್ಟಾರೆ ಜಿಲ್ಲೆಯಲ್ಲಿ ಉತ್ಪಾದಿಸುತ್ತಿರುವ ತೋಟಗಾರಿಕೆ ಬೆಳೆಗಳ ವಿವರ ಕೆಳಗಿನ ಕೊಷ್ಟಕ–1ರಲ್ಲಿದೆ, ತೋಟಗಾರಿಕೆ ಬೆಳೆಗಳು 40,271 ಎಕರೆ ಭೂಮಿಗಳಲ್ಲಿ ಬೆಳೆಯುತ್ತಿದ್ದು ಒಟ್ಟು ಉತ್ಪಾದನೆಯು 3,76,953 ಟನ್‌ಗಳಷ್ಟಿದೆ. ಉತ್ಪಾದಿಸುತ್ತಿರುವ ಬೆಳೆಗಳಲ್ಲಿ ಹಣ್ಣುಗಳು 9,480 ಎಕರೆಗಳಲ್ಲಿ ಉತ್ಪಾದನೆಯೂ 1,93,059, ತರಕಾರಿಗಳು 9,999 ಎಕರೆಗಳಲ್ಲಿ ಉತ್ಪಾದನೆಯೂ 1,47,216, ಮಸಾಲೆ ಪದಾರ್ಥಗಳು 15,256 ಎಕರೆಗಳಲ್ಲಿ ಉತ್ಪಾದನೆಯು 28,801, ಪ್ಲ್ಯಾಂಟೇಶನ್ 2989 ಎಕರೆಗಳಲ್ಲಿ ಉತ್ಪಾದನೆಯು 579 ಆಗಿದೆ. ವಾಣಿಜ್ಯ ಹೂವುಗಳು 1,832 ಎಕರೆಗಳಲ್ಲಿ ಉತ್ಪಾದನೆಯೂ 7,069, ಔಷಧೀಯ ಸಸ್ಯಗಳು 715 ಎಕರೆಗಳಲ್ಲಿ ಉತ್ಪಾದನೆಯು 229 ಟನ್‌ಗಳಷ್ಟಿದೆ ಮತ್ತು ಅರೊಮ್ಯಾಟಿಕ್ ಪ್ಲ್ಯಾಂಟ್ಸ್‌ಗಳ ಉತ್ಪಾದನೆಯು ಜಿಲ್ಲೆಯಲ್ಲಿ ಉತ್ಪಾದಿಸುತ್ತಿಲ್ಲ.

ಕೋಷ್ಟಕ-1

ಬಳ್ಳಾರಿ ಜಿಲ್ಲೆಯಲ್ಲಿ ಬೆಳೆಯುವ ತೋಟಗಾರಿಕೆ ಬೆಳೆಗಳ ವಿವರಗಳು

(ಭೂಮಿ ಎಕರೆಗಳಲ್ಲಿ ಮತ್ತು ಉತ್ಪಾದನೆ ಟನ್‌ಗಳಲ್ಲಿ)

| ತೋಟಗಾರಿಕೆ ಬೆಳೆಗಳು | ಒಟ್ಟು ಉತ್ಪಾದನೆಯ ಭೂಮಿ | ಒಟ್ಟು ಉತ್ಪಾದನೆ |
|---|---|---|
| ಹಣ್ಣುಗಳು | 9480 | 193059 |
| ತರಕಾರಿಗಳು | 9999 | 147216 |
| ಮಸಾಲೆ ಪದಾರ್ಥಗಳು | 15256 | 28801 |
| ಪ್ಲ್ಯಾಂಟೇಶನ್ | 2989 | 579 |
| ವಾಣಿಜ್ಯ ಹೂವುಗಳು | 1832 | 7069 |
| ಔಷಧೀಯ ಸಸ್ಯಗಳು | 715 | 229 |
| ಅರೊಮ್ಯಾಟಿಕ್ ಪ್ಲ್ಯಾಂಟ್ಸ್ | ಇರುವುದಿಲ್ಲ | ಇರುವುದಿಲ್ಲ |
| ಒಟ್ಟು | 40271 | 376953 |

**ಮಾಹಿತಿ ಮೂಲ:** ಕರ್ನಾಟಕದ ತೋಟಗಾರಿಕೆ ಇಲಾಖೆಯ ಅಂಕಿ-ಅಂಶಗಳು 2012-2013.

## ಸಂಡೂರು ಕ್ಷೇತ್ರದ ಭೌಗೋಳಿಕ ಪರಿಚಯ

ಸಂಡೂರು ತಾಲೂಕು ಬಳ್ಳಾರಿ ಜಿಲ್ಲೆಯ ಮಲೆನಾಡು ಎಂದೇ ಹೆಸರಾಗಿದೆ. ಸಂಡೂರು ಬಳ್ಳಾರಿ ಜಿಲ್ಲೆಯ ಪುಟ್ಟ ಕಾಶ್ಮೀರವೇ ಆಗಿದೆ. ಬೆಟ್ಟ ಗುಡ್ಡಗಳಿಂದಾವೃತವಾದ ಸುಂದರ ನಾಡು ಸಂಡೂರು. ಕಬ್ಬಿಣದ ಅದಿರಿನ ನಿಕ್ಷೇಪಗಳಿಂದ ಮತ್ತು ಪ್ರಕೃತಿ ಸೌಂದರ್ಯದಿಂದ ಜಿಲ್ಲೆಯಲ್ಲಿ ಪ್ರಮುಖ ಸ್ಥಾನ ಪಡೆಯುತ್ತದೆ. ಈ ಪ್ರಕೃತಿ ಸೌಂದರ್ಯದಿಂದ ಜಿಲ್ಲೆಯಲ್ಲಿ ಅಲ್ಲದೆ ಕರ್ನಾಟಕ ರಾಜ್ಯದಲ್ಲಿಯೇ ವಿಶೇಷತೆಯನ್ನು ಪಡೆದಿದೆ. ಪೌರಾಣಿಕ-ಐತಿಹಾಸಿಕ ಮಹತ್ವಗಳಿಂದಲೂ ಸಂಡೂರು ಸ್ಥಾನಿಕ ಮೌಲ್ಯಗಳನ್ನು ಹೆಚ್ಚಿಸಿಕೊಂಡಿದೆ.[5] ವಾಯವ್ಯ ಭಾಗಕ್ಕೆ ವೆಂಕಟಗಿರಿ ಮತ್ತು ಹೊಸಪೇಟೆ ಇದ್ದು, 28 ಕಿ.ಮೀ. ದೂರವನ್ನು ಹೊಂದಿದೆ. ದಕ್ಷಿಣಕ್ಕೆ ಓಬಳಗಂಡಿ ಮತ್ತು ಕೂಡ್ಲಿಗಿಯ 27 ಕಿ.ಮೀ ದೂರವನ್ನು ಹೊಂದಿದೆ. ಉತ್ತರಕ್ಕೆ ತಾರಾನಗರ ಮತ್ತು ಬಳ್ಳಾರಿಯೂ 60 ಕಿ.ಮೀ ದೂರವನ್ನು ಹೊಂದಿದೆ. ಸಂಡೂರಿನ ಪೂರ್ವಕ್ಕೆ 763230 ರೇಖಾಂಶವನ್ನು ಹೊಂದಿದ್ದು, ಉತ್ತರ ರೇಖಾಂಶದ ಮೇಲ್ಮೈಯ ವಿಸ್ತರಣೆಯೂ ಸಮುದ್ರ ಮಟ್ಟಕ್ಕಿಂತ 5637 ಮೀಟರ್ ಎತ್ತರದಲ್ಲಿದೆ. ಒಟ್ಟಾರೆ ಸಂಡೂರು ಎತ್ತರದ ಪರ್ವತ ಶ್ರೇಣಿಗಳ ಮಧ್ಯಭಾಗದಲ್ಲಿ ನೋಡಲು ತುಂಬಾ ಮನೋಹರವಾಗಿದೆ.

ಸಂಡೂರು ಸ್ಕಂದ ಪುರಾಣದಲ್ಲಿ ಉಲ್ಲೇಖಿಸಿರುವಂತೆ ಸ್ಕಂದನಿರುವ ಊರಾಗಿರುವುದರಿಂದ ಸ್ಕಂದಪುರವೆಂದೆನಿಸಿಕೊಂಡಿದೆ. ಇದರ ಜೊತೆಗೆ "ಸುಂದರ"ವೆಂಬ ಹೆಸರು ಪ್ರಾಚೀನ ಸರಣಿಯಲ್ಲಿ ಬರುತ್ತದೆ. ಆದರೆ "ಸಂಡೂರು" ಶಬ್ದದ ಮೂಲರೂಪವು "ಸಂದೂರು" ಆಗಿದ್ದು, ಬೆಟ್ಟ ಗುಡ್ಡಗಳ ಸಂದುಗಳಲ್ಲಿರುವ ಊರು ಎಂಬ ಕಾರಣದಿಂದಲೇ ಈ ಹೆಸರು ಬಂದಿದೆ. ಸಂದು+ಊರು=ಸಂದೂರು-ಸಂಡೂರು ಆಗಿ ಪರಿಣಮಿಸಿದೆ. ಸಂದೂರು ಜನರ ಬಾಯಿಯಲ್ಲಿ ಹೇಳುತ್ತಾ ಹೇಳುತ್ತಾ ಸಂಡೂರು ಆಗಿದೆ. ಮೆಕಲಿನ್ ಭೂಗೋಳಶಾಸ್ತ್ರಜ್ಞನ ಹೇಳಿಕೆಯ ಪ್ರಕಾರ "ಸಂಡೂರು" ಸಂದು, ಕಂಡಿ, ಗಂಡಿ, ಕಣಿವೆ ಊರು ಎಂದು ತಿಳಿದುಬರುತ್ತದೆ.

ಸಂಡೂರು ಬಳ್ಳಾರಿ ಜಿಲ್ಲೆಯ ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿದ್ದು, ಉತ್ತಮ ನೆಲ ಜಲವನ್ನು ಹೊಂದಿದೆ. ಇಲ್ಲಿಯ ಗುಡ್ಡಗಳು ಈ ಜಿಲ್ಲೆಯ ಭೌತಿಕ ಲಕ್ಷಣಗಳನ್ನು ಎತ್ತಿಹಿಡಿಯುತ್ತವೆ. 1889ರಲ್ಲಿ ಬ್ರಿಟಿಷ್ ಅಧಿಕಾರಿ ಬ್ರೂಸ್‌ಫೂಟ್ ಸಂಡೂರನ್ನು ಈ ರೀತಿ ವರ್ಣಿಸಿದ್ದಾರೆ "ಅಗಲ ಕಿರಿದಾದ ಅತಿ ಉದ್ದವಿರುವ ಕಣಿವೆಯಲ್ಲಿ, ಎತ್ತರದ ಬೆಟ್ಟಗಳು ವಾಯವ್ಯದಿಂದ ಆಗ್ನೇಯ ದಿಕ್ಕಿನವರೆಗೆ ಸಮಾನಾಂತರವಾಗಿವೆ. ಅವುಗಳಿಗೆ ಲಂಬವಾಗಿ ಒಂದು ಸಣ್ಣ ನದಿ ನಾರಿಹಳ್ಳ, ಮಧ್ಯದಲ್ಲಿ ಒಂದು ಊರು ಎಂದು ಸಂಡೂರನ್ನು ಪರಿಚಯಿಸಿದ್ದಾರೆ.

ಸಂಡೂರಿನ ಜನಸಂಖ್ಯೆಯು ಕೋಷ್ಟಕ 2ರಲ್ಲಿ ತಾಲೂಕಿನಲ್ಲಿ ಒಟ್ಟು ಹೆಣ್ಣುಮಕ್ಕಳ ಸಂಖ್ಯೆಯು 1,26,129, ಗಂಡು 1,34,034. ಒಟ್ಟು ನಗರದ ಜನಸಂಖ್ಯೆ 79116 ಇರುತ್ತದೆ. ಈ ತಾಲೂಕಿನಲ್ಲಿ ಅತಿ ಹೆಚ್ಚು ಮಳೆ ಬೀಳುತ್ತಿದ್ದು, ಹೆಚ್ಚಾಗಿ ರೈತರು ಬಾಳೆ, ಈರುಳ್ಳಿ, ಮೆಕ್ಕೆಜೋಳ ಮತ್ತು ತರಕಾರಿಗಳನ್ನು ಬೆಳೆಯುತ್ತಾರೆ. ಇಲ್ಲಿನ ಭೂಮಿಯು ಹೆಚ್ಚಿನ ಫಲವತ್ತತೆಯನ್ನು ಹೊಂದಿದ್ದು, ತಾಲೂಕಿನಲ್ಲಿ ಕೃಷಿ ಭೂಮಿಯು ಬಹುತೇಕ ಕೆಂಪುಮಣ್ಣಿನಿಂದ ಕೂಡಿದೆ. ಬಳ್ಳಾರಿ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವು ಒಟ್ಟು 8450 ಚ.ಕಿ. [2001ರ ಸೆನ್ಸಸ್] ಆಗಿದ್ದು, ಜಿಲ್ಲೆಯು ಒಟ್ಟು 7 ತಾಲೂಕುಗಳನ್ನು ಒಳಗೊಂಡಿದೆ.[6] ಬಳ್ಳಾರಿ ಜಿಲ್ಲೆಯು ಹೇರಳ ಪ್ರಕೃತಿ ಸಂಪತ್ತನ್ನು ಹೊಂದಿದ್ದು, ಈ ಜಿಲ್ಲೆಯು ಹೈದರಾಬಾದ್ ಕರ್ನಾಟಕ ಭಾಗಕ್ಕೆ ಸೇರಿದ್ದು ಜನ ಸಂಖ್ಯೆಯು, ಬಳ್ಳಾರಿಯಲ್ಲಿ 3,97,353 ಗಂಡಸರು, 3,91,119 ಹೆಂಗಸರು ಇದ್ದಾರೆ. ಹಾಗೆಯೇ ಒಟ್ಟಾರೆ ಬಳ್ಳಾರಿಯಲ್ಲಿರುವ ತಾಲೂಕುಗಳಲ್ಲಿನ ಜನಸಂಖ್ಯೆಯು ಕೋಷ್ಟಕ-2ರಲ್ಲಿ ಈ ಕೆಳಗಿನಂತಿದೆ.

ಕೊಷ್ಟಕ–2

ಬಳ್ಳಾರಿ ಜಿಲ್ಲೆಯಲ್ಲಿಯ ಒಟ್ಟು ಜನಸಂಖ್ಯೆಯ ವಿವರಗಳು

| ಕ್ರಸಂ | ತಾಲೂಕುಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| 1. | ಹಡಗಲಿ | 1,01,505 | 1,01,901 | 2,03,406 |
| 2. | ಹಗರಿಬೊಮ್ಮನ ಹಳ್ಳಿ | 1,00,286 | 97,365 | 1,97,651 |
| 3. | ಹೊಸಪೇಟೆ | 2,33,938 | 2,33,947 | 4,67,885 |
| 4. | ಕೂಡ್ಲಿಗಿ | 1,64,421 | 1,57,774 | 3,22,195 |
| 5. | ಸಂಡೂರು | 1,39,791 | 1,30,520 | 2,70,311 |
| 6. | ಸಿರುಗುಪ್ಪ | 1,39,508 | 1,39,355 | 2,78,863 |

**ಮಾಹಿತಿ ಮೂಲ:** 2011/2012ರ ಜನಗಣತಿ ಪ್ರಕಾರ.

ಮೇಲಿನ ಕೋಷ್ಟಕ–2ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಪುರುಷರು–12,80,402, ಒಟ್ಟು ಮಹಿಳೆಯರು–12,51,981 ಇದ್ದು, ಗಂಡಸರು ಮತ್ತು ಹೆಂಗಸರ ಒಟ್ಟಾರೆ ಜನಸಂಖ್ಯೆಯು 25,32,383 ಆಗಿರುತ್ತದೆ. ಜಿಲ್ಲೆಯಲ್ಲಿ ಅಕ್ಷರಸ್ಥರು ಒಟ್ಟು 6,18,472 ಇದ್ದು, ಅದರಲ್ಲಿ 5,13,903 ಗಂಡಸರು, 3,53,855 ಹೆಂಗಸರು ಇದ್ದಾರೆ. ಕೃಷಿ ಸಾಗುವಳಿ ಮಾಡುವ ಜನತೆಯು ಒಟ್ಟು ಜಿಲ್ಲೆಯಲ್ಲಿ 2,36,864 ಗ್ರಾಮೀಣ ಪ್ರದೇಶದಲ್ಲಿದ್ದರೆ, ನಗರ ಪ್ರದೇಶದಲ್ಲಿ 14,343 ಇದ್ದು, ಅದರಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ 3,24,759 ಗ್ರಾಮೀಣ ಪ್ರದೇಶದಲ್ಲಿದ್ದರೆ, ನಗರ ಪ್ರದೇಶದಲ್ಲಿ 36,674ರಷ್ಟು ಇದ್ದಾರೆ..

ಬಳ್ಳಾರಿ ಜಿಲ್ಲೆಯಲ್ಲಿ ಮಳೆಯ ಪ್ರಮಾಣವನ್ನು ಗಮನಿಸಿದಾಗ ಮೊದಲಿಗೆ ಮಳೆ ಮಾಪನ ಕೇಂದ್ರಗಳು ಜಿಲ್ಲೆಯಲ್ಲಿ 9 ಇದ್ದು, ಎಲ್ಲವೂ ಕಾರ್ಯ ನಿರ್ವಹಿಸುತ್ತಿವೆ.[7] ಒಟ್ಟು ಜಿಲ್ಲೆಯಲ್ಲಿ ಮಳೆ ಮಾಪನ ಕೇಂದ್ರಗಳು 44 ಇದ್ದು, ಅದರಲ್ಲಿ 41 ಕಾರ್ಯ ನಿರ್ವಹಿಸುತ್ತವೆ. ಮೂರು (3) ಮಳೆ ಮಾಪನ ಕೇಂದ್ರಗಳು ದುರಸ್ತಿಯಲ್ಲಿವೆ. ಈ ಜಿಲ್ಲೆಯಲ್ಲಿ ವಾರ್ಷಿಕ ವಾಡಿಕೆ ಮಳೆಯು [annual normal rainfall] 1941ರಿಂದ 1990ರವರೆಗೆ 43 ಮಳೆ ದಿನಗಳಾಗಿದ್ದು. ವಾಡಿಕೆ ಮಳೆ–Normal Rainfall-(626.6) 4200.8 ಆಗಿರುತ್ತದೆ. 2000–2011 ರವರೆಗೆ ವಾರ್ಷಿಕ ವಾಸ್ತವಿಕ ಮಳೆ [ಮಿ.ಮೀ.] ನೋಡಿದಾಗ 4282.0 to 3356.6 [ಮಿ.ಮೀ.] ಆಗಿದೆ.

ಬಳ್ಳಾರಿ ಜಿಲ್ಲೆಯಭೂ ಹಿಡುವಳಿದಾರರ ವಿವರ, ಸಾಗುವಳಿ ಮಾಡುತ್ತಿರುವ ಭೂಮಿಯ ವಿವರ ಮತ್ತು ಸಾಗುವಳಿಗೆ ಲಭ್ಯವಿಲ್ಲದಿರುವ ಭೂಮಿ ಈ ಕೆಳಗಿನಂತಿದೆ. 2011–2012ರ

ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಭೌಗೋಳಿಕ ವಿಸ್ತೀರ್ಣವು 1,69,027, ಸಾಗುವಳಿ ಲಭ್ಯವಿಲ್ಲದಿರುವ ಭೂಮಿಯಲ್ಲಿ ವ್ಯವಸಾಯೇತರ ಭೂಮಿಯು 20864 ಎಕರೆ ಆಗಿದ್ದು, ಬಂಜರುಭೂಮಿಯು 8483 ಎಕರೆ ಇರುತ್ತದೆ.[8] ಸಾಗುವಳಿಗೆ ಯೋಗ್ಯವಾದ ಬಂಜರು ಭೂಮಿಯು 1273 ಆಗಿದ್ದು ಖಾಯಂ ಗೋಮಾಳವು 154 ಇದ್ದು, ವೃಕ್ಷ ಮತ್ತು ತೋಪುಗಳು 211 ಇರುತ್ತವೆ. ವ್ಯವಸಾಯಕ್ಕೆ ಬಳಸುತ್ತಿರುವ ಭೂಮಿಯು 2011-12ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಬೀಳು ಬಿಟ್ಟಿರುವ ಭೂಮಿಯು 91048(ಚಾಲ್ತಿ) ಇತರೆ-13374 ಇರುತ್ತದೆ. ಅದೇ ವರ್ಷದಲ್ಲಿ ಬಿತ್ತನೆಯಾದ ಪ್ರದೇಶ ನಿವ್ವಳ-414072 ಮತ್ತು ಒಂದಕ್ಕಿಂತ ಹೆಚ್ಚು-117944 ಆಗಿದ್ದು ಒಟ್ಟಾರೆ-532016 ಆಗಿದೆ.

ಜಿಲ್ಲೆಯಲ್ಲಿ ಕೃಷಿ ಹಿಡುವಳಿದಾರರ ಮಾಹಿತಿಯ ಕುರಿತು ನೋಡುವುದಾದರೆ ಅದರ ವಿವರವು ಈ ಕೆಳಗಿನಂತೆ ಇದೆ

**1. ಕೃಷಿ ಭೂ ಹಿಡುವಳಿದಾರರು ಮತ್ತು ಕೃಷಿ ಹಿಡುವಳಿದಾರರ ವಿಸ್ತೀರ್ಣ**

ಅತಿ ಸಣ್ಣ ಭೂ ಹಿಡುವಳಿದಾರರು(ಪರಿಶಿಷ್ಟ ಜಾತಿ) ಒಂದು ಎಕರೆಗಿಂತ ಕಡಿಮೆ ಭೂಮಿ. ಬಳ್ಳಾರಿ ಜಿಲ್ಲೆಯಲ್ಲಿ ಅತಿ ಸಣ್ಣ ಭೂ ಹಿಡುವಳಿದಾರರ ಸಂಖ್ಯೆ 2011-12ರ ಸಾಲಿನಲ್ಲಿ ಪುರುಷರು-11944 ಮತ್ತು ಮಹಿಳೆಯರು 4387 ಇದ್ದು, ವಿಸ್ತೀರ್ಣದಲ್ಲಿ ಸರಾಸರಿ ಪುರುಷರು-6423 ಮತ್ತು ಮಹಿಳೆಯರು-2553 ಇರುತ್ತಾರೆ. ಅತಿ ಸಣ್ಣ ಭೂ ಹಿಡುವಳಿದಾರರು (ಪರಿಶಿಷ್ಟ ಪಂಗಡ) ಒಂದು ಎಕರೆಗಿಂತ ಕಡಿಮೆ ಭೂಮಿ. ಬಳ್ಳಾರಿ ಜಿಲ್ಲೆಯಲ್ಲಿ(ಪ.ಪಂ.) ಅತಿ ಸಣ್ಣ ಭೂ ಹಿಡುವಳಿದಾರರ ಸಂಖ್ಯೆಯು 2011-12ರ ಸಾಲಿನಲ್ಲಿ ಪುರುಷರು-13689 ಮತ್ತು ಮಹಿಳೆಯರು 4539 ಇದ್ದು, ವಿಸ್ತೀರ್ಣದಲ್ಲಿ ಸರಾಸರಿ ಪುರಷರು-6897 ಮತ್ತು ಮಹಿಳೆಯರು-2396 ಇದ್ದಾರೆ. ಅತಿ ಸಣ್ಣ ಭೂಹಿಡುವಳಿದಾರ(ಇತರೆ others) ಇವರ ಸಂಖ್ಯೆಯೂ ಪುರುಷರದು 51653 ಹಾಗೂ ಮಹಿಳೆಯರದು 18561 ಆಗಿದ್ದು, ವಿಸ್ತೀರ್ಣದಲ್ಲಿ ಪುರುಷರದು 30713 ಮತ್ತು ಮಹಿಳೆಯರದು 9565 ಇರುತ್ತದೆ. ಒಟ್ಟಾರೆ ಅತಿ ಸಣ್ಣ ಭೂ ಹಿಡುವಳಿದಾರರ ಸಂಖ್ಯೆಯು 2011-12 ಸಾಲಿನಲ್ಲಿ ಪುರುಷರದು 77286, ಮಹಿಳೆಯರದು -27487 ಮತ್ತು ಸಂಘ ಸಂಸ್ಥೆಗಳು-273 ಆಗಿರುತ್ತದೆ. ವಿಸ್ತೀರ್ಣದಲ್ಲಿ ಪುರುಷರು-44033, ಮಹಿಳೆಯರು-14515 ಮತ್ತು ಸಂಘ ಸಂಸ್ಥೆಗಳದ್ದು 131.70 ಆಗಿರುತ್ತದೆ.

ಕೋಷ್ಟಕ–3

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಕೃಷಿ ನಿರತ ರೈತರ ಮಾಹಿತಿ ವಿವರಗಳು

| ಕ್ರಸಂ | ರೈತರ ವಿಧಗಳು | ಸಂಖ್ಯೆ | | | ವಿಸ್ತೀರ್ಣ | | |
|---|---|---|---|---|---|---|---|
| | | ಪುರುಷರು | ಮಹಿಳೆಯರು | ಸಂಘಸಂಸ್ಥೆ | ಪುರುಷರು | ಮಹಿಳೆಯರು | ಸಂಘಸಂಸ್ಥೆ |
| 1. | ದೊಡ್ಡ ಭೂಹಿಡುವಳಿದಾರರು | 3343 | 528 | 91 | 45721 | 7199 | 1757 |
| 2. | ಮಧ್ಯಮ ಭೂ ಹಿಡುವಳಿದಾರರು | 21873 | 4704 | 179 | 125153 | 26410 | 1070 |
| 3. | ಅರೆಮಧ್ಯಮ ಭೂ ಹಿಡುವಳಿ ದಾರರು | 45002 | 11364 | 193 | 122175 | 30657 | 515 |
| 4. | ಸಣ್ಣ ಭೂ ಹಿಡು ವಳಿದಾರರು | 64160 | 18474 | 175 | 9188 | 26304 | 251 |
| | ಒಟ್ಟು | 211667 | 62557 | 911 | 428891 | 104910 | 3725 |

**ಮಾಹಿತಿ ಮೂಲ:** 2010–2011ನೇ ಸಾಲಿನ ಕೃಷಿ ವರದಿ

ಮೇಲಿನ ಕೋಷ್ಟಕ–3ರಲ್ಲಿ ಸಣ್ಣ ಭೂ ಹಿಡುವಳಿದಾರರು ಮತ್ತು ವಿಸ್ತೀರ್ಣ (1–2–hectors)ಗಳನ್ನು ಹೊಂದಿದ್ದು ಸಣ್ಣ ಭೂ ಹಿಡುವಳಿದಾರರಲ್ಲಿ ಪುರುಷರ ಸಂಖ್ಯೆಯು 64160 ಪುರುಷರ ಸರಾಸರಿ ವಿಸ್ತೀರ್ಣವು–9188 ಇದ್ದು, ಮಹಿಳೆಯರ ಸಂಖ್ಯೆಯು–18474 ಮಹಿಳೆಯರ ಸರಾಸರಿ ವಿಸ್ತೀರ್ಣವು–26304 ಆಗಿದ್ದು ಮತ್ತು ಸಂಘ ಸಂಸ್ಥೆಗಳ ಸಂಖ್ಯೆಯೂ–175 ಮತ್ತು ಸರಸಾರಿ ವಿಸ್ತೀರ್ಣವು–251 ಆಗಿರುತ್ತದೆ. ಅರೆಮಧ್ಯಮ ಭೂ ಹಿಡುವಳಿದಾರರು ಮತ್ತು ವಿಸ್ತೀರ್ಣವು(2–4 hectors)ಗಳನ್ನು ಹೊಂದಿದ್ದು ಪುರುಷರ ಸಂಖ್ಯೆ 45002 ಪುರುಷರ ವಿಸ್ತೀರ್ಣವು 122175 ಇದ್ದು, ಮಹಿಳೆಯರ ಸಂಖ್ಯೆಯೂ–11364 ಮಹಿಳೆಯರ ಸರಾಸರಿ ವಿಸ್ತೀರ್ಣವು–30657 ಆಗಿದ್ದು ಮತ್ತು ಸಂಘ ಸಂಸ್ಥೆಗಳ ಸಂಖ್ಯೆಯು–193 ಮತ್ತು ಸರಸಾರಿ ವಿಸ್ತೀರ್ಣವು–515 ಆಗಿರುತ್ತದೆ. ಮಧ್ಯಮ ಭೂ ಹಿಡುವಳಿದಾರರು ಮತ್ತು ವಿಸ್ತೀರ್ಣ(4–10 hectors)ಗಳನ್ನು ಹೊಂದಿದ್ದು ಭೂ ಹಿಡುವಳಿದಾರರಲ್ಲಿ ಪುರುಷರ ಸಂಖ್ಯೆಯು 21873 ಪುರುಷರ ಸರಾಸರಿ ವಿಸ್ತೀರ್ಣವು–125153 ಇದ್ದು, ಮಹಿಳೆಯರ ಸಂಖ್ಯೆಯು 4704 ಮಹಿಳೆಯರ ಸರಾಸರಿ ವಿಸ್ತೀರ್ಣವು–26410 ಆಗಿದ್ದು ಮತ್ತು ಸಂಘ ಸಂಸ್ಥೆಗಳ ಸಂಖ್ಯೆಯೂ–179 ಮತ್ತು

ಸರಾಸರಿ ವಿಸ್ತೀರ್ಣವು –1070 ಆಗಿರುತ್ತದೆ. ದೊಡ್ಡ ಭೂ ಹಿಡುವಳಿದಾರರು ಮತ್ತು ವಿಸ್ತೀರ್ಣ (more than 10 hectors)ಗಳನ್ನು ಹೊಂದಿದ್ದು ಭೂ ಹಿಡುವಳಿದಾರರಲ್ಲಿ ಪುರುಷರ ಸಂಖ್ಯೆ 3343 ಪುರುಷರ ಸರಾಸರಿ ವಿಸ್ತೀರ್ಣ–45721 ಇದ್ದು, ಮಹಿಳೆಯರ ಸಂಖ್ಯೆ 528 ಮಹಿಳೆಯರ ಸರಾಸರಿ ವಿಸ್ತೀರ್ಣವು–7199 ಆಗಿದ್ದು ಮತ್ತು ಸಂಘ ಸಂಸ್ಥೆಗಳ ಸಂಖ್ಯೆ–91 ಮತ್ತು ಸರಾಸರಿ ವಿಸ್ತೀರ್ಣವು–1757 ಆಗಿರುತ್ತದೆ.

ಒಟ್ಟಾರೆ ಬಳ್ಳಾರಿ ಜಿಲ್ಲೆಯಲ್ಲಿ ಪ್ರಸಕ್ತ 2011–12ನೇ ಸಾಲಿನಲ್ಲಿ ಭೂ ಹಿಡುವಳಿದಾರರು ಈ ಕೆಳಗಿನಂತೆ ಇದ್ದಾರೆ, ಮತ್ತು ವಿಸ್ತೀರ್ಣವು ಇಂತಿದೆ. ಭೂ ಹಿಡುವಳಿದಾರರಲ್ಲಿ ಒಟ್ಟು ಪುರುಷರ ಸಂಖ್ಯೆ 211667 ಪುರುಷರ ಸರಾಸರಿ ವಿಸ್ತೀರ್ಣ 428891 ಇದ್ದು, ಮಹಿಳೆಯರ ಸಂಖ್ಯೆ 62557 ಮಹಿಳೆಯರ ಸರಾಸರಿ ವಿಸ್ತೀರ್ಣ–104910 ಆಗಿದ್ದು ಮತ್ತು ಸಂಘ ಸಂಸ್ಥೆಗಳ ಸಂಖ್ಯೆ–911 ಮತ್ತು ಸರಸಾರಿ ವಿಸ್ತೀರ್ಣ–3725 ಆಗಿರುತ್ತದೆ.

ಕೆಳಗಿನ ಕೊಷ್ಟಕ–4ರಲ್ಲಿ ಜಿಲ್ಲೆಯಲ್ಲಿ ಒಟ್ಟು ನೀರಾವರಿ ಮೂಲಗಳು ಯಾವ ರೀತಿಯಾಗಿವೆ ಎನ್ನುವುದನ್ನು ಪರಿಶೀಲಿಸುವುದಾದರೆ, ಈ ಭಾಗದ ರೈತರು ವ್ಯವಸಾಯಕ್ಕಾಗಿ ಹಲವಾರು ನೀರಿನ ಮೂಲಗಳನ್ನು ಆಶ್ರಯಿಸಿದ್ದಾರೆ. ಅದರಲ್ಲಿ ಪ್ರಮುಖವಾಗಿ ಕಾಲುವೆಗಳಿಂದ, ಕೆರೆಗಳಿಂದ, ಬಾವಿಗಳಿಂದ, ಕೊಳವೆಬಾವಿಗಳು ಮತ್ತು ಏತ ನೀರಾವರಿಯಿಂದ ತಮ್ಮ ಹೊಲಗಳಿಗೆ ನೀರಿನ ಪೂರೈಕೆಯನ್ನು ಮಾಡುತ್ತಾರೆ. ಜಿಲ್ಲೆಯಲ್ಲಿ ಕಾಲುವೆಗಳ ಉದ್ದವೂ 456.0 ಇದ್ದು, ಇಟ್ಟು ನೀರಾವರಿ ವಿಸ್ತೀರ್ಣವೂ 135078 ಆಗಿದ್ದು ನಿವ್ವಳ ನೀರಾವರಿ 90766ರಷ್ಟಿದೆ. ಒಟ್ಟು 149 ಕೆರೆಗಳಿದ್ದು, ನೀರಾವರಿ ವಿಸ್ತೀರ್ಣ 1995ರಷ್ಟಿದ್ದು, ನಿವ್ವಳ ನೀರಾವರಿ 1454ರಷ್ಟಿದೆ. ಜಿಲ್ಲೆಯಲ್ಲಿ ಬಾವಿಗಳ ಸಂಖ್ಯೆ 7659 ಇದ್ದು ಒಟ್ಟು ನೀರಾವರಿ ವಿಸ್ತೀರ್ಣ 4165 ಇದ್ದು ನಿವ್ವಳ ನೀರಾವರಿ 3122ರಷ್ಟಿದೆ. ಕೊಳೆವ ಬಾವಿಗಳ ಸಂಖ್ಯೆ 17926 ಆಗಿದ್ದು ಒಟ್ಟು ನೀರಾವರಿಯ ವಿಸ್ತೀರ್ಣ 89856 ಇದ್ದು ನಿವ್ವಳ ನೀರಾವರಿ 60601ರಷ್ಟಿದೆ. ಏತ ನೀರಾವರಿ ಜಿಲ್ಲೆಯಲ್ಲಿ 3597 ಸಂಖ್ಯೆಯಲ್ಲಿದ್ದು ಏತ ನೀರಾವರಿಯಿಂದ 46216ರಷ್ಟು ಭೂವಿಸ್ತೀರ್ಣದಲ್ಲಿ ಕೃಷಿ ಮಾಡುತ್ತಿದ್ದು, ನಿವ್ವಳ ನೀರಾವರಿ 30929ರಷ್ಟಿದೆ.

ಕೋಷ್ಟಕ-4

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಕೃಷಿ ನೀರಾವರಿ ಮೂಲಗಳ ವಿವರಗಳು

| ಕ್ರ ಸಂ. | ನೀರಾವರಿ ಮೂಲಗಳು | ಒಟ್ಟು ನೀರಾವರಿ ಯಾದ ವಿಸ್ತೀರ್ಣ | ನಿವ್ವಳ ನೀರಾವರಿ | ಸಂಖ್ಯೆ/ಉದ್ದ |
|---|---|---|---|---|
| 1. | ಕಾಲುವೆಗಳು(canals)(ಉದ್ದ) | 135078 | 90766 | 456.0ಕಿ.ಮೀ(ಉದ್ದ) |
| 2. | ಕೆರೆಗಳಿಂದ(tanks) | 1995 | 1454 | 149 |
| 3. | ಕೊಳವೆಬಾವಿಗಳು(tube wells) | 89856 | 60601 | 17926 |
| 4. | ಏತ ನೀರಾವರಿ(lift irrigation) | 46216 | 30929 | 3597 |
| 5. | ಬಾವಿಗಳಿಂದ(wells) | 4165 | 3122 | 7659 |

**ಮಾಹಿತಿಯ ಮೂಲ:** 2012–13ನೇ ಸಾಲಿನ ಎ.ಎಸ್.ಆರ್. ವರದಿ(ಆನ್ಯುವಲ್ ಸೀಸನ್ ಮತ್ತು ಕ್ರಾಪ್ ರಿಪೋರ್ಟ್ಸ)

## ಅಧ್ಯಯನಕ್ಕೆ ಆಯ್ದ ಕ್ಷೇತ್ರಗಳ ಪರಿಚಯ(ಗ್ರಾಮಗಳ ಭೌಗೋಳಿಕ ಹಿನ್ನೆಲೆ)

ತಾಲೂಕುಗಳ ಆಯ್ಕೆಯನ್ನು ನಂಜುಂಡಪ್ಪ ವರದಿಯನ್ನು ಆಧರಿಸಿ ಅಂದರೆ ನಂಜುಂಡಪ್ಪ ವರದಿಯಲ್ಲಿ ಗುರಿತಿಸಿರುವ ಒಂದು ಹಿಂದುಳಿದ ತಾಲೂಕು ಮತ್ತು ಒಂದು ಅಭಿವೃದ್ಧಿ ಹೊಂದಿದ ತಾಲೂಕನ್ನು ಆಯ್ದುಕೊಂಡಿರುವೆ. ವರದಿಯಲ್ಲಿಯ ಪ್ರಕಾರ ಅತಿ ಹಿಂದುಳಿದ ತಾಲೂಕುಗಳ ಆಯ್ಕೆಯನ್ನು, ರಾಜ್ಯಗಳ ಸರಾಸರಿಯನ್ನು ಸೂಚಿಸುವ in terms of normalized value as '1' in any indicator/ sectoral index/ composite index development. which taluku its Comprehensive Composite Development Index(CCDI) value '1' ಕ್ಕೆ ಸಮ ಅಥವಾ ಹೆಚ್ಚಾಗಿದ್ದರೆ ಅಂತಹ ತಾಲೂಕನ್ನು ಅಭಿವೃದ್ಧಿ ಹೊಂದಿದ ತಾಲೂಕು ಎಂದು, ಯಾವ ತಾಲೂಕಿನ ಸಿ.ಸಿ.ಡಿ.ಐ. ಯೂ '1' ಕ್ಕಿಂತ ಕಡಿಮೆಯಿರುವುದೋ ಅಂತಹ ತಾಲೂಕುಗಳನ್ನು ಹಿಂದುಳಿದ ತಾಲೂಕುಗಳೆಂದು ವಿಭಾಗಿಸಲಾಗಿದೆ. ಹಾಗೆಯೇ ಹಿಂದುಳಿದ ತಾಲೂಕುಗಳನ್ನು ಮತ್ತೆ ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳನ್ನು ಈ ಕೆಳಗಿನ ಸೂಚ್ಯಂಕಗಳ ಆಧಾರದ ಮೇಲೆ ವಿಂಗಡಿಸಲಾಗಿದೆ.

ಕೆಳಗಿನ ಕೋಷ್ಟಕ-5ರಲ್ಲಿ ಜಿಲ್ಲೆಯಲ್ಲಿ ಅತಿ ಹಿಂದುಳಿದ ತಾಲೂಕುಗಳಾದ ಸಂಡೂರು ಮತ್ತು ಕೂಡ್ಲಿಗಿಯ ವಿವರಣೆಯನ್ನು ನೀಡಿದ್ದಾರೆ. ಮೊದಲನೆಯದಾಗಿ ಯಾವ ತಾಲೂಕಿನ index value 0.89 to 0.99 ಅಂದರೆ '1'ಕ್ಕಿಂತ ಕಡಿಮೆ ಅಂತಹ ತಾಲೂಕುಗಳನ್ನು(backward taluku) ಹಿಂದುಳಿದ ತಾಲೂಕುಗಳೆಂದು, ಎರಡನೆಯದಾಗಿ ತಾಲೂಕಿನ ಸೂಚ್ಯಂಕವು 0.80

ಯಿಂದ 0.88 ಇರುತ್ತದೆಯೋ ಅಂತಹ ತಾಲೂಕುಗಳನ್ನು(more backward taluku) ಅತಿ ಹಿಂದುಳಿದ ತಾಲೂಕುಗಳೆಂದು ಮತ್ತು ಮೂರನೆಯದಾಗಿ ತಾಲೂಕಿನ ಸೂಚ್ಯಂಕವು 0.53 ಯಿಂದ 0.79 ಆಗಿದ್ದಲ್ಲಿ ಅಂತಹ ತಾಲೂಕನ್ನು(most backward taluku) ಬಹುತೇಕ ಹಿಂದುಳಿದ ತಾಲೂಕುಗಳೆಂದು ವಿಂಗಡಿಸಲಾಗಿದೆ. ಈ ಸೂಚ್ಯಂಕದ ಆಧಾರದ ಮೇಲೆ ವರದಿಯಲ್ಲಿ ಒಟ್ಟು 61 ಅಭಿವೃದ್ಧಿ ಹೊಂದಿದ ತಾಲೂಕುಗಳು, 35 ಹಿಂದುಳಿದ ತಾಲೂಕುಗಳು, 40 ಅತಿ ಹಿಂದುಳಿದ ತಾಲೂಕುಗಳು ಮತ್ತು 39 ತಾಲೂಕುಗಳು ಬಹುತೇಕ ಹಿಂದಿಳಿದ ತಾಲೂಕುಗಳೆಂದು ವಿಭಾಗಿಸಲಾಗಿದೆ. ಅವುಗಳನ್ನು ಬಳ್ಳಾರಿ ಜಿಲ್ಲೆಯಲ್ಲಿ ಪ್ರಾದೇಶಿಕವಾಗಿ ಹಿಂದುಳಿದ ತಾಲೂಕುಗಳು ಕಾಂಪ್ರೆಹೆನ್‌ಸೀವ್ ಕಾಂಪೋಸಿಟ್ ಡೆವಲಪ್‌ಮೆಂಟ್ ಇಂಡೆಕ್ಸ್ ಆಧಾರದ ಮೇಲೆ 2001(CCDI):

**ಕೋಷ್ಟಕ–5**

**ಬಳ್ಳಾರಿ ಜಿಲ್ಲೆಯಲ್ಲಿ ಹಿಂದುಳಿದ ತಾಲೂಕುಗಳ ವಿವರಗಳು**

| ಕ್ರ ಸಂ. | ಅತಿ ಹಿಂದುಳಿದ ತಾಲೂಕುಗಳ ಸೂಚ್ಯಂಕದ ಶ್ರೇಣಿಯು 53–059 | ಸೂಚ್ಯಂಕ | ಬಹುತೇಕ ಹಿಂದುಳಿದ ತಾಲೂಕುಗಳ ಸೂಚ್ಯಂಕದ ಶ್ರೇಣಿಯು 080–0.88 | ಸೂಚ್ಯಂಕ | ಹಿಂದುಳಿದ ತಾಲೂಕುಗಳ ಸೂಚ್ಯಂಕದ ಶ್ರೇಣಿಯು 0.89-0.99 | ಸೂಚ್ಯಂಕ |
|---|---|---|---|---|---|---|
| 1. | ಸಂಡೂರು | 0.75 | ಸಿರುಗುಪ್ಪ | 0.86 | - | - |
| 2. | ಕೂಡ್ಲಿಗಿ | 0.74 | ಹೆಚ್.ಬಿ.ಹಳ್ಳಿ | 0.84 | - | - |
| 3. | - | - | ಹಡಗಲಿ | 0.81 | - | - |

**ಮಾಹಿತಿಯ ಮೂಲ:** ನಂಜುಂಡಪ್ಪ ವರದಿ ಆಧಾರಿತ 1998–1999.

ಕೆಳಗಿನ ಕೋಷ್ಟಕ–6ರಲ್ಲಿ ಜಿಲ್ಲೆಯಲ್ಲಿ ತಾಲೂಕುವಾರು ಅಭಿವೃದ್ಧಿಯನ್ನು ಕಾಂಪ್ರಹೆನ್ಸೀವ್ ಕಾಂಪೋಸಿಟ್ ಡೆವಲಪ್‌ಮೆಂಟ್ ಇಂಡೆಕ್ಸ್ ಆಧಾರದ ಮೇಲೆ ಕಂಡುಹಿಡಿದಿದ್ದು, ಇವುಗಳ ಆಧಾರದ ಮೇಲೆ ಬಳ್ಳಾರಿ ಮತ್ತು ಹೊಸಪೇಟೆ ಅಭಿವೃದ್ಧಿ ಹೊಂದಿದ ತಾಲೂಕುಗಳು, ಸಿರುಗುಪ್ಪ, ಹಗರಿಬೊಮ್ಮನಹಳ್ಳಿ ಗ್ರಾಮಗಳು ಅಭಿವೃದ್ಧಿ ಹೊಂದುತ್ತಿರುವ ತಾಲೂಕುಗಳು ಮತ್ತು ಹೂವಿನ ಹಡಗಲಿ, ಕೂಡ್ಲಿಗಿ ಮತ್ತು ಸಂಡೂರು ಹಿಂದುಳಿದ ತಾಲೂಕುಗಳೆಂದು ವಿವರಣೆಯಲ್ಲಿ ತಿಳಿದು ಬಂದಿದೆ. ಈ ಸೂಚ್ಯಂಕಗಳ ಆಧಾರದ ಮೇಲೆ ನಾನು ಬಳ್ಳಾರಿ

ಜಿಲ್ಲೆಯಲ್ಲಿ ಸಂಡೂರನ್ನು ಮತ್ತು ಬಳ್ಳಾರಿ ತಾಲೂಕುಗಳನ್ನು ಒಂದು ಹಿಂದುಳಿದ ಮತ್ತು ಇನ್ನೊಂದನ್ನು ಅಭಿವೃದ್ಧಿಯ ಆಧಾರದ ಮೇಲೆ ಆಯ್ಕೆ ಮಾಡಿಕೊಂಡಿರುವೆ. ಇಂಡೇಕ್ಸ್‌ನಲ್ಲಿ ನೋಡಿದಾಗ ಕೂಡ್ಲಿಗಿ ಮತ್ತು ಸಂಡೂರು ತಾಲೂಕು ಸರಾಸರಿಯಲ್ಲಿ ಹಾಗೂ ಒಟ್ಟು ಭೂಮಿ ಉಳುಮೆಯಲ್ಲಿಯೂ ಹಿಂದೆ ಇರುವುದು ಕಂಡುಬರುತ್ತದೆ, ಅದರಲ್ಲೂ ಸಂಡೂರು ಸರಾಸರಿಯಲ್ಲಿ ಕೂಡ್ಲಿಗಿಗಿಂತಲೂ ಕಡಿಮೆ ಇರುವುದರಿಂದ ಸಂಡೂರನ್ನು ಹಿಂದುಳಿದ ತಾಲೂಕಾಗಿ ಪರಿಗಣಿಸಿ ಅದನ್ನು ಹಿಂದುಳಿದ ತಾಲೂಕಿನಲ್ಲಿ ಆಯ್ದುಕೊಂಡಿರುವೆ. ಅಭಿವೃದ್ಧಿ ಹೊಂದಿದ ತಾಲೂಕುಗಳಲ್ಲಿ ಹೊಸಪೇಟೆ ಮತ್ತು ಬಳ್ಳಾರಿ ತಾಲೂಕುಗಳಿದ್ದು ಅದರಲ್ಲಿ ಬಳ್ಳಾರಿ ತಾಲೂಕನ್ನು ಅಭಿವೃದ್ಧಿ ಹೊಂದಿದ ತಾಲೂಕಾಗಿ ಆಯ್ದುಕೊಂಡಿರುವೆ.

**ಕೋಷ್ಟಕ-6**

**ಅಭಿವೃದ್ಧಿ ಹೊಂದಿದ ತಾಲೂಕುಗಳ ವಿವರಗಳು**

| ಕ್ರ ಸಂ. | ತಾಲೂಕುಗಳು | ಒಟ್ಟು ಭೂಮಿ | ಒಟ್ಟು ಶೇಕಡ ಕೃಷಿ ಭೂಮಿ | ಒಟ್ಟು ಭೂಮಿ | ಒಟ್ಟು ಶೇಕಡ ಆಹಾರಧಾನ್ಯ ಗಳನ್ನು ಬೆಳೆಯುವ ಭೂಮಿ 1998–99 | ಒಟ್ಟು ಭೂಮಿ | ಒಟ್ಟು ಶೇಕಡ ತೋಟಗಾರಿಕೆ ಬೆಳೆಯನ್ನು ಬೆಳೆಯುವ ಭೂಮಿ 1998–99 |
|---|---|---|---|---|---|---|---|
| 1. | ಬಳ್ಳಾರಿ | 113.38 | 0.97 | 55.76 | 0.94 | 0.61 | 0.18 |
| 2. | ಹಡಗಲಿ | 111.21 | 0.95 | 48.80 | 0.82 | 2.85 | 0.85 |
| 3. | ಹೆಚ್.ಬಿ.ಹಳ್ಳಿ | 132.85 | 1.13 | 45.98 | 0.77 | 4.20 | 1.25 |
| 4. | ಹೊಸಪೇಟೆ | 125.38 | 1.07 | 63.28 | 1.06 | 5.08 | 1.52 |
| 5. | ಕೂಡ್ಲಿಗಿ | 107.23 | 0.91 | 33.74 | 0.57 | 1.99 | 0.59 |
| 6. | ಸಂಡೂರು | 108.52 | 0.92 | 68.66 | 1.15 | 2.21 | 0.66 |
| 7. | ಸಿರುಗುಪ್ಪ | 125.21 | 1.07 | 49.81 | 0.84 | 0.27 | 0.08 |

**ಮಾಹಿತಿಯ ಮೂಲ:** ನಂಜುಂಡಪ್ಪ ವರದಿ ಆಧಾರಿತ 1998–99 (ಕಾಂಪ್ರಹೆನ್ಸೀವ್ ಕಾಂಪೋಸಿಟ್ ಡೆವಲಪ್‌ಮೆಂಟ್ ಇಂಡೆಕ್ಸ್ ಆಧಾರದ ಮೇಲೆ)

ಹಾಗೆಯೇ ಕೋಷ್ಟಕ-6ರಲ್ಲಿ, ಸಂಡೂರನ್ನು ಹಿಂದುಳಿದ ತಾಲೂಕಿನಡಿಯಲ್ಲಿ, ಆಯ್ಕೆ ಮಾಡಿಕೊಂಡಿರುವೆ ಹಾಗೆಯೇ ಸಂಡೂರಿನಲ್ಲಿ, ಹೊಸಹಳ್ಳಿ ಪಂಚಾಯಿತಿಯಡಿಯಲ್ಲಿ ಬರುವ

ಹೊಸಹಳ್ಳಿ ಗ್ರಾಮವನ್ನು ಹಿಂದುಳಿದ ಗ್ರಾಮವಾಗಿ ಅಧ್ಯಯನಕ್ಕೆ ಒಳಪಡಿಸಿಕೊಂಡಿರುವೆ. ಅಭಿವೃದ್ಧಿ ಹೊಂದಿದ ತಾಲೂಕಿನಡಿಯಲ್ಲಿ ಬಳ್ಳಾರಿ ತಾಲೂಕನ್ನು, ಅದರಲ್ಲಿಯೂ ಹಲಕಂದಿ ಗ್ರಾಮ ಪಂಚಾಯಿತಿಯಲ್ಲಿ ಹೊನ್ನಳ್ಳಿ ಗ್ರಾಮವನ್ನು ಮತ್ತು ತಾಂಡವನ್ನು ಅಭಿವೃದ್ಧಿ ಹೊಂದಿದ ಗ್ರಾಮದಡಿಯಲ್ಲಿ ಆಯ್ಕೆ ಮಾಡಿಕೊಂಡಿರುವೆ. ಈ ಎರಡು ಗ್ರಾಮಗಳ ಭೌಗೋಳಿಕ ಹಿನ್ನೆಲೆ ಮತ್ತು ಜನಸಂಖ್ಯೆಯ ವಿವರಗಳು ಇಂತಿವೆ.

ಹೊನ್ನಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 622 ಇದ್ದು, ಜನಸಂಖ್ಯೆಯು 3628 ಆಗಿದೆ. ಗ್ರಾಮದಲ್ಲಿ ಓಬಳಾಪುರಂನ ಮೈನಿಂಗ್ ಪ್ರಭಾವವಿದ್ದು, ಗ್ರಾಮದಲ್ಲಿ ಜನರು ಹೆಚ್ಚಾಗಿ ಮೈನಿಂಗ್ ಕೂಲಿ ಕೆಲಸಗಳಿಗೆ ಹೋಗುತ್ತಿದ್ದಾರೆ. ಹಾಗೆಯೇ ತಮಗೆ ಇರುವ ಕಡಿಮೆ ಭೂಮಿಯಲ್ಲಿಯೇ ರೈತರು ನಿರಂತರವಾಗಿ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಗ್ರಾಮದ ಜನರನ್ನು ತೋಟಗಾರಿಕೆ ಕೃಷಿಗೆ ಸಂಬಂಧಿಸಿದಂತೆ ವಿಚಾರಿಸಿದಾಗ, ರೈತರ ಉತ್ತರಗಳು ಹಾಗೂ ಹೊನ್ನಳ್ಳಿ ಗ್ರಾಮದಲ್ಲಿ ಮೇಲ್ನೋಟಕ್ಕೆ ಕಾಣುವಂತೆ ಹೆಚ್ಚಿನ ಜನರು ತೋಟಗಾರಿಕೆ ಇಲಾಖೆಯಿಂದ ಬರುವ ಯೋಜನೆಗಳ ಪ್ರಯೋಜನ ಪಡೆದಿದ್ದಾರೆ ಎನ್ನುವುದಾಗಿತ್ತು. ಈ ಗ್ರಾಮವು ಬಳ್ಳಾರಿ ತಾಲೂಕಿಗೆ ತುಂಬಾ ಹತ್ತಿರವಾಗಿದ್ದು, ಅಂದರೆ ಕೇವಲ 24 ಕಿ.ಮೀ. ಇದ್ದು, ರೈತರು ತಾವು ಬೆಳೆದ ಉತ್ಪನ್ನಗಳನ್ನು ನೇರ ಕೃಷಿ ಉತ್ಪನ್ನ ಮಾರುಕಟ್ಟೆಗೆ ತಂದು ಮಾರಾಟ ಮಾಡುತ್ತಾರೆ. ಹಿಂದುಳಿದ ಗ್ರಾಮವಾದ ಹೊಸಳ್ಳಿಯ ವಿವರಗಳನ್ನು ನೋಡುವುದಾದರೆ ಗ್ರಾಮದಲ್ಲಿ ಒಟ್ಟು 940 ಕುಟುಂಬಗಳಿದ್ದು, ಜನಸಂಖ್ಯೆ 5538 ಆಗಿದ್ದು, ಈ ಗ್ರಾಮದಲ್ಲಿ ಭೌಗೋಳಿಕ ವರದಿಯನ್ನು ನೋಡುವುದಾದರೆ ನೀರಾವರಿಯನ್ನು ಆಧರಿಸಿದ ಭೂಮಿಯೇ ಇಲ್ಲ ಎನ್ನುವ ಅಂಕಿ ಅಂಶಗಳು ನಮಗೆ ದೊರೆತಿವೆ. ಅಲ್ಲದೆ ಇಲ್ಲಿ ರೈತರು ಕೇವಲ ಮಳೆ ಆಧರಿಸಿ ಬೇಸಾಯ ಮಾಡುವುದು, ರೈತರು ಖುಷ್ಕಿ ಭೂಮಿಯನ್ನು ಮಾತ್ರವೇ ಹೊಂದಿದ್ದಾರೆ ಎನ್ನುವ ಮಾಹಿತಿಯು ತಾಲೂಕು ಕಛೇರಿಯಿಂದ ದೊರೆಯುತ್ತದೆ. ಅಲ್ಲದೆ ಹೊಸಳ್ಳಿ ಗ್ರಾಮದಲ್ಲಿ ಸಂಡೂರಿನ ಮೈನಿಂಗ್‌ನ ಪ್ರಭಾವ ಅಧಿಕವಾಗಿಯೇ ಇದೆ. ವಿಜಯ ಸಿಂಹ ಅವರ ಮೈನಿಂಗ್ ಆಧಾರಿತ ಪುಸ್ತಕದಲ್ಲಿ ಸಂಡೂರು ತಾಲೂಕಿನಲ್ಲಿ ಮತ್ತು ಬಾವಳ್ಳಿ, ನಂದಿಹಳ್ಳಿ, ಲಕ್ಷ್ಮೀಪುರ, ಕೃಷ್ಣನಗರ, ಹೊಸಳ್ಳಿ, ನವಿಲುಪುರ, ಮುದಕಲಪೆಂಟೆ ಇತ್ಯಾದಿ ಗ್ರಾಮಗಳಲ್ಲಿ ಹಾಗೂ ಬಳ್ಳಾರಿ ತಾಲೂಕಿನ ಓಬಳಾಪುರಂನ ಸುತ್ತಮುತ್ತಲ ಗ್ರಾಮಗಳು ಹಲಕುಂದಿ, ಸಿದ್ಧಾಪುರ, ಹೊನ್ನಳ್ಳಿ ತಾಂಡ ಇತ್ಯಾದಿಗಳಲ್ಲಿಯೂ ಕಳೆದ ಎರಡು ದಶಕಗಳಲ್ಲಿ ಹೆಚ್ಚಿನ ಮೈನಿಂಗ್ ಪ್ರಭಾವವನ್ನೆ ಬೀರಿದೆ. ಮೈನಿಂಗ್ ಪ್ರಭಾವದಿಂದ ಸುತ್ತಮುತ್ತಲ ಪ್ರದೇಶಗಳಲ್ಲಿ ಕಳೆದ ದಶಕಗಳಲ್ಲಿ ಕೃಷಿಯು ಗಣನೀಯವಾಗಿ ಕಡಿಮೆಯಾಗಿದೆ. ಹಾಗೆಯೇ ಮೈನಿಂಗ್‌ನ ಪ್ರಭಾವ ಸುತ್ತಮುತ್ತಲ ಗ್ರಾಮಗಳ

ರೈತರ ಆರೋಗ್ಯದ ಮೇಲೂ ಅಧಿಕವಾಗಿ ಪರಿಣಾಮ ಬೀರಿದೆ. ಈ ಮೈನಿಂಗ್ ಹಿನ್ನೆಲೆಯಿಂದಲೂ ಎರಡು ಗ್ರಾಮಗಳಲ್ಲಿ ಸಾಮ್ಯತೆ ಇರುವುದರಿಂದಲೂ ಹೊನ್ನಳ್ಳಿ ಮತ್ತು ಹೊಸಳ್ಳಿ ಎರಡು ಗ್ರಾಮಗಳನ್ನು ಅಧ್ಯಯನಕ್ಕೆ ಕ್ಷೇತ್ರಗಳಾಗಿ ಆಯ್ಕೆ ಮಾಡಿಕೊಂಡಿರುತ್ತೇನೆ.

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಳ್ಳಾರಿ ಮಾರುಕಟ್ಟೆ ಸಮಿತಿಯ ಸ್ಥಾಪನೆ ಪ್ರತಿ ಮಾರುಕಟ್ಟೆಗೂ ಸಮಿತಿಯನ್ನು ರಚನೆ ಮಾಡಲಾಗುತ್ತದೆ. ಸಮಿತಿಯ ರಚನೆಯು ಮಾರುಕಟ್ಟೆಯ ಕಾರ್ಯಗಳು ಸುಲಲಿತವಾಗಿ ನಡೆಯಬೇಕೆಂದು, ಹಾಗಾಗಿ ಸಮಿತಿಯನ್ನು ಸ್ಥಾಪಿಸುವುದರಿಂದ ಅಧಿಕಾರಿಗಳು ಆಡಳಿತ ಮಾಡಲು ಮತ್ತು ಮಾರುಕಟ್ಟೆಯಲ್ಲಿ ಸರಿಯಾಗಿ ಕಾರ್ಯ ನಿರ್ವಹಿಸಲು ಸಮಿತಿಯ ರಚನೆ ಅವಶ್ಯಕವಾಗಿರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕೃಷಿ ಉತ್ಪನ್ನ ಸಮಿತಿಯು 1933ರ ಮದ್ರಾಸ್ ಕಮರ್ಷಿಯಲ್ ಕಾಯ್ದೆಯ ಅಡಿಯಲ್ಲಿ ಸಂಪೂರ್ಣ ಬಳ್ಳಾರಿ ಜಿಲ್ಲೆಯನ್ನೊಳಗೊಂಡ ಕಾರ್ಯಕ್ಷೇತ್ರದೊಂದಿಗೆ 1949ನೇ ಸಾಲಿನಲ್ಲಿ ಸ್ಥಾಪಿತವಾಗಿದೆ. ಅನಂತರ ದಿನಾಂಕ 11–11–1973ರಂದು ಸದರಿ ಸಮಿತಿಯಿಂದ ಐದು ಪ್ರತ್ಯೇಕ ಮಾರುಕಟ್ಟೆಗಳಾಗಿ ವಿಭಜಿಸಲಾಗಿದೆ.

ಮಾರುಕಟ್ಟೆ ಕ್ಷೇತ್ರ–ಬಳ್ಳಾರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವು ಬಳ್ಳಾರಿ ಮತ್ತು ಸಂಡೂರು ತಾಲ್ಲೂಕುಗಳನ್ನು ಒಳಗೊಂಡಿದೆ. ಚುನಾವಣೆ–ಸಮಿತಿಗೆ ದಿನಾಂಕ 05.06.2005ರಂದು ಚುನಾವಣೆ ನಡೆದಿದ್ದು, ಚುನಾಯಿತ ಸಮಿತಿಯ ಅವಧಿಯು ದಿ.10.08.2005 ರಿಂದ ಪ್ರಾರಂಭಗೊಂಡಿದೆ. ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಬಿಕರಿಯಾಗುವ ಪ್ರಮುಖ ಹುಟ್ಟುವಳಿಗಳು–ಹತ್ತಿ, ಶೇಂಗ, ಭತ್ತ, ಜೋಳ, ಮೆಕ್ಕೆಜೋಳ ಹಾಗೂ ಸೂರ್ಯಕಾಂತಿ. ಸರ್ಕಾರವು ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ 113 ಕೃಷಿ ಉತ್ಪನ್ನಗಳನ್ನು ನಿಯಂತ್ರಣ ಕಕ್ಷೆಗೆ ತಂದಿರುತ್ತವೆ.

ಮಾರುಕಟ್ಟೆ ಪ್ರಾಂಗಣವು ಬಳ್ಳಾರಿ ನಗರವು ಮುಖ್ಯ ಮಾರುಕಟ್ಟೆಯಾಗಿದ್ದು, ಬಳ್ಳಾರಿ ನಗರ ಸಭೆಯ ಪೂರ್ಣ ಕ್ಷೇತ್ರವನ್ನೊಳಗೊಂಡಿದೆ. ಬಳ್ಳಾರಿ ನಗರದಲ್ಲಿರುವ ಮುಖ್ಯ ಮಾರುಕಟ್ಟೆ ಪ್ರಾಂಗಣವು 104.12 ಎಕರೆ ವಿಸ್ತೀರ್ಣವನ್ನು ಹೊಂದಿದೆ. ನಿವೇಶನಗಳ ಹಂಚಿಕೆ–ಮುಖ್ಯ ಮಾರುಕಟ್ಟೆ ಪ್ರಾಂಗಣದಲ್ಲಿ ಹಾಗೂ ಉಪಮಾರುಕಟ್ಟೆ ಪ್ರಾಂಗಣದಲ್ಲಿ ವಿವಿಧ ಅಳತೆಗಳ ನಿವೇಶನಗಳನ್ನು ರಚಿಸಲಾಗಿದೆ. ನಿವೇಶನಗಳಲ್ಲಿ ಸಾಮಾನ್ಯ ನಿವೇಶನಗಳು ಹಾಗೂ ಮೂಲೆ ನಿವೇಶನಗಳೆಂದು ವಿಂಗಡಿಸಲಾಗಿದೆ. ಪ್ರಸ್ತುತವಾಗಿ ಮುಖ್ಯ ಪ್ರಾಂಗಣದಲ್ಲಿ ಪ್ರತಿ ಚದರ ಅಡಿಗೆ

ರೂ.60.00 ಹಾಗೂ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಪ್ರತಿ ಚದರ ಅಡಿಗೆ ರೂ.30.00 ದರವನ್ನು ನಿಗದಿಪಡಿಸಲಾಗಿದೆ. ಇಲ್ಲಿಯವರೆಗೆ ಮುಖ್ಯ ಮಾರುಕಟ್ಟೆ ಹಾಗೂ ಉಪ ಮಾರುಕಟ್ಟೆ ಪ್ರಾಂಗಣಗಳಲ್ಲಿ ನಿವೇಶನಗಳನ್ನು ಹಂಚಿಕೆ ಮಾಡಿರುವ ಹಾಗೂ ಲಭ್ಯವಿರುವ ನಿವೇಶನಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ–7**

**ಜಿಲ್ಲೆಯಲ್ಲಿ ಮಾರುಕಟ್ಟೆಯಲ್ಲಿ ಸಾಮಾನ್ಯ ನಿವೇಶನಗಳ ವಿವರಗಳು**

| ಕ್ರಸಂ. | ಮಾರುಕಟ್ಟೆಗಳ ವಿವರ | ರಚಿಸಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ | ಹಂಚಿಕೆ ಮಾಡಿರುವ/ ಸಮಿತಿಯು ಉಪಯೋಗಿಸಿಕೊಂಡಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ | ಲಭ್ಯವಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ |
|---|---|---|---|---|
| 1. | ಮುಖ್ಯ ಮಾರುಕಟ್ಟೆ | 390 | 221 | 169 |
| 2. | ಉಪಮಾರುಕಟ್ಟೆಗಳು ಕುರುಗೋಡು | 15 | 5 | 10 |
| 3. | ಮೋಕಾ | 20 | 3 | 17 |
| 4. | ಸಂಡೂರು | ನಿವೇಶನಗಳನ್ನು | ರಚಿಸಿರುವುದಿಲ್ಲ | ಇಲ್ಲ |
| 5. | ಕುಡಿತಿನಿ | 20 | 2 | 18 |

**ಮಾಹಿತಿ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012–2013.

ಮೇಲಿನ ಕೋಷ್ಟಕ–7ರಲ್ಲಿ ಜಿಲ್ಲೆಯಲ್ಲಿರುವ, ಒಟ್ಟು ಮಾರುಕಟ್ಟೆಗಳ ವಿವರಗಳನ್ನು ತೋರಿಸ ಲಾಗಿದೆ. ಜಿಲ್ಲೆಯಲ್ಲಿ ರಚಿಸಿರುವ ಮುಖ್ಯ ಮಾರುಕಟ್ಟೆಯಲ್ಲಿ ಸಾಮನ್ಯ ನಿವೇಶನಗಳ ಸಂಖ್ಯೆ 390, ಹಂಚಿಕೆಯಾಗಿರುವ ನೀವೇಶನಗಳ/ಸಮಿತಿಯು ಉಪಯೋಗಿಸಿಕೊಂಡಿರಿವ ಸಾಮಾನ್ಯ ನಿವೇಶನಗಳ ಸಂಖ್ಯೆ 221, ಲಭ್ಯವಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 169, ಉಪ ಮಾರುಕಟ್ಟೆಗಳು ಕುರುಗೋಡುಲ್ಲಿ ಸಾಮಾನ್ಯ ನಿವೇಶನಗಳ ಸಂಖ್ಯೆ 15, ಹಂಚಿಕೆಯಾಗಿರುವ ನಿವೇಶನಗಳ/ಸಮಿತಿಯು ಉಪಯೋಗಿಸಿಕೊಂಡಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 5, ಲಭ್ಯವಿರುವ ಸಾಮನ್ಯ ನಿವೇಶನಗಳ ಸಂಖ್ಯೆ 10, ಮೋಕಾದಲ್ಲಿ ಸಾಮನ್ಯ ನಿವೇಶನಗಳ ಸಂಖ್ಯೆ 20, ಹಂಚಿಕೆಯಾಗಿರುವ ನಿವೇಶನಗಳ/ಸಮಿತಿಯು ಉಪಯೋಗಿಸಿಕೊಂಡಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 3, ಲಭ್ಯವಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 17, ಸಂಡೂರಿನಲ್ಲಿ

ಸಾಮಾನ್ಯ ನಿವೇಶನಗಳನ್ನು ರಚಿಸಿರುವುದಿಲ್ಲ, ಹಂಚಿಕೆಯಾಗಿರುವ ನಿವೇಶನಗಳ/ಸಮಿತಿಯು ಉಪಯೋಗಿಸಿ ಕೊಂಡಿರುವ ಸಾಮಾನ್ಯ ನಿವೇಶನಗಳು ಇರುವುದಿಲ್ಲ. ಲಭ್ಯವಿರುವ ಸಾಮಾನ್ಯ ನಿವೇಶನಗಳು ಇರುವುದಿಲ್ಲ, ಕುಡಿತಿನಿಯಲ್ಲಿ ಸಾಮಾನ್ಯ ನಿವೇಶನಗಳ ಸಂಖ್ಯೆ 20, ಹಂಚಿಕೆ ಯಾಗಿರುವ ನಿವೇಶನಗಳ/ಸಮಿತಿಯು ಉಪಯೋಗಿಸಿಕೊಂಡಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 2, ಲಭ್ಯವಿರುವ ಸಾಮಾನ್ಯ ನಿವೇಶನಗಳ ಸಂಖ್ಯೆ 18.

ಕೆಳಗಿನ ಕೋಷ್ಟಕ–8ರಲ್ಲಿ ಜಿಲ್ಲೆಯಲ್ಲಿರುವ ಒಟ್ಟು ಮೂಲೆ ನಿವೇಶನಗಳ ಸಂಖ್ಯೆಗಳನ್ನು ನೀಡಲಾಗಿದೆ. ಜಿಲ್ಲೆಯ ಮುಖ್ಯ ಮಾರುಕಟ್ಟೆಗೆ ರಚಿಸಿರುವ ಮೂಲೆ ನಿವೇಶನಗಳ ಸಂಖ್ಯೆ 81, ಹಂಚಿಕೆ ಮಾಡಿರು/ಸಮಿತಿಯು ಉಪಯೋಗಿಸಿಕೊಂಡಿರುವ ಮೂಲೆ ನಿವೇಶನಗಳ ಸಂಖ್ಯೆ 20. ಲಭ್ಯವಿರುವ ಮೂಲೆ ನಿವೇಶನಗಳ ಸಂಖ್ಯೆ 61 ಆದರೆ, ಉಪಮಾರುಕಟ್ಟೆಗಳು ಕುರುಗೋಡಿನಲ್ಲಿ ರಚಿಸಿರುವ ಮೂಲೆ ನಿವೇಶನಗಳ ಸಂಖ್ಯೆ 4, ಹಂಚಿಕೆ ಮಾಡಿರುವ/ಸಮಿತಿಯು ಉಪಯೋಗಿಸಿ ಕೊಂಡಿರುವ ಮೂಲೆ ನಿವೇಶನಗಳ ಸಂಖ್ಯೆ 1. ಲಭ್ಯವಿರುವ ಮೂಲೆ ನಿವೇಶನಗಳ ಸಂಖ್ಯೆ 3. ಆದರೆ, ಮೋಕಾದಲ್ಲಿ ರಚಿಸಿರುವ ಮೂಲೆ ನಿವೇಶನಗಳ ಸಂಖ್ಯೆ 7, ಹಂಚಿಕೆ ಮಾಡಿರುವ/ಸಮಿತಿಯು ಉಪಯೋಗಿಸಿಕೊಂಡಿರುವ ಮೂಲೆ ನಿವೇಶನಗಳ ಸಂಖ್ಯೆ 1. ಲಭ್ಯವಿರುವ ಮೂಲೆ ನಿವೇಶನಗಳ ಸಂಖ್ಯೆ 6. ಆದರೆ, ಕುಡಿತಿನಿಯಲ್ಲಿ ರಚಿಸಿರುವ ಮೂಲೆ ನಿವೇಶನಗಳು ಇರುವುದಿಲ್ಲ, ಹಂಚಿಕೆ ಮಾಡಿರುವ/ಸಮಿತಿಯು ಉಪಯೋಗಿಸಿಕೊಂಡಿರುವ ಮೂಲೆ ನಿವೇಶನಗಳ ಸಂಖ್ಯೆ 1 ಇದ್ದು. ಲಭ್ಯವಿರುವ ಮೂಲೆ ನಿವೇಶನಗಳ ಸಂಖ್ಯೆ ಇರುವುದಿಲ್ಲ.

**ಕೋಷ್ಟಕ–8**

**ಜಿಲ್ಲೆಯಲ್ಲಿರುವ ಮಾರುಕಟ್ಟೆಯ ಒಟ್ಟು ಮೂಲೆ ನಿವೇಶನಗಳ ವಿವರಗಳು**

| ಕ್ರ ಸಂ. | ಮಾರುಕಟ್ಟೆಗಳ ವಿವರ | ರಚಿಸಿರುವ ಮೂಲೆ ನಿವೇಶನಗಳ ಸಂಖ್ಯೆ | ಹಂಚಿಕೆ ಮಾಡಿರು/ ಸಮಿತಿಯು ಉಪಯೋಗಿಸಿ ಕೊಂಡಿರುವ ಮೂಲೆ ನಿವೇಶನಗಳ ಸಂಖ್ಯೆ | ಲಭ್ಯವಿರುವ ಮೂಲೆ ನಿವೇಶನಗಳ ಸಂಖ್ಯೆ |
|---|---|---|---|---|
| 1. | ಮುಖ್ಯ ಮಾರುಕಟ್ಟೆ | 81 | 20 | 61 |
| 2. | ಉಪಮಾರುಕಟ್ಟೆಗಳು ಕುರುಗೋಡು | 4 | 1 | 3 |
| 3. | ಮೋಕಾ | 7 | 1 | 6 |
| 4. | ಕುಡಿತಿನಿ | – | 1 | – |

**ಮಾಹಿತಿ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012–13.

ಬಳ್ಳಾರಿ ಜಿಲ್ಲೆಯಲ್ಲಿರುವ ಒಟ್ಟು ಉಪಮಾರುಕಟ್ಟೆಗಳು, ಕೆಳಗಿನ ಕೋಷ್ಟಕ-9ರಲ್ಲಿ ಬಳ್ಳಾರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 4 ಉಪಮಾರುಕಟ್ಟೆಗಳಿದ್ದು. ಮೊದಲನೆಯದಾಗಿ ಸಂಡೂರು ಮಾರುಕಟ್ಟೆ 6.72 ಎಕರೆ ಭೂಮಿಯನ್ನು ಹೊಂದಿದೆ. ಎರಡನೆಯದಾಗಿ ಕುರುಗೋಡು-6.88 ಎಕರೆ ಭೂಮಿಯನ್ನು ಹೊಂದಿದ್ದು, ಕುಡಿತಿನಿಯು-6.00 ಎಕರೆ ಭೂಮಿ ಹಾಗೂ ಕೊನೆಯದಾಗಿ ಮೋಕಾ-5.50 ಎಕರೆ ಭೂಮಿಯನ್ನು ಹೊಂದಿದೆ. ಅವುಗಳ ವಿವರಣೆಗಳು ಕೋಷ್ಟಕದಲ್ಲಿ ಕೆಳಕಂಡಂತಿವೆ.

**ಕೋಷ್ಟಕ-9**

**ಜಿಲ್ಲೆಯಲ್ಲಿರುವ ಉಪಮಾರುಕಟ್ಟೆಗಳು ಜಮೀನುಗಳ ವಿವರಗಳು**

| ಕ್ರಸಂ. | ಉಪಮಾರುಕಟ್ಟೆಗಳು | ಭೂಮಿ ಎಕರೆಗಳಲ್ಲಿ |
|---|---|---|
| 1. | ಸಂಡೂರು | 6.72 |
| 2. | ಕುರುಗೋಡು | 6.88 |
| 3. | ಕುಡಿತಿನಿ | 6.00 |
| 4. | ಮೋಕಾ | 5.50 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012-2013

ಕೆಳಗಿನ ಕೋಷ್ಟಕ-10ರಲ್ಲಿ ಸಂಡೂರು ಉಪಮಾರುಕಟ್ಟೆಯ ಪ್ರಾಂಗಣದಲ್ಲಿ ಒದಗಿಸಿರುವ ಮೂಲಭೂತ ಸೌಲಭ್ಯಗಳ ಕುರಿತು ಮಾಹಿಯನ್ನು ನೀಡಲಾಗಿದೆ. ಉಪಮಾರುಕಟ್ಟೆಗಳಿಗೆ ಒದಗಿಸಿರುವ ಹಣಕಾಸಿನ ವಿವರವನ್ನು ಹೇಳಲಾಗಿದೆ. ಉಪಮಾರುಕಟ್ಟೆ ಸಂಡೂರು-18.72 ಎಕರೆ ಭೂಸ್ವಾಧೀನಕ್ಕೆ ರೂ.0,67 ಲಕ್ಷದಷ್ಟು, ಮುಂಭಾಗದಲ್ಲಿ ಸುತ್ತುಗೋಡೆ ಹಾಗೂ ಉಳಿದ ಮೂರು ದಿಕ್ಕುಗಳಲ್ಲಿ ಮುಳ್ಳುತಂತಿ ಬೇಲಿಗೆ ರೂ.1.08 ಲಕ್ಷದಷ್ಟು, 2. ಎನ್.ಜಿ.ಆರ್.ಜಿ ಗೋದಾಮುಗಳಿಗೆ ರೂ.2.94 ಲಕ್ಷದಷ್ಟನ್ನು, ಆಡಳಿತ ಕಛೇರಿ ಕಟ್ಟಡಕ್ಕೆ, ರೂ.6.69 ಲಕ್ಷದಷ್ಟು ಮತ್ತು ಮೇಲ್ಮಟ್ಟದ ಜಲಗಾರಕ್ಕೆ ರೂ.2.05 ಲಕ್ಷದಷ್ಟನ್ನು ಹಣ ಬಿಡುಗಡೆ ಮಾಡಲಾಗಿದೆ.

**ಕೋಷ್ಟಕ-10**

**ಸಂಡೂರು ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳು**

| ಕ್ರ ಸಂ. | ಮೂಲಭೂತ ಸೌಕರ್ಯಗಳ ವಿವರ | ಒಟ್ಟು ತಗಲುವ ಮೊತ್ತ(ಲಕ್ಷಗಳಲ್ಲಿ) |
|---|---|---|
| 1. | ಉಪಮಾರುಕಟ್ಟೆ ಸಂಡೂರು: 18.72 ಎಕರೆ ಭೂಸ್ವಾಧೀನ | 0.67 |
| 2. | ಮುಂಭಾಗದಲ್ಲಿ ಸುತ್ತುಗೋಡೆ ಹಾಗೂ ಉಳಿದ ಮೂರು ದಿಕ್ಕುಗಳಲ್ಲಿ ಮುಳ್ಳುತಂತಿ ಬೇಲಿ | 1.08 |

| | | |
|---|---|---|
| 3 | ಪ್ರಾಂಗಣದಲ್ಲಿ 1–6ವರೆಗೆ ಒಳರಸ್ತೆಗಳ ನಿರ್ಮಾಣ | 0.65 |
| 4 | 2. ಸಂ:ಎನ್.ಜಿ.ಆರ್.ಜಿ ಗೋದಾಮುಗಳು | 2.94 |
| 5 | ಆಡಳಿತ ಕಛೇರಿ ಕಟ್ಟಡ | 6.69 |
| 6 | ಮೇಲ್ಮಟ್ಟದ ಜಲಗಾರ | 2.05 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2013–13

ಕೆಳಗಿನ ಕೋಷ್ಟಕ–11ರಲ್ಲಿ ಕುರುಗೋಡು ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳು ವಿವರಗಳನ್ನು ನೀಡಲಾಗಿದೆ. ಭೂಸ್ವಾಧೀನಕ್ಕೆ, ರೂ.0.19 ಲಕ್ಷದಷ್ಟನ್ನು, ಸಮಿತಿಯ ಗೋದಾಮು ನಿರ್ಮಾಣಕ್ಕೆ ರೂ.0.29 ಲಕ್ಷದಷ್ಟನ್ನು, ಹರಾಜು ಕಟ್ಟೆಗಳಿಗೆ ರೂ.0.13 ಲಕ್ಷದಷ್ಟನ್ನು, ಒಳರಸ್ತೆಗಳಿಗೆ ರೂ.0.18 ಲಕ್ಷದಷ್ಟನ್ನು. ನೀರು ಸರಬರಾಜು ಮಾಡಲಿಕ್ಕೆ ರೂ.0.13 ಲಕ್ಷದಷ್ಟನ್ನು, ವಿದ್ಯುದೀಕರಣಕ್ಕೆ, ರೂ.0.05 ಲಕ್ಷದಷ್ಟನ್ನು, ಆಡಳಿತ ಕಛೇರಿ ಕಟ್ಟಡ ನಿರ್ಮಾಣಕ್ಕೆ ರೂ.0.20 ಲಕ್ಷದಷ್ಟನ್ನು, ಮುಳ್ಳುತಂತಿ ಬೇಲಿಗೆ ರೂ.0.93 ಲಕ್ಷದಷ್ಟನ್ನು, ಬೋರ್‌ವೆಲ್‌ಗಳಿಗೆ ರೂ.0.21 ಲಕ್ಷದಷ್ಟನ್ನು ಹಾಗೂ 2 ಸಂ (N.G.R.G) ಗೋದಾಮುಗಳಿಗೆ ರೂ.0.1 ಲಕ್ಷದಷ್ಟನ್ನು ಧನಸಹಾಯವನ್ನು ಮಾಡಲಾಗಿದೆ.

**ಕೋಷ್ಟಕ–11**

**ಕುರುಗೋಡು ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳ ವಿವರಗಳು**

| ಕ್ರ.ಸಂ. | ಮೂಲಭೂತ ಸೌಕರ್ಯಗಳ ವಿವರ | ಒಟ್ಟು ತಗಲುವ ಮೊತ್ತ(ಲಕ್ಷಗಳಲ್ಲಿ) |
|---|---|---|
| 1. | ಭೂಸ್ವಾಧೀನ | 0.19 |
| 2. | ಸಮಿತಿಯ ಗೋದಾಮು | 0.29 |
| 3. | ಹರಾಜುಕಟ್ಟೆ | 0.13 |
| 4. | ಒಳರಸ್ತೆಗಳು | 0.18 |
| 5. | ನೀರು ಸರಬರಾಜು | 0.13 |
| 6. | ವಿದ್ಯುದೀಕರಣ | 0.05 |
| 7. | ಆಡಳಿತ ಕಛೇರಿ ಕಟ್ಟಡ | 0.20 |
| 8. | ಮುಳ್ಳುತಂತಿ ಬೇಲಿ | 0.93 |
| 9. | ಬೋರ್‌ವೆಲ್ | 0.21 |
| 10. | 2 ಸಂ;(N.G.R.G)ಗೋದಾಮುಗಳು | 2.83 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012–13.

ಕೆಳಗಿನ ಕೋಷ್ಟಕ-12ರಲ್ಲಿ ಕುಡಿತಿನಿ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳ ವಿವರಗಳು ಇಂತಿವೆ. ಭೂಸ್ವಾಧೀನಕ್ಕೆ, ರೂ.0.25 ಲಕ್ಷಗಳು, ಸಮಿತಿಯ ಗೋದಾಮು ರೂ.0.33 ಲಕ್ಷಗಳು, ಹರಾಜುಕಟ್ಟೆ ರೂ.0.20 ಲಕ್ಷಗಳು, ಒಳರಸ್ತೆಗಳು ರೂ.0.15 ಲಕ್ಷಗಳು, ನೀರು ಸರಬರಾಜು ರೂ.0.16 ಲಕ್ಷಗಳು ವಿದ್ಯುದೀಕರಣ ರೂ.0.16 ಲಕ್ಷಗಳು, ಆಡಳಿತ ಕಛೇರಿ ಕಟ್ಟಡ ರೂ.0.21 ಲಕ್ಷಗಳು ಹಾಗೂ ಸುತ್ತುಗೋಡೆ ಹಾಗೂ ಮುಳ್ಳುತಂತಿ ಬೇಲಿಗೆ ರೂ.1.24 ಲಕ್ಷಗಳ ಹಣವನ್ನು ಬಿಡುಗಡೆ ಮಾಡಲಾಗಿದೆ.

**ಕೋಷ್ಟಕ-12**

**ಕುಡಿತಿನಿ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳು**

| ಕ್ರ.ಸಂ. | ಮೂಲಭೂತ ಸೌಕರ್ಯಗಳ ವಿವರ | ಒಟ್ಟು ತಗಲುವ ಮೊತ್ತ(ಲಕ್ಷಗಳಲ್ಲಿ) |
|---|---|---|
| 1. | ಭೂಸ್ವಾಧೀನ | 0.25 |
| 2. | ಸಮಿತಿಯ ಗೋದಾಮು | 0.33 |
| 3. | ಹರಾಜುಕಟ್ಟೆ | 0.20 |
| 4. | ಒಳರಸ್ತೆಗಳು | 0.15 |
| 5. | ನೀರು ಸರಬರಾಜು | 0.16 |
| 6. | ವಿದ್ಯುದೀಕರಣ | 0.16 |
| 7. | ಆಡಳಿತ ಕಛೇರಿ ಕಟ್ಟಡ | 0.21 |
| 8. | ಸುತ್ತುಗೋಡೆ ಹಾಗೂ ಮುಳ್ಳುತಂತಿ ಬೇಲಿ | 1.24 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012-13

ಕೆಳಗಿನ ಕೋಷ್ಟಕ-13ರಲ್ಲಿ ಮೋಕ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳ ವಿವರಗಳು ಇಂತಿವೆ. ಭೂಸ್ವಾಧೀನಕ್ಕೆ, ರೂ.0.16 ಲಕ್ಷಗಳು, ಸಮಿತಿಯ ಗೋದಾಮು ರೂ.0.33 ಲಕ್ಷಗಳು, ಹರಾಜುಕಟ್ಟೆ ರೂ.0.20 ಲಕ್ಷಗಳು, ಒಳರಸ್ತೆಗಳು ರೂ.0.65 ಲಕ್ಷಗಳು, ನೀರು ಸರಬರಾಜು ರೂ.0.11 ಲಕ್ಷಗಳು ವಿದ್ಯುದ್ದೀಕರಣ ರೂ.0.28 ಲಕ್ಷಗಳು, ಆಡಳಿತ ಕಛೇರಿ ಕಟ್ಟಡ ರೂ.0.21 ಲಕ್ಷಣಗಳು, ಹಣವನ್ನು ಬಿಡುಗಡೆ ಮಾಡಲಾಗುತ್ತದೆ ಎನ್ನುವ ವಿವರವನ್ನು ನೀಡಲಾಗಿದೆ.

ಕೋಷ್ಟಕ–13

ಮೋಕಾ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಲಾಗಿರುವ ಮೂಲಭೂತ ಸೌಲಭ್ಯಗಳು

| ಕ್ರಸಂ. | ಮೂಲಭೂತ ಸೌಕರ್ಯಗಳ ವಿವರ | ಒಟ್ಟು ತಗಲುವ ಮೊತ್ತ(ಲಕ್ಷಗಳಲ್ಲಿ) |
|---|---|---|
| 1. | ಭೂಸ್ವಾಧೀನ | 0.16 |
| 2. | ಸಮಿತಿಯ ಗೋದಾಮು | 0.33 |
| 3. | ಹರಾಜುಕಟ್ಟೆ | 0.20 |
| 4. | ಒಳರಸ್ತೆಗಳು | 0.65 |
| 5. | ನೀರು ಸರಬರಾಜು | 0.11 |
| 6. | ಆಡಳಿತ ಕಛೇರಿ ಕಟ್ಟಡ | 0.21 |
| 7. | ವಿದ್ಯುದೀಕರಣ | 0.28 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆ, ಬಳ್ಳಾರಿ 2012–13

ಮಾರಾಟ ಪದ್ಧತಿಯು ಕೃಷಿ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದರ ಕುರಿತು ವಿವರಣೆ ಈ ಕೆಳಗಿನಂತಿದೆ. ಜಿಲ್ಲೆಯಲ್ಲಿ ಹುಣಿಸೆಹಣ್ಣು ಮತ್ತು ಜಾನುವಾರುಗಳು ಮಾತ್ರ ಪರಸ್ಪರ ಒಪ್ಪಂದದ ಮೂಲಕ ಮಾರಾಟ ಮಾಡಲಾಗುತ್ತದೆ. ಇನ್ನುಳಿದ ಎಲ್ಲ ಕೃಷಿ ಹುಟ್ಟುವಳಿಗಳು ಹತ್ತಿ, ಜೋಳ, ಮೆಕ್ಕೆಜೋಳ, ಕಡಲೆ, ತೊಗರಿ, ಸೂರ್ಯಕಾಂತಿ, ಶೇಂಗಾ, ಕುಸುಬೆ ಮತ್ತು ಇತರೆ ಹುಟ್ಟುವಳಿಗಳನ್ನು ಟೆಂಡರ್ ಪದ್ಧತಿ ಮೂಲಕ ಮಾರಾಟ ಮಾಡಲಾಗುತ್ತದೆ. ಪೇಟೆ ಜ್ಞಾನ ಮತ್ತು ಪ್ರಚಾರವು ನಿಯಂತ್ರಿತ ಹುಟ್ಟುವಳಿಗಳನ್ನು ಮಾರುಕಟ್ಟೆ ಪ್ರಾಂಗಣಕ್ಕೆ ತಂದು ಮಾರಾಟ ಮಾಡಲು ಹಳ್ಳಿಗಳಲ್ಲಿ ರೈತರಿಗೆ ಕರಪತ್ರಗಳ ಮೂಲಕ ತಿಳಿಹೇಳಲಾಗುವುದು ಮತ್ತು ಪ್ರತಿದಿನ ಕಪ್ಪುಹಲಗೆಯ ಮೇಲೆ ಬೆಲೆಗಳ ಮಾಹಿತಿಯನ್ನು ಸಾರ್ವಜನಿಕ ಮಾಹಿತಿಗಾಗಿ ಬರೆಯಲಾಗುತ್ತದೆ. ಕೃಷಿ ಮಾರಾಟ ವಾಹಿನಿ ವೆಬ್‌ಸೈಟಿಗೆ ಪ್ರತಿದಿನ ಮಾರುಕಟ್ಟೆ ಧಾರಣೆಗಳನ್ನು ಭರ್ತಿ ಮಾಡಲಾಗುತ್ತದೆ. ಹಾಗೆಯೇ ದೆಹಲಿಯ ಇಕೋಸ್ಪ್ಯಾಟಿಗೆ ಕೃಷಿ ಹುಟ್ಟುವಳಿಗಳ ಬೆಲೆಗಳ ಹಾಗೂ ಆವಕದ ಮಾಹಿತಿ ನಿಯಮಿತವಾಗಿ ಸಲ್ಲಿಸಲಾಗುತ್ತದೆ. ವಾರ್ಷಿಕ ವರದಿಯನ್ನು ತಯಾರಿಸಿ ಪ್ರಕಟಿಸಲಾಗುತ್ತದೆ. ಕೃಷಿ ಮಾರಾಟ ವಾಹಿನಿಯ ಧರಗಳನ್ನು ಟಿ.ವಿ. ಮೂಲಕ ಡಿಸ್ಪ್ಲೇ ಮಾಡಲಾಗುತ್ತದೆ.

## ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ

ಕೇಂದ್ರ ಪುರಸ್ಕೃತ ಯೋಜನೆಯ(ಮ್ಯಾಕ್ರೋ ಮ್ಯಾನೇಜ್ಮೆಂಟ್) 2003-2004 ಮತ್ತು 2004-2005ನೇ ಸಾಲಿನ ಮಾರುಕಟ್ಟೆಯ ಸಮಿತಿಯ ಅಭಿವೃದ್ಧಿಗಾಗಿ ರೂ.1500000-00 ಗಳ ಅನುದಾನ ಈ ಸಮಿತಿಗೆ ಮಂಜೂರಾಗಿದೆ. ಸದರಿ ಮೊತ್ತದಲ್ಲಿ ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ ಅಳವಡಿಸಲು ಅವಶ್ಯಕವಾದ ಸ್ಪೆಸಿಫಿಕೇಶನ್‌ಗಳನ್ನು ಸಾಫ್ಟ್‌ವೇರ್ ಡೈವಲಪ್ ಮಾಡುವ ಖಾಸಗಿ ಏಜೆನ್ಸಿಗಳಿಂದ ಪಡೆದು ದಿ:19.02.04ರಂದು ಟೆಂಡರ್ ಪ್ರಕಟಣೆ ಹೊರಡಿಸಲಾಗಿರುತ್ತದೆ. ಸದರಿ ಪ್ರಕಟಣೆಗೆ ಅನುಗುಣವಾಗಿ ಎರಡು ಖಾಸಗಿ ಏಜೆನ್ಸಿಗಳಾದ ಎಸ್.ಎಲ್.ಎನ್ ಟೆಕ್ನಾಲಜಿಸ್ ಬೆಂಗಳೂರು ಆ್ಯಂಡ್ ಟಿ.ಡಿ.ಎಸ್. ಲಿಮಿಟೆಡ್, ಬೆಂಗಳೂರು ಅವರು ಟೆಂಡರ್‌ನಲ್ಲಿ ಭಾಗವಹಿಸಿದ್ದರು. ಎರಡು ಏಜೆನ್ಸಿಗಳ ಟೆಂಡರ್‌ಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗಿದ್ದು, ಟೆಂಡರ್ ದರಗಳಲ್ಲಿ ಬಹಳಷ್ಟು ವ್ಯತ್ಯಾಸವಿರುವುದರಿಂದ ಈವರೆಗೆ ಮಂಜೂರಾತಿ ನೀಡಿರುವುದಿಲ್ಲ. ದಿ-25.10.2004ರಂದು ಪ್ರಿನ್ಸಪಲ್ ಸೆಕ್ರೆಟರಿ ಆಫ್ ಕೋ-ಆಪರೇಶನ್ ಅವರ ಅಧ್ಯಕ್ಷತೆಯಲ್ಲಿ TAP committee ಸಭೆಯಲ್ಲಿ ಸದರಿ ವಿಷಯದ ಬಗ್ಗೆ ಚರ್ಚಿಸಿ ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ ಅಳವಡಿಸುವ ಕಾಮಗಾರಿಯನ್ನು ಖಾಸಗಿ ಏಜನ್ಸಿಗಳಿಗೆ ನೀಡದೆ national information centre Bangalore ಅವರಿಗೆ ನೀಡಲು ತೀರ್ಮಾನಿಸಲಾಗಿತ್ತು. ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ ಈಗಾಗಲೇ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರು ಕಾರ್ಯದರ್ಶಿಯವರು ವರ್ತಕರು ಹಾಗೂ ಸಿಬ್ಬಂದಿಯವರು ಪರಿಶೀಲಿಸಿ ಕೊಳ್ಳಲು ಈ ಸಮಿತಿಯಲ್ಲಿ ಅಳವಡಿಸಲು ಕೇಂದ್ರ ಕಛೇರಿಯ ನಿರ್ದೇಶನದಂತೆ ಪ್ರವಾಸ ಕೈಗೊಂಡು ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿನ್ನು ಪರಿಶೀಲಿಸಲಾಯಿತು. ಸದರಿ ವರದಿಯನ್ನು ಕೇಂದ್ರ ಕಛೇರಿಗೆ ಸಲ್ಲಿಸಲಾಯಿತು. ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ ಅಳವಡಿಸಲು ಯೋಜನಾ ವರದಿಯನ್ನು national information centre ರವರಿಂದ ಪಡೆದು ಕೇಂದ್ರ ಕಛೇರಿಯವರು ಈ ಕಾರ್ಯಾಲಯಕ್ಕೆ ದಿ:09.10.07ರಂದು ಕಳುಹಿಸಿಕೊಟ್ಟಿದ್ದಾರೆ. ಪ್ರಸ್ತುತ ದಿ:07.08.08 ರಂದು ಕಿಯೋನಿಕ್ಸ್ ಸಂಸ್ಥೆಯವರು ಈ ಸಮಿತಿಗೆ ಭೇಟಿ ನೀಡಿ ಎಲೆಕ್ಟ್ರಾನಿಕ್ ಟೆಂಡರ್ ಪದ್ಧತಿ ಅಳವಡಿಸಲು ಪ್ರಾರಂಭದ ಪರಿವೀಕ್ಷಣೆ ಮಾಡಲಾಗಿದ್ದು, ಸದ್ಯದಲ್ಲೇ ಯೋಜನಾ ವರದಿಯನ್ನು ಈ ಸಮಿತಿಗೆ ಸಲ್ಲಿಸಲಿದ್ದಾರೆ. ಯೋಜನಾ ವರದಿ ಸಲ್ಲಿಸಿದ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು.

## ಉಪಸಂಹಾರ

ಕೃಷಿ ಮಾರುಕಟ್ಟೆಯ ಸ್ಥಾಪನೆಯು ಜಿಲ್ಲೆಯಲ್ಲಿ ರೈತರ ಅನೂಕೂಲಕ್ಕೆಂದು ಆರಂಭವಾಗಿದೆ. ಜಿಲ್ಲೆಯಲ್ಲಿ ನಾಲ್ಕು ಉಪಮಾರುಕಟ್ಟೆಗಳಿವೆ. ಅವು ಸಂಡೂರು, ಕುರುಗೋಡು, ಕುಡಿತಿನಿ,

ಮೋಕಾ. ನಾನು ಅಧ್ಯಯನಕ್ಕೆ ಸಂಬಂಧಪಟ್ಟಂತೆ ಬಳ್ಳಾರಿ ಜಿಲ್ಲೆಯ ಕೃಷಿ ಮಾರುಕಟ್ಟೆಗೆ ಭೇಟಿ ನೀಡಿದ್ದು ಜಿಲ್ಲೆಯ ಮಾರುಕಟ್ಟೆಯಲ್ಲಿ ಹೆಚ್ಚಾಗಿ ರೈತರಿಗೆ ಮೂಲಭೂತ ಸೌಲಭ್ಯಗಳಿಲ್ಲದಿದ್ದರೂ ಮಾರುಕಟ್ಟೆಯಲ್ಲಿ ದಿನನಿತ್ಯ ಮಾರಾಟದ ವಿಷಯದಲ್ಲಿ ವ್ಯವಸ್ಥಿತವಾಗಿದೆ. ಕಾಲಕಾಲಕ್ಕೆ ಅವಶ್ಯಕ ವಾಗಿರುವ ಮೂಲಭೂತ ಸೌಲಭ್ಯಗಳನ್ನು ಒದಗಿಸಿದರೆ ರೈತರಿಗೆ ಇನ್ನೂ ಹೆಚ್ಚು ಅನುಕೂಲವಾಗು ತ್ತದೆ. ಆದರೆ ಉಳಿದಂತೆ ಉಪಮಾರುಕಟ್ಟೆಗಳ ಕುರಿತು ಹೇಳುವುದಾದರೆ ಉಪಮಾರುಕಟ್ಟೆಯಲ್ಲಿ ಹೆಚ್ಚಾಗಿ ಕೃಷಿ ಉತ್ಪನ್ನಗಳು ಮಾರಾಟವಾಗುವುದು ಕಾಣುವುದಿಲ್ಲ, ವಾರಕ್ಕೆ ಒಮ್ಮೆ ಅಥವಾ ಎರಡು ಬಾರಿ ಮಾತ್ರವೇ ಕೃಷಿ ಹಿಡುವಳಿಗಳು ಮಾರಾಟ ಮಾಡುತ್ತವೆ. ಮೂಲಭೂತ ಸೌಲಭ್ಯಗಳ ವಿಷಯವಂತೂ ಹೇಳುವ ಹಾಗಿಲ್ಲ. ಹೀಗೆ ಉಪಮಾರುಕಟ್ಟೆಗಳು ನಾಮ ಮಾತ್ರಕ್ಕೆ ಇವೆಯಾದರೂ ಕಾರ್ಯ ನಿರ್ವಹಿಸುವಲ್ಲಿ ಅಷ್ಟಾಗಿ ಸಮರ್ಪಕವಾಗಿಲ್ಲ.

**ಕೊನೆ ಟಿಪ್ಪಣಿಗಳು**

1. ಬೈ ರಾವೇನ್‌ಂದ್ರನ್ ಆ್ಯಂಡ್ ಸೆಲ್‌ವೆಂಟ್ ಆಲ್, *ದಿ ಇಂಪ್ಯಾಕ್ಟ್ ಆಫ್ ಅಗ್ರಿಕಲ್ಚರಲ್ ಪಾಲಿಸಿ ಆ್ಯನ್ ಇಂಟೆಗ್ರೇಶನ್ ಮಾರ್ಕೆಟ್ಸ್ ಆಫ್ ಆನಿಯನ್*, ಸೋಶಿಯಲ್ ಆ್ಯಂಡ್ ಇಕಾನಮಿಕ್ ಜರ್ನಲ್, 2001, ಪು.ಸಂ.45–48.

2. ಲೀಸಾ ಮಾರ್‍ಯೆ ವಾಸ್ಕೋ, *ಆಲ್ಟ್ರನೇಟಿವ್ ವಿಂಡ್ ಮ್ಯಾನೇಜ್‌ಮೆಂಟ್ ಪ್ರಾಕ್ಟೀಸಸ್ ಎಫೆಕ್ಟ್ಸ್ ಆನ್ ವಿಂಡ್ ಕಂಟ್ರೋಲ್ ಗ್ರಾಪ್ರೈನ್ ಪರ್‌ಫಾರ್‌ಮೆನ್ಸ್* ಆ್ಯಂಡ್ ಸಾಯಿಲ್ ಕ್ವಾಲಿಟಿ ಇನ್ ಆ್ಯನ್ ಎಸ್ಟಾಬ್ಲೀಷ್ಡ್, ಸೋಶಿಯಲ್ ಸೈನ್ಸ್, ಪ್ರಕಟಿತ ಲೇಖನ, 2010, ಪು.ಸಂ.55–56.

3. ಮೇಘನ್ ಅಂಡ್ರೀವ್ಸ್, *ಮೈಕ್ರೋಕ್ರೆಡಿಟ್ ಆ್ಯಂಡ್ ಅಗ್ರಿಕಲ್ಚರ್, ಹೌ ಇಟ್ ವರ್ಕ್* (MEDA), ಕೆನಡಾ 2006, ಪು.ಸಂ.22–32.

4. ಬಳ್ಳಾರಿ ಜಿಲ್ಲಾ ಪಂಚಾಯಿತಿ, ಬಳ್ಳಾರಿ ಗೆಜೆಟೆಡ್, ನಾಲ್ಕನೇ ಅಧ್ಯಾಯ, ಅಗ್ರಿಕಲ್ಚರ್ ಆ್ಯಂಡ್ ಇರ್‍ರಿಗೇಶ್‌ನ್, 1973, ಪು.ಸಂ.56.

5. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕ.ವಿ.ಹಂಪಿ, ಭಾಗ–1 2012, ಪು.ಸಂ.1, 231–251.

6. ಶರಣಪ್ಪ ಎಸ್., ಜನಗಣತಿಯ ಮಾಹಿತಿ, ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ಒಳಸೋಟ, ಕರ್ನಾಟಕ ಸರ್ಕಾರ, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಬಳ್ಳಾರಿ, 2011–12, ಪು.ಸಂ.1–38

7. ಸಂಡೂರು ತಾಲೂಕು ಕಛೇರಿ, ರೈತರಿಗೆ ಪಾಣಿ ಮತ್ತು ಬರ ಪರಿಹಾರ ವಿತರಿಸುವುದರ ಕುರಿತು, ಕಛೇರಿಯಲ್ಲಿ ಅಧಿಕಾರಿಗಳಿಂದ ದ್ವಿತೀಯ ಮಾಹಿತಿಯನ್ನು ಪಡೆದಿರುತ್ತೇನೆ, 2013.

8. ಹಗರಿಬೊಮ್ಮನಹಳ್ಳಿ ಕೃಷಿ ಮಾರುಕಟ್ಟೆ ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು, ಕೃಷಿ ಇಲಾಖೆಯಲ್ಲಿ ಅಧಿಕಾರಿಗಳು ಸರ್ಕಾರದ ಯೋಜನೆಗಳ ಪುಸ್ತಕಗಳಿಂದ ಕೊಟ್ಟ ಮಾಹಿತಿ, 2013.

9. ಹಗರಿಬೊಮ್ಮನಹಳ್ಳಿ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು, ತೋಟಗಾರಿಕೆ ಇಲಾಖೆಯಲ್ಲಿ ಅಧಿಕಾರಿಗಳು ಸರ್ಕಾರದ ಯೋಜನೆಗಳ ಪುಸ್ತಕಗಳಿಂದ ಕೊಟ್ಟ ಮಾಹಿತಿ 2013.

10. ಸಂಡೂರಿನ ಕೃಷಿ ಇಲಾಖೆ ಕೃಷಿ ಬೀಜ ವಿತರಣೆ, ಗೊಬ್ಬರ ವಿತರಣೆಯ ವಿವರಣೆಯನ್ನು ಇಲಾಖೆಯ ಅಧಿಕಾರಿಗಳಿಂದ ದ್ವಿತೀಯ ಮಾಹಿತಿಯನ್ನು ಪಡೆದುಕೊಂಡಿದ್ದು, 2013.

11. ಬಳ್ಳಾರಿ ಜಿಲ್ಲಾ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು 2013.

12. ಬಳ್ಳಾರಿ ಜಿಲ್ಲೆಯ ಕೃಷಿ ಇಲಾಖೆ ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು ಮಾಹಿತಿಯನ್ನು ಅಧಿಕಾರಿಗಳು ಕೊಟ್ಟ ಪುಸ್ತಕಗಳಿಂದ ಪಡೆದಿರುತ್ತೇನೆ, 2013.

13. ಬಳ್ಳಾರಿಯ ಕೃಷಿ ಮಾರುಕಟ್ಟೆ, ಮಾರುಕಟ್ಟೆಯಲ್ಲಿರುವ ರೈತರಿಗಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಮಾರಾಟ ಮಾಡಲಿಕ್ಕಿರುವ ಅನುಕೂಲಗಳನ್ನು ಅಧಿಕಾರಿಗಳು ಕೊಟ್ಟ ದ್ವಿತೀಯ ಮಾಹಿತಿಯ ಆಧಾರವಾಗಿದೆ, 2013.

14. ಕೂಡ್ಲಿಗಿ ತೋಟಗಾರಿಕೆ ಇಲಾಖೆ, ವಿವಿಧ ತೋಟಗಾರಿಕೆ ಯೋಜನೆಗಳ ಮಾಹಿತಿಯನ್ನು ಕಛೇರಿಯ ಅಧಿಕಾರಿಗಳಿಂದ ಪಡೆದಿರುತ್ತೇನೆ, 2012.

15. ಎಸ್‌ಬಿ.ಐ. ಮತ್ತು ಕೋ ಆಪರೇಟಿವ್ ಸೊಸೈಟಿ, ಗ್ರಾಮೀಣ ಬ್ಯಾಂಕ್ ಸಂಡೂರು ಮತ್ತು ಬಳ್ಳಾರಿಯಲ್ಲಿ ರೈತರಿಗಿರುವ ಸಾಲ ಸೌಲಭ್ಯಗಳ ಮಾಹಿತಿಯನ್ನು ಬ್ಯಾಂಕ್ ಅಧಿಕಾರಿಗಳಿಂದ ಪಡೆದಿರುತ್ತೇನೆ 2013.

16. ಜಿಲ್ಲಾ ಪಂಚಾಯತ್, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳಿಂದ ಪಡೆದ ಮಾಹಿತಿ, ಬಳ್ಳಾರಿ 2012–13.

17. ಶರೊನ್ ಮಬಬ್ಘಿ ತುಸ್ಮಿ, ಇವ್ಯಾಲ್ಯುವೇಂಟಿಂಗ್ ಹಾರ್ಟಿಕಲ್ಚರಲ್ ಪ್ರಾಕ್ಟೀಸಸ್ ಫಾರ್ ಸಸ್‌ಟೇನ್‌ಬಲ್ ಟೊಮೋಟೊ ಪ್ರೊಡಕ್ಷನ್, ಎ ರಿಪೋರ್ಟ್ ಆನ್ ಹಾರ್ಟಿಕಲ್ಚರ್, 2014, ಪು.ಸಂ.2–45–80.

18. ಆಡ್ರೈನ್ ಬ್ರೌಸ್ ಕಾರ್ಡ್ಸ್, ಚಾಲೆಂಜೆಸ್ ಆ್ಯಂಡ್ ಅಪರ್ಚುನಿಟೀಸ್ ಫಾರ್ ಮಾರ್ಕೆಟಿಂಗ್ ಫ್ರೂಟ್ ಫ್ರಮ್ ದಿ ವೆಸ್ಟರ್ನ್ ಸ್ಲೋಪಿ, ಸೋಶಿಯಲ್ ಆ್ಯಂಡ್ ಇಕಾನಮಿಕ್ ಜರ್ನಲ್, 2001, ಪು.ಸಂ. 24–30.

19. ಪ್ರದೀಪ್ ಮೆಹತ್, ಡೈವರ್‌ಸಿಫಿಕೇಶನ್ ಆ್ಯಂಡ್ ಹಾರ್ಟಿಕಲ್ಚರಲ್ ಕ್ರಾಪ್ಸ್, ಅಭಿಜಿತ್ ಪಬ್ಲಿಕೇಶನ್ 2009, ಪು.ಸಂ.2–4.

20. Guidelines for rashtriya krishi vikas yojana 2014-2015, http// www.nrhm.nic.in.

# ಅಧ್ಯಾಯ–ಮೂರು

## ಕೇಂದ್ರ ಮತ್ತು ರಾಜ್ಯ ಸರಕಾರದ ಪಾಲಿಸಿಗಳು

ಪೀಠಿಕೆ
ಕೇಂದ್ರದ ಮತ್ತು ರಾಜ್ಯದ ತೋಟಗಾರಿಕೆ ಕೃಷಿ ಯೋಜನೆಗಳ ವಿವರಗಳು
ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಮಗ್ರ ಪೋಷಕಾಂಶಗಳ ನಿರ್ವಹಣೆ/ಸಮಗ್ರ ಕೀಟ/ ರೋಗಗಳ ನಿಯಂತ್ರಣದ ವಿವರಗಳು
ತೋಟಗಾರಿಕೆ ಬೆಳೆಗಳಲ್ಲಿ ಸಾವಯವ ಕೃಷಿ ಕಾರ್ಯಕ್ರಮ
ಸಮಗ್ರ ಪೋಷಕಾಂಶಗಳ ಯೋಜನೆಯ ವಿವರಗಳು
ತಾಲೂಕು(ಕೃಷಿ ಭೂಮಿ)ಗಳ ಕ್ಷೇತ್ರ ಪರಿಶೀಲನಾ ಯೋಜನೆಯ ವಿವರಗಳು
ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯ ಯೋಜನೆ
ರೈತರಿಗೆ ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆ
ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ
ಕೃಷಿ ಕ್ಷೇತ್ರಕ್ಕೆ ಲಭ್ಯವಿರುವ ಸಾಲಸೌಲಭ್ಯಗಳ ಯೋಜನೆ

## ಅಧ್ಯಾಯ–ಮೂರು

# ಕೇಂದ್ರ ಮತ್ತು ರಾಜ್ಯ ಸರಕಾರದ ಪಾಲಿಸಿಗಳು

**ಪೀಠಿಕೆ**

ಹಿಂದಿನ ಅಧ್ಯಾಯದಲ್ಲಿ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದ ಕ್ಷೇತ್ರಗಳ ಪರಿಚಯವನ್ನು ತೋಟಗಾರಿಕೆ ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗಿದೆ. ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯು ಕೃಷಿಯ ಮಾರುಕಟ್ಟೆಯ ಅಭಿವೃದ್ಧಿಯಲ್ಲಿ, ಮತ್ತು ತೋಟಗಾರಿಕೆ ಕೃಷಿಗೆ ಸಂಬಂಧಿಸಿದಂತೆ ಯಾವ ರೀತಿ ಭಿನ್ನವಾಗಿದೆ ಎಂಬುದನ್ನು ವಿವರಿಸಲಾಗಿದೆ. ಜಿಲ್ಲೆಯಲ್ಲಿರುವ ಒಟ್ಟು ಮಾರುಕಟ್ಟೆಗಳನ್ನು, ಉಪಮಾರುಕಟ್ಟೆಗಳ ವಿವರಗಳನ್ನು ಮತ್ತು ಕ್ಷೇತ್ರಗಳಾಗಿ ಆಯ್ದ ಗ್ರಾಮಗಳ ಪರಿಚಯವನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಗ್ರಾಮೀಣ ಭಾಗದ ರೈತರ ಅಭಿವೃದ್ಧಿಗಾಗಿ, ಕೃಷಿ ಮತ್ತು ತೋಟಗಾರಿಕೆ ಕೃಷಿಯಲ್ಲಿ, ಕೇಂದ್ರದ ಮತ್ತು ರಾಜ್ಯದ ಪಾಲಿಸಿಗಳನ್ನು ಅಧ್ಯಯನ ಮಾಡುವುದಾಗಿದೆ. ಮಾರುಕಟ್ಟೆಗಳಲ್ಲಿ ಗ್ರಾಮೀಣ ಮಾರುಕಟ್ಟೆಯು ಅದರದೇ ಆದ ಪ್ರಾಮುಖ್ಯತೆ ಯನ್ನು ಹೊಂದಿದೆ. ಈ ನಿಟ್ಟಿನಲ್ಲಿ ಸರ್ಕಾರವು ಕೃಷಿ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸಲು ಮತ್ತು ರೈತರ ಉದ್ಧಾರಕ್ಕಾಗಿ ಕಾಲಕಾಲಕ್ಕೆ ಪ್ರಸ್ತುತಪಡಿಸುವ ಯೋಜನೆಗಳ ಕುರಿತು ಚರ್ಚಿಸಲಾಗಿದೆ. ಅಧ್ಯಯನವು ಸಂಪೂರ್ಣವಾಗಿ ಕೆಂದ್ರದ ಮತ್ತು ರಾಜ್ಯದ ಕೃಷಿ ಪಾಲಿಸಿಗಳನ್ನು ಅಧ್ಯಯನ ಮಾಡುವುದಾಗಿದೆ.

ಅಧ್ಯಯನದಲ್ಲಿ ಮೊದಲನೆಯ ಗ್ರಾಮೀಣ ಕೃಷಿ ಮಾರುಕಟ್ಟೆಯ ಕುರಿತಾದ ರಾಜ್ಯದ ಮತ್ತು ಕೇಂದ್ರದ ಪಾಲಿಸಿಗಳನ್ನು ಅಧ್ಯಯನಕ್ಕೆ ಒಳಪಡಿಸುವುದು. ಎರಡನೆಯದು ಗ್ರಾಮೀಣ ತೋಟಗಾರಿಕೆಯ ರಾಜ್ಯದ ಮತ್ತು ಕೇಂದ್ರದ ನೀತಿ ನಿಯಮಗಳನ್ನು ಸಂಶೋಧನೆಗೆ ಒಳಪಡಿಸುವುದಾಗಿದೆ. ಈ ಉದ್ದೇಶಗಳಿಗನುಗುಣವಾಗಿ ಅಧ್ಯಯನದಲ್ಲಿ ಸರ್ಕಾರದಿಂದ ಮುಖ್ಯವಾಗಿ ಗ್ರಾಮೀಣ ಭಾಗಕ್ಕೆ, ಕೃಷಿ ನಿರತರಿಗೆ ಅಂದರೆ ರೈತರಿಗೆ, ಕೃಷಿ ಉತ್ಪನ್ನ ಮಾರುಕಟ್ಟೆಯ, ರೈತರಿಗೆ

ಹಣಕಾಸಿನ ನೆರವಿನ ಕುರಿತು, ಇತರೆ ಎಲ್ಲ ರೈತಪರ ಯೋಜನೆಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಇವೆಲ್ಲವೂಗಳನ್ನು ಕ್ರೋಡೀಕರಿಸಿ ಅಧ್ಯಯನದ ಉದ್ದೇಶದಿಂದ ಈ ಅಧ್ಯಾಯವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು ಕೃಷಿ ಪಾಲಿಸಿಗಳು ಅಥವಾ ಕೃಷಿ ಕಾರ್ಯಕ್ರಮಗಳು. ಎರಡನೆಯದು ಕೃಷಿ ಮತ್ತು ರೈತರ ಅಭಿವೃದ್ಧಿಗಾಗಿ ರೂಪಿತವಾದ ಸಾಂಸ್ಥಿಕ ರಚನೆಗಳು. ಸಂಪೂರ್ಣ ಯೋಜನೆಗಳ ವಿವರಣೆಗೂ ಮುನ್ನ ಯೋಜನೆಗಳಿಗೆ ಸಂಬಂಧಿಸಿದ ಕೆಲವು ಅಧ್ಯಯನಗಳ ವಿಮರ್ಶೆಯನ್ನು ಮಾಡಲಾಗಿದೆ.

ಮಾರುಕಟ್ಟೆಗಳ ಸ್ಥಾಪನೆ ಕುರಿತು ಕೆ.ವಿ.ಮಹಾಬಲಗಿರಿ ಭಟ್ ಅವರು ಕೃಷಿಪೇಟೆ (ಡಿಸೆಂಬರ್ 2013) ಅಧ್ಯಯನದಲ್ಲಿ, ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ಕೃಷಿ ಕ್ಷೇತ್ರದಲ್ಲಿ ಸುಧಾರಣೆ ಬಗ್ಗೆ ಸಲಹೆ ಮಾಡಲು ದಿನಾಂಕ 27–03–2013ರಂದು ರಚಿಸಿದ ಸಮಿತಿಯು ದಿನಾಂಕ 15–05–2013ರಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ವರದಿಯನ್ನು ಕುರಿತಾದ ವಿಶ್ಲೇಷಣೆಯನ್ನು ಮಾಡಲಾಗುತ್ತದೆ.[1] ಈ ಪ್ರಸ್ತುತ ವರದಿಯಲ್ಲಿರುವ ವಿಷಯವು ಪ್ರಾರಂಭಿಸಿದ ಸುಧಾರಣೆಯನ್ನು ಬಲಪಡಿಸುವುದು ಮತ್ತು ಮಾರುಕಟ್ಟೆಗಳ ಜೋಡಣೆಯಾದ ಬೆಲೆ ನಿರ್ಧರಣೆಯು ಪಾರದರ್ಶಕವಾಗಿರುತ್ತದೆ. ನಿರ್ಧಾರವಾದಂತಹ ಉತ್ಪನ್ನದ ಬೆಲೆಯು ವಿಸ್ತೃತ ಆರ್ಥಿಕ ವ್ಯವಸ್ಥೆಯಲ್ಲಿನ ಧಾರಣೆಯನ್ನು ಪ್ರತಿಬಿಂಬಿಸುತ್ತದೆ ಎಂಬುದಾಗಿದೆ. ಆದರೆ ಲೇಖಕರ ಪ್ರಶ್ನೆಯು ರೈತರು ಬೆಳೆದ ಉತ್ಪನ್ನಗಳನ್ನು ಹೊಲಗಳಿಂದ ಮಾರುಕಟ್ಟೆಗೆ ತರುವಂತಹ ಯಾವುದೇ ಪ್ರಮುಖವಾದ ಅವಶ್ಯಕತೆಯನ್ನು ನಿವಾರಿಸಿದಂತೆ ಆಗಿರುವುದಿಲ್ಲ ಎಂದು ತಿಳಿಸುತ್ತಾ ತಮ್ಮ ಲೇಖನದಲ್ಲಿ ಇದಕ್ಕೆ ಪರಿಹಾರೋಪಾಯ ಗಳನ್ನು ತಿಳಿಸಿದ್ದಾರೆ.

ಒಂದು, ಉಗ್ರಾಣಗಳ ಹಂತದಲ್ಲಿ ಮಾರಾಟಗುಣ ಪರೀಕ್ಷಣೆ ಮಾಡಿ ಗುಣಾಂಶಗಳ ವಿವರಗಳನ್ನು ಪರದೆಯ ಮೇಲೆ ಪ್ರದರ್ಶಿಸಿದ ಸಂದರ್ಭದಲ್ಲಿ ಖರೀದಿದಾರರು ಉತ್ಪನ್ನಗಳನ್ನು ಖುದ್ದಾಗಿ ನೋಡುವ ಅವಶ್ಯಕತೆ ಇರುವುದಿಲ್ಲ. ಹಾಗೆಯೇ ಉತ್ಪನ್ನಗಳನ್ನು ಹೊಲಕ್ಕೆ ಹತ್ತಿರದಲ್ಲಿರುವ ಅಧಿಕೃತ ಉಗ್ರಾಣಗಳಲ್ಲಿ ದಾಸ್ತಾನಿಟ್ಟು, ದಾಸ್ತಾನಿನ ವಿವರಗಳನ್ನು ಮೂಲ ಮಾರುಕಟ್ಟೆಯ ವ್ಯವಹಾರ ಪರದೆಯ ಮೇಲೆ ಪ್ರದರ್ಶಿಸುವುದರ ಮೂಲಕ ಮೂಲ ಮಾರುಕಟ್ಟೆಯಲ್ಲಿರುವ ಉತ್ಪನ್ನಗಳ ವಿವರ ಅಂದರೆ ಮಾರುಕಟ್ಟೆಗೆ ಆವಕವಾಗುವಂತಹ ಉತ್ಪನ್ನಗಳು ಹಾಗೂ ದೂರದ ಉಗ್ರಾಣದಲ್ಲಿರುವ ಉತ್ಪನ್ನಗಳು ಸೇರಿರುತ್ತವೆ. ಈ ವ್ಯವಸ್ಥೆ ಜಾರಿಗೆ ಬರಬೇಕಾದರೆ ಕೆಲವು ಮೂಲಸೌಕರ್ಯಗಳ ಅವಶ್ಯಕತೆ ಅನಿವಾರ್ಯವೆನ್ನುವ ಅಂಶವನ್ನು ಪರಿಗಣಿಸಬೇಕಾಗುತ್ತದೆ.

ಎರಡು, ಉಗ್ರಾಣ ಸೇವೆ ಒದಗಿಸುವವರು ಹೊಲಕ್ಕೆ ಸಮೀಪದಲ್ಲಿ ನಿರ್ಮಿಸಲಾದ ಉಗ್ರಾಣಗಳಲ್ಲಿ ರೈತರ ಉತ್ಪನಗಳನ್ನು ಸ್ವೀಕರಿಸಿ ಪ್ರತಿಯೊಬ್ಬ ರೈತರ ವಿವರಗಳನ್ನು ದಾಖಲಿಸಬೇಕು.

ನಿಗದಿತ ಗುಣಾಂಶಗಳು ಅನುಗುಣವಾಗಿ ಉತ್ಪನ್ನದ ಪರೀಕ್ಷೆ ಮಾಡಬೇಕು. ಹಾಗೆಯೇ ಈ ಎಲ್ಲ ವಿವರಗಳನ್ನು ಸಹ ವ್ಯಾಪಕವಾದ ವಿದ್ಯುನ್ಮಾನ ಹರಾಜುಪದ್ಧತಿಯಲ್ಲಿ ವ್ಯವಹರಿಸುವುದಕ್ಕಾಗಿ ಮೂಲ ಮಾರುಕಟ್ಟೆಯಲ್ಲಿರುವ ವ್ಯವಹಾರ ಪರದೆಯ ಮೇಲೆ ಪ್ರದರ್ಶಿಸಬೇಕು. ಜೊತೆಗೆ ಮಾರಾಟವಾದ ಉತ್ಪನ್ನದ ಹೆಸರು ಮತ್ತು ಖರೀದಿದಾರರ ವಿವರಗಳನ್ನು ದಾಖಲಿಸಬೇಕು. ಲೇಖಕರು ಮುಖ್ಯವಾಗಿ ವಿಶ್ಲೇಷಿಸಿರುವ ಅಂಶವೆಂದರೆ, ಸರ್ಕಾರವು ಹೊಂದಿರುವ ಗ್ರಾಮೀಣ ಪ್ರದೇಶಗಳಲ್ಲಿ ಉಗ್ರಾಣ ನಿರ್ಮಿಸಲು ಸಂಗ್ರಹಣಾ ವ್ಯವಸ್ಥೆಯನ್ನು ಜಾರಿಗೆ ತರಲು ಮುಂದಾಗಬೇಕು. ಅಂತಹ ಉಗ್ರಾಣಗಳಲ್ಲಿ ಅಡಮಾನ ಸಾಲ ಯೋಜನೆಯನ್ನು ಅನುಷ್ಠಾನಕ್ಕೆ ತರಬೇಕೆಂಬುದಾಗಿದೆ.

ಮೂರು, ಸಂಗ್ರಹದ ಲೆಕ್ಕ ದಾಖಲೆಯ ಮೂಲ ಮಾರುಕಟ್ಟೆಯೊಂದಿಗೆ ಜೊಡಣೆಯಾಗಿರುವಂತಹ ಉಗ್ರಾಣದಾರರು ಉಗ್ರಾಣಗಳಲ್ಲಿ ಸಂಗ್ರಹದಲ್ಲಿರುವ ಪ್ರಮಾಣವನ್ನು ದಾಖಲಿಸುವ ಮಾರಾಟಕ್ಕಾಗಿಟ್ಟಂತಹ ಉತ್ಪನ್ನವನ್ನು ಅಲ್ಲಿಂದ ಚಲನೆಯಾಗದಂತೆ ನೋಡಿಕೊಳ್ಳುವ ಹಾಗೂ ಹರಾಜು ಮೂಲಕ ಮಾರಾಟವಾದ ಎಲ್ಲ ವಿವರಗಳನ್ನು ಯಾಂತ್ರೀಕೃತ ಸಂಗ್ರಹ ಲೆಕ್ಕ ದಾಖಲೆ ವಿಧಾನ ಮತ್ತು ಇನ್ನಿತರ ಎಲ್ಲ ಪೂರಕ ಕಾರ್ಯ ನಿರ್ವಹಿಸುವ ಸೌಲಭ್ಯವನ್ನು ಹೊಂದಿರಬೇಕು. ನಾಲ್ಕನೆಯದಾಗಿ ಗುಣಪರೀಕ್ಷೆಯು ಮೂಲ ಮಾರುಕಟ್ಟೆಯಲ್ಲಿ ಮಾರಾಟ ಮಾಡಬೇಕೆನ್ನುವ ರೈತರು, ಉತ್ಪನ್ನದ ಗುಣಮಟ್ಟ ಪರೀಕ್ಷೆ ಮಾಡಿಸಬೇಕು. ರೈತರ ಉತ್ಪನ್ನಗಳನ್ನು ನಿಗದಿಪಡಿಸಿದ ಗರಿಷ್ಠ ಅಂಶಗಳ ಆಧಾರದ ಮೇಲೆ ಪರೀಕ್ಷೆ ಮಾಡತಕ್ಕದ್ದು. ಉತ್ಪನ್ನಗಳನ್ನು ಹಣಪಾವತಿ ಮತ್ತು ವ್ಯವಹಾರಪೂರ್ಣಗೊಳಿಸುವುದು, ವ್ಯಾಜ್ಯ ತೀರ್ಮಾನ ಮಧ್ಯವರ್ತಿಗಳ ವಹಿವಾಟು, ಉತ್ಪನ್ನಗಳಿಗೆ ಹಣಕಾಸು ನೆರವು, ಕಾರ್ಯತಃ ಮಾರುಕಟ್ಟೆ ಈ ಎಲ್ಲ ಅಂಶಗಳನ್ನು ಕೃಷಿ ಮಾರಾಟ ಸುಧಾರಣಾ ಸಮಿತಿಯು ಒಳಗೊಂಡಿದೆ.

ಅಂತಾರಾಷ್ಟ್ರೀಯ ಕೃಷಿಮೇಳ, ಕೃಷಿ ಮಾರಾಟ ಮಂಡಳಿಯ ವಸ್ತು ಪ್ರದರ್ಶನ ಮಳಿಗೆ ಒಂದು–ನೋಟ ಚಿದಾನಂದ ಎಸ್. ನವಲಗುಂದ(2013) ಅಧ್ಯಯನದಲ್ಲಿ ದಿನಾಂಕ 07/11/2013ರಿಂದ 11/11/2013ರವರೆಗೆ 5 ತಿಂಗಳ ಕಾಲ ನಡೆದ ಅಂತಾರಾಷ್ಟ್ರೀಯ ಕೃಷಿ ಮೇಳವು ಹೇಗೆ ರೈತರಿಗೆ ಪೂರಕವಾದ ಮಾಹಿತಿಯನ್ನು ನೀಡುವಲ್ಲಿ ಸಹಕಾರಿಯಾಗಿತ್ತು ಎನ್ನುವ ಅಂಶಗಳನ್ನು ವಿಶ್ಲೇಷಿಸಿದ್ದಾರೆ.[2] ಅಂತಾರಾಷ್ಟ್ರೀಯ ಕೃಷಿ[3] ಮೇಳವೂ 700ಕ್ಕೂ ಹೆಚ್ಚು ಕೃಷಿಮಳಿಗೆಗಳ ಮೂಲಕ ವಿವಿಧ ಕೃಷಿ ಆಯಾಮಗಳ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಿದವು. ಕರ್ನಾಟಕ ಕೃಷಿ ಉತ್ಪನ್ನ ಮಾರಾಟ ನಿಯಂತ್ರಣ ಶಾಸನ 1966ನ್ನು ದಿ: 01/05/1968ರಿಂದ ಜಾರಿಗೆ ತರಲಾಗಿದೆ. ಈ ಕಾಯ್ದೆಯನ್ವಯ ರಾಜ್ಯದಾದ್ಯಂತ ಸ್ಥಾಪಿಸಿರುವ ಕೃಷಿ ಉತ್ಪನ್ನಗಳ ಮಾರುಕಟ್ಟೆಗಳು ಕಾರ್ಯ ನಿರ್ವಹಿಸುತ್ತವೆ. ಕೃಷಿಮೇಳದಲ್ಲಿ ಕೃಷಿ ಉತ್ಪನ್ನಗಳಿಗೆ ನಿಖರವಾದ

ತೂಕದ ವ್ಯವಸ್ಥೆ, ಮಾರುಕಟ್ಟೆಯ ವ್ಯವಸ್ಥೆ, ಸ್ಪರ್ಧಾತ್ಮಕ ಮಾರಾಟದ ಪದ್ಧತಿಗಳ ಮೂಲಕ ಯೋಗ್ಯ ಬೆಲೆ ವ್ಯವಸ್ಥೆಯನ್ನು ಅಳವಡಿಸುವ ಕುರಿತು ಮಾಹಿತಿ ನೀಡಲಾಗಿದೆ. ಹಾಗೆಯೇ ಸದರಿ ಕಾಯ್ದೆಗೆ ತಿದ್ದುಪಡಿಯನ್ನು ತರುವುದರ ಮೂಲಕ ಖಾಸಗಿ ಮಾರುಕಟ್ಟೆಗಳ ಸ್ಥಾಪನೆಗೂ ಅವಕಾಶವನ್ನು ಕಲ್ಪಿಸಿ ರೈತರಿಗೆ ಮಾಹಿತಿ ನೀಡಲಾಗಿದೆ.

ಕರ್ನಾಟಕ ಕೃಷಿ ಮಾರಾಟ ನೀತಿ 2013ರಿಂದ ರೈತರಿಗೆ ಉತ್ಪನ್ನಗಳ ವರ್ಗೀಕರಣದಿಂದ ಗುಣಮಟ್ಟಕ್ಕೆ ತಕ್ಕ ಬೆಲೆ, ಮಾರುಕಟ್ಟೆಗಳ ಜೋಡಣೆಯಿಂದ ಸ್ಪರ್ಧಾತ್ಮಕ ಪೈಪೋಟಿ, ದಾಸ್ತಾನು ಮಳಿಗೆಗಳ ಸೌಲಭ್ಯ, ಆನ್‌ಲೈನ್ ಮೂಲಕ ಹಣ ಪಾವತಿ ಯಂತಹ ಸೌಲಭ್ಯಗಳಿಂದ ರೈತರಿಗೆ ಪ್ರಯೋಜನೆಗಳಾಗಲಿವೆ.[3] ಅಲ್ಲದೆ ವರ್ಗೀಕರಣದ ಮೂಲಕ ಗುಣಮಟ್ಟದ ಹಾಗೂ ಆನ್‌ಲೈನ್ ಮೂಲಕ ಸುಲಭವಾಗಿ ವರದಿ ಸಲ್ಲಿಕೆಯಂತಹ ಅಂಶಗಳಿಂದ ವರ್ತಕರಿಗೆ ಉತ್ಪನ್ನಗಳ ಏಕೀಕೃತ ಲೈಸನ್ಸ್ ನೀಡಲು ಸಹಕಾರಿಯಾಗಲಿದೆ. ನ್ಯೂ ಅಗ್ರಿಕಲ್ಚರಲ್ ಪಾಲಿಸಿ 2000 ಕೇಂದ್ರ ಸರ್ಕಾರವು 28, ಜುಲೈ, 2000ರಂದು ಹೊಸ ಕೃಷಿ ಯೋಜನೆಯನ್ನು ಜಾರಿಗೆ ತಂದಿತು. ಈ ಯೋಜನೆಯ ಉದ್ದೇಶಗಳು ಈ ಕೆಳಗಿನಂತಿವೆ:[4]

- ಮೊದಲನೆ ಉದ್ದೇಶವು ವಾರ್ಷಿಕ 5 ಶೇ.4ರಷ್ಟು ಕೃಷಿಕ್ಷೇತ್ರದಲ್ಲಿ ಅಭೀವೃದ್ಧಿಯನ್ನು ಹೊಂದುವುದು. ಹಾಗೆಯೇ ಆಹಾರ ಉತ್ಪನ್ನಗಳನ್ನು ಮತ್ತು ವಾಣಿಜ್ಯ ಬೆಳೆಗಳ ಉತ್ಪಾದನೆ ಯನ್ನು ಹೆಚ್ಚಿಸುವುದು.
- ತೋಟಗಾರಿಕೆಯಲ್ಲಿ ಬದಲಾವಣೆಯನ್ನು ತರುವುದು, ಅಂದರೆ ಇರುವ ಅನೇಕ ಯೋಜನೆಗಳ ಸರಿಯಾದ ಬಳಕೆ ಮತ್ತು potential utilized by all the policies.
- ತೋಟಗಾರಿಕೆ ಬೆಳೆಗಳನ್ನು ಅಭಿವೃದ್ಧಿಪಡಿಸುವುದು, ಕೃಷಿಯಲ್ಲಿ ಕ್ರಾಂತಿ ಮಾಡುವುದು (ಶೇ.65ರಷ್ಟು ಭಾರತೀಯರು ಇಂದಿಗೂ ಕೃಷಿಯಲ್ಲಿ ತೊಡಗಿಸಿಕೊಂಡಿರುವರು)
- ಕೃಷಿಕ್ಷೇತ್ರವನ್ನು ಹೆಚ್ಚು ಹೆಚ್ಚು ಖಾಸಗಿಗೊಳಿಸುವುದು.
- ಬೆಲೆ ನಿಗದಿಯಂತಹ ವಿಚಾರದಲ್ಲಿ ರೈತರಿಗೆ ಬೆಂಬಲವಾಗಿರುವುದು.
- ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು ಜಾರಿಗೊಳಿಸುವುದು.
- ರಾಷ್ಟ್ರದಾದ್ಯಂತ ರೈತರು ಬೆಳೆದ ಉತ್ಪನ್ನಗಳ ಸಾಗಾಣಿಕೆಗೆ ನಿರ್ಬಂಧವನ್ನು ಸಡಿಲಿಸುವುದು.

ಥರ್ಡ್ ನ್ಯಾಶನಲ್ ಅಗ್ರಿಕಲ್ಚರಲ್ ಪಾಲಿಸಿ 1998-2010 ರಾಷ್ಟ್ರೀಯ ಕೃಷಿ ಯೋಜನೆಯು 2010 ದೇಶದಲ್ಲಿ ಕೃಷಿಯನ್ನು ಅಭಿವೃದ್ಧಿಪಡಿಸುವುದು ಮತ್ತು ಅರಣ್ಯವನ್ನು ಅಭಿವೃದ್ಧಿಪಡಿಸುವು

ದನ್ನು ಒಳಗೊಂಡಿತ್ತು.[5] ಈ ಯೋಜನೆಯು ಬಹಳ ಕ್ರಿಯಾತ್ಮಕವಾದ ಗುರಿಗಳನ್ನು ಹೊಂದಿದ್ದು, ಅದರಲ್ಲಿ ಕೃಷಿಯೂ ಇತ್ತೀಚಿನ ದಿನಗಳಲ್ಲಿ ಎದುರಿಸುತ್ತಿರುವ ಸವಾಲುಗಳನ್ನು ಹೇಗೆ ನಿವಾರಿಸಬಹುದು ಮತ್ತು ಕೃಷಿಯು ದೇಶದ ಅಭಿವೃದ್ಧಿಯಲ್ಲಿ ಪಾತ್ರವನ್ನು ಹೆಚ್ಚಿಸುವುದು. ಅಲ್ಲದೆ ಈ ಹೊಸ ಪಾಲಿಸಿಯು, ಹೊಸ ತಂತ್ರಜ್ಞಾನಗಳನ್ನು ಬಳಸಿಕೊಂಡು, ಕೃಷಿಕ್ಷೇತ್ರದಲ್ಲಿ ಹೆಚ್ಚಿನ ಅಭಿವೃದ್ಧಿಯನ್ನು ಪಡೆಯಬೇಕು ಮತ್ತು ಉತ್ಪಾದಿಸಿದ ಉತ್ಪನ್ನಗಳಿಗೆ ಸರಿಯಾದ ಮಾರುಕಟ್ಟೆಯನ್ನು ಒದಗಿಸುವುದನ್ನು ಒಳಗೊಂಡಿದೆ. ಉತ್ಪಾದನೆಯನ್ನು ಹೆಚ್ಚಿಸಬೇಕೆಂದು ಈ ಕೃಷಿ ಯೋಜನೆಯಲ್ಲಿ ಮುಖ್ಯವಾಗಿ ಚರ್ಚಿಸಲಾಗಿದೆ.

**ರಾಷ್ಟ್ರೀಯ ಕೃಷಿ ಯೋಜನೆಯ 2020 ಉದ್ದೇಶಗಳು:** ಈ ಯೋಜನೆಯ ಪ್ರಮುಖ ಉದ್ದೇಶವು ದೇಶದ ನೈಸರ್ಗಿಕ ಸಂಪನ್ಮೂಲವನ್ನು ಸಮರ್ಪಕವಾಗಿ ಬಳಸಿಕೊಂಡು ದೇಶದ ಆದಾಯವನ್ನು ಹೆಚ್ಚಿಸುವುದು, ಅಂದರೆ ಕೃಷಿಕ್ಷೇತ್ರದಿಂದಲೇ ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಬೇಕು ಮತ್ತು ಕೃಷಿ ಉತ್ಪನ್ನಗಳ ರಫ್ತು ಹೆಚ್ಚಿಸುವುದಲ್ಲದೆ ಉತ್ಪಾದಕರಿಗೆ ಅಂದರೆ ರೈತರಿಗೆ ಅತಿ ಹೆಚ್ಚು ಲಾಭ ಗಳಿಸುವಂತೆ ಮಾಡುವುದು ಈ ಯೋಜನೆಯ ಪ್ರಮುಖ ಉದ್ದೇಶ ವಾಗಿದೆ.[6] ಉದ್ದೇಶಗಳು: ಒಂದು, ಆಹಾರಭದ್ರತೆಯನ್ನು ಒದಗಿಸುವುದು. ಎರಡು, ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು ಮತ್ತು ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವಲ್ಲಿ ಹೆಚ್ಚಿನ ಸ್ಪರ್ಧೆಯನ್ನು ಏರ್ಪಡಿಸುವುದು. ಮೂರು, ಕೃಷಿಕ್ಷೇತ್ರವನ್ನು ಇತರೆ ಎಲ್ಲಾ ಕ್ಷೇತ್ರದೊಂದಿಗೆ ಆಳವಾದ ಸಂಬಂಧವನ್ನು(deepen linkages) ಸೃಷ್ಟಿಸುವುದು, ನಾಲ್ಕು ರೈತರಿಗೆ ಕೇವಲ ಕೃಷಿ ಕ್ಷೇತ್ರವಲ್ಲದೆ ಇತರೆ ಕ್ಷೇತ್ರದಲ್ಲೂ ಅಭಿವೃದ್ಧಿ ಹೊಂದುವಂತಹ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದು. ಐದು, ದೇಶದ ನೈಸರ್ಗಿಕ ಸಂಪನ್ಮೂಲವನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು. ಹೀಗೆ ರಾಷ್ಟ್ರೀಯ ಕೃಷಿ ಯೋಜನೆಯ 2020 ಉದ್ದೇಶಗಳು ದೇಶದ ನೈಸರ್ಗಿಕ ಸಂಪನ್ಮೂಲವನ್ನು ಸಮರ್ಪಕವಾಗಿ ಬಳಿಸಿಕೊಂಡು ದೇಶದ ಅಭಿವೃದ್ಧಿಯಾಗುವುದರ ಜೊತೆ ಜೊತೆಗೆ, ರೈತರ ಅಭಿವೃದ್ಧಿಯೂ ಆಗಬೇಕು ಎನ್ನುವ ಅಂಶಗಳನ್ನು ಅಧ್ಯಾಯದಲ್ಲಿ ವ್ಯಕ್ತಪಡಿಸಿದ್ದಾರೆ.

ಈ ಮೇಲಿನ ಅಧ್ಯಯನಗಳನ್ನು ವಿಶ್ಲೇಷಿಸಿದಾಗ, ಭಾರತದಲ್ಲಿ ಕೃಷಿಗೆ ಅದರದೇ ಆದ ಸ್ಥಾನವಿದೆ ಎಂಬುದು ತಿಳಿಯುತ್ತದೆ. ಸರ್ಕಾರದಿಂದ ಪ್ರತಿ ವರ್ಷ ಹೊಸ ಹೊಸ ಯೋಜನೆಗಳನ್ನು ಬಿಡುಗಡೆ ಮಾಡುತ್ತಿದ್ದಾರೆ, ಯೋಜನೆಗಳನ್ನು ಬಳಸಿಕೊಂಡು ರೈತರು ಕೃಷಿ ಉತ್ಪಾದನೆಯನ್ನು ಮಾಡುತ್ತಿದಾರೆ. ಆದರೂ ಯೋಜನೆಗಳ ಸಮರ್ಪಕ ಬಳಕೆ ಮತ್ತು ರೈತರ ಅಭಿವೃದ್ಧಿಯು, ಪೂರ್ವನಿರ್ಧರಿತ ಮಟ್ಟಕ್ಕೆ ಗುರಿ ತಲುಪಲು ಸಾಧ್ಯವಾಗುತ್ತಿಲ್ಲ ಎನ್ನುವ ಅಂಶಗಳು ಬೆಳಕಿಗೆ

ಬರುತ್ತವೆ. ಮುಂದಿನ ಭಾಗದಲ್ಲಿ ಸರ್ಕಾರದಿಂದ ರೈತಪರ ಕೃಷಿ ಮತ್ತು ತೋಟಗಾರಿಕೆ ನೀತಿಗಳನ್ನು ಅಧ್ಯಯನ ಮಾಡುವುದು.

ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಕೃಷಿ ಮತ್ತು ತೋಟಗಾರಿಕೆ ಕೃಷಿಗೆ ಸಂಬಂಧಿಸಿದಂತೆ ಅನೇಕ ಯೋಜನೆಗಳಿವೆ. ಅವುಗಳ ಸಂಪೂರ್ಣ ವಿವರ ಈ ಕೆಳಗಿನಂತಿದೆ. ರೈತರಿಗೆ ಇಲಾಖೆ ಯಡಿಯಲ್ಲಿ ನೀಡುತ್ತಿರುವ ವಿವಿಧ ಯೋಜನೆಗಳಿಂದ ತುಂಬಾ ಅನುಕೂಲಗಳಾಗಿವೆ ಮೊದಲನೆಯದಾಗಿ,

1. ತೋಟಗಾರಿಕೆ ಇಲಾಖೆಯು ಅನುಷ್ಠಾನ ಮಾಡುತ್ತಿರುವ ವಿವಿಧ ಯೋಜನೆಗಳ ಹಾಗೂ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಮಗ್ರ ಪೋಷಕಾಂಶಗಳ ನಿರ್ವಹಣೆ/ ಸಮಗ್ರ ಕೀಟ/ರೋಗಗಳ ನಿಯಂತ್ರಣ, ಪ್ರದೇಶ ವಿಸ್ತರಣೆ ಹಾಗೂ ಪುನಶ್ಚೇತನ ಕಾರ್ಯಕ್ರಮದಡಿ ಇಲಾಖೆಯಿಂದ ಆಯ್ಕೆ ಮಾಡಿದ ರೈತರು ಖರೀದಿಸಿದ ಕ್ರಿಮಿನಾಶಕಗಳು, ಗೊಬ್ಬರ ಹಾಗೂ ಇತ್ಯಾದಿ ಪರಿಕರಗಳಿಗೆ ಸಹಾಯಧನ ಬಿಡುಗಡೆ ಮಾಡುವುದು.

- ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಸಮಗ್ರ ಪೋಷಕಾಂಶಗಳ ನಿರ್ವಹಣೆ/ಸಮಗ್ರ ಕೀಟ/ರೋಗಗಳ ನಿಯಂತ್ರಣ, ಪ್ರದೇಶ ವಿಸ್ತರಣೆ ಹಾಗೂ ಪುನಶ್ಚೇತನ ಕಾರ್ಯಕ್ರಮದಡಿಯಲ್ಲಿ ಅವಶ್ಯವಿರುವ ಸೂಕ್ಷ್ಮ ಪರಿಕರಗಳನ್ನು ರೈತರೇ ನೇರವಾಗಿ ಅನುಮೋದಿತ ದರಗಳಿಗೆ ಸರಬರಾಜುದಾರರಿಂದ ಖರೀದಿಸುವುದು.[7] ಒಂದು ವೇಳೆ ಪರಿಕರಗಳನ್ನು ಅನುಮೋದಿತ ದರಕ್ಕಿಂತ ಹೆಚ್ಚಿನ ದರದಲ್ಲಿ ಖರೀದಿಸಿದಲ್ಲಿ ಅನುಮೋದನೆಯಾದ ದರಗಳಿಗೆ ಮಿತಿಗೊಳಿಸುವುದು.
- ರೈತರು ಕ್ರಿಮಿನಾಶಕಗಳನ್ನು ಗೊಬ್ಬರಗಳನ್ನು ಖರೀದಿಸಿದ ಬಗ್ಗೆ ಕಡ್ಡಾಯವಾಗಿ ಖರೀದಿ ಬಿಲ್ಲುಗಳನ್ನು ಪಡೆದು ಸಹಾಯಧನ ಪಾವತಿಸಬೇಕಾಗುತ್ತದೆ(with Tin No.Applicable wherever I required).
- ರೈತರು ಸೂಕ್ಷ್ಮ ಪರಿಕರಗಳನ್ನು ಖರೀದಿ ಮಾಡಿ ಇಲಾಖೆಗೆ ಸಲ್ಲಿಸುವ ಖರೀದಿ ಬಿಲ್ಲಿನಲ್ಲಿ TIN ಸಂಖ್ಯೆ ಕಡ್ಡಾಯವಾಗಿ ಇರುವುದನ್ನು ದೃಢೀಕರಿಸಿಕೊಂಡು ಸಹಾಯಧನದ ಮೊತ್ತವನ್ನು ಅನುಮೋದಿತ ದರಗಳಲ್ಲಿ ಮಿತಿಗೊಳಿಸಿ ರೈತರ ಖಾತೆಗೆ ECS/NEFT ಮುಖಾಂತರ ಜಮಾ ಮಾಡತಕ್ಕದ್ದು.
- ಪ್ರತಿ ಫಲಾನುಭವಿಗೆ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಹಾಗೂ ಇಲಾಖೆಯ ವಿವಿಧ ಕಾರ್ಯಕ್ರಮಗಳಡಿ ಅನುಷ್ಠಾನಗೊಳಿಸಲು ಆಯಾ ಯೋಜನೆಗೆ

ಸಂಬಂಧಿಸಿದಂತೆ ನೀಡಿರುವ ಮಾರ್ಗಸೂಚಿಯಂತೆ(as per scheme Guidelines of each scheme) ಸಹಾಯಧನವನ್ನು ಮಿತಿಗೊಳಿಸುವುದು.

- ಸಹಾಯಧನವನ್ನು ನೀಡುವ ಪೂರ್ವದಲ್ಲಿ ರೈತರಿಂದ ಯೋಜನೆಯಲ್ಲಿ ತಿಳಿಸಿರುವಂತೆ ಅರ್ಜಿ ನಮೂನೆ, ಪಹಣಿ ಹಾಗೂ ಇತರೆ ಎಲ್ಲ ಅವಶ್ಯಕ ದಾಖಲಾತಿಗಳನ್ನು ಪಡೆದು ಕೊಳ್ಳುವುದು ಕಡ್ಡಾಯವಾಗಿರುತ್ತದೆ.
- ತೋಟಗಾರಿಕೆ ಉಪನಿರ್ದೇಶಕರು ಅನುಮೋದಿತ ಉತ್ಪಾದಕರು/ಸರಬರಾಜುದಾರರೊಂದಿಗೆ ಸಭೆ ಜರುಗಿಸಿ ರೈತರ ಖರೀದಿಗೆ ಅನುಕೂಲವಾಗುವಂತೆ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಜಿಲ್ಲೆಗೆ ಬೇಕಾಗುವ ಪ್ರಮಾಣದ ಪರಿಕರಗಳ ದಾಸ್ತಾನುಗಳನ್ನು ಮಾರಾಟಕ್ಕೆ ಇಡಲು ಕ್ರಮ ವಹಿಸುವುದು.
- ವಿವಿಧ ಪರಿಕರಗಳು ದೊರೆಯುವ ಸ್ಥಳ ಹಾಗೂ ಇಲಾಖೆಯು ನಿಗದಿಪಡಿಸಿರುವ ದರಗಳ ಬಗ್ಗೆ ತೋಟಗಾರಿಕೆ ಇಲಾಖೆಯ ಎಲ್ಲ ಕಛೇರಿಗಳಲ್ಲಿ ಹಾಗೂ ರೈತ ಸಂಪರ್ಕ ಕೇಂದ್ರಗಳ ಸೂಚನಾ ಫಲಕಗಳಲ್ಲಿ ಎದ್ದು ಕಾಣುವಂತೆ ಪ್ರಕಟಣೆ ಮಾಡುವುದು ಕಡ್ಡಾಯವಾಗಿರುತ್ತದೆ. ಇನ್ನೂ ಹೆಚ್ಚಿನ ಮಾಹಿತಿಯಗಾಗಿ ಆಕಾಶವಾಣಿ, ವಾರ್ತಾ ಮತ್ತು ಪ್ರಚಾರ ಇಲಾಖೆ ಹಾಗೂ ಇತರೇ ಮಾಧ್ಯಮಗಳ ಮೂಲಕ ಪ್ರಚಾರ ಕೊಡುವುದು.
- ರೈತರು ಸೂಕ್ಷ್ಮ ಪರಿಕರಗಳನ್ನು ಖರೀದಿಸಿ ತೋಟಗಾರಿಕೆ ಬೆಳೆಗಳಿಗೆ ಬಳಿಸಿರುವ ಬಗ್ಗೆ ಜಿಲ್ಲಾ ತೋಟಗಾರಿಕೆ ಉಪನಿರ್ದೇಶಕರು ಶೇ.10ರಷ್ಟು ತಾಲೂಕಿನ ಕಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಶೇ.40ರಷ್ಟು ಹಾಗೂ ಹೋಬಳಿ ಮಟ್ಟದ ಅಧಿಕಾರಿಗಳು ಶೇ.100ರಷ್ಟು ಕ್ಷೇತ್ರ ಪರಿಶೀಲನೆ ಮಾಡಿ ದೃಢೀಕರಿಸಬೇಕು.
- ಪ್ರದೇಶ ವಿಸ್ತರಣೆ, ಪುನಶ್ಚೇತನ ಕಾರ್ಯಕ್ರಮ, ಸಮಗ್ರ ಪೋಷಕಾಂಶಗಳ ನಿರ್ವಹಣೆ ಮತ್ತು ಸಮಗ್ರ ರೋಗ ಪೀಡೆ ನಿರ್ವಹಣೆ ಹಾಗೂ ಸಾವಯವ ಬೇಸಾಯ ಮತ್ತು ಇತರೆ ಕಾರ್ಯಕ್ರಮಗಳಡಿಯಲ್ಲಿ ಆಯಾ ಜಿಲ್ಲೆಗಳಿಗೆ ನಿಗದಿಪಡಿಸಿರುವ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ಯಾವುದೇ ಕಾರಣಕ್ಕೂ ಮೀರುವಂತಿಲ್ಲ. ಆರ್ಥಿಕ ಗುರಿ ಮೀರಿದಲ್ಲಿ ಅಂತಹ ಜಿಲ್ಲೆಯ ತೋಟಗಾರಿಕೆ ಉಪನಿರ್ದೇಶಕರುಗಳೇ ವೈಯಕ್ತಿಕ ಹೊಣೆಗಾರರಾಗುತ್ತಾರೆ.

ಮೇಲಿನ ಯೋಜನೆಯಡಿಯಲ್ಲಿ ರೈತರಿಗೆ ಸಮಗ್ರ ಪೋಷಕಾಂಶಗಳ ನಿರ್ವಹಣೆ/ ಸಮಗ್ರ ಕೀಟ/ರೋಗಗಳ ನಿಯಂತ್ರಣ, ಪ್ರದೇಶ ವಿಸ್ತರಣೆ ಹಾಗೂ ಪುನಶ್ಚೇತನ ಕಾರ್ಯಕ್ರಮದಡಿ ಇಲಾಖೆಯಿಂದ ಆಯ್ಕೆ ಮಾಡಿದ ರೈತರು ಖರೀದಿಸಿದ ಕ್ರಿಮಿನಾಶಕಗಳು, ಗೊಬ್ಬರ ಹಾಗೂ ಇತ್ಯಾದಿ ಪರಿಕರಗಳಿಗೆ ಸಹಾಯಧನವನ್ನು ನೀಡುತ್ತದೆ. ಹಣವನ್ನು ಬಿಡುಗಡೆ ಮಾಡವುದಕ್ಕೆ

ಕೆಲವು ನಿಬಂಧನೆಗಳಡಿಯಲ್ಲಿ ಪ್ರತಿ ವರ್ಷದ ಮಾರ್ಗಸೂಚಿಯ ಅನುಸಾರ ಕೊಡಲಾಗುತ್ತದೆ. ಯಾವ ರೈತರು ಇಲಾಖೆಯ ನಿಬಂಧನೆಗಳನ್ನು ಪೂರೈಸುತ್ತಾರೋ ಅಂತಹ ರೈತರಿಗೆ ಹಣವನ್ನು ಬಿಡುಗಡೆ ಮಾಡಲಾಗುತ್ತದೆ.

## ತೋಟಗಾರಿಕೆ ಬೆಳೆಗಳಲ್ಲಿ ಸಾವಯವ ಕೃಷಿ ಕಾರ್ಯಕ್ರಮ ವಿವರಗಳು

ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ಸ್ಥಳೀಯವಾಗಿ ದೊರೆಯುವ ಕೃಷಿ ತ್ಯಾಜ್ಯ ವಸ್ತುಗಳನ್ನು ಬಳಸಿಕೊಂಡು ಅತಿ ಕಡಿಮೆ ಖರ್ಚಿನಲ್ಲಿ ಕಾಂಪೋಸ್ಟ್, ಎರೆಹುಳು ಗೊಬ್ಬರ, ಸಾವಯವ ಪರಿಕರಗಳನ್ನು ಉತ್ಪಾದಿಸಿ ಮಣ್ಣು ಮತ್ತು ವಿವಿಧ ತೋಟಗಾರಿಕಾ ಉತ್ಪನ್ನಗಳನ್ನು ಉತ್ಪಾದಿಸಲು ತೋಟಗಾರಿಕೆಯಲ್ಲಿ ಸಾವಯವ ಕೃಷಿ ಅಳವಡಿಕೆ ಮತ್ತು ದೃಢೀಕರಣ, ಎರೆಹುಳು ಗೊಬ್ಬರ ಮತ್ತು ಜೀವಸಾರ ಉತ್ಪಾದನಾ ಘಟಕಗಳನ್ನು ನಿರ್ಮಿಸಿ ಉತ್ಪಾದನೆ ಮಾಡಲು ಸಹಾಯಧನ ನೀಡಲಾಗುತ್ತದೆ.[8] ಎರೆಹುಳು ಘಟಕವು ಸಾವಯವ ಕೃಷಿಗೆ ಪೂರಕವಾಗಿದ್ದು, ಮಹತ್ವದ ಪಾತ್ರ ವಹಿಸುತ್ತದೆ. ತೋಟಗಳಲ್ಲಿ ದೊರಕುವ ಕೃಷಿ ತ್ಯಾಜ್ಯ ವಸ್ತುಗಳನ್ನು ಉಪಯೋಗಿಸಿಕೊಂಡು, ಎರೆ ಹುಳು ಉತ್ಕೃಷ್ಟವಾದ ಸಾವಯವ ಗೊಬ್ಬರವನ್ನಾಗಿ ಪರಿವರ್ತಿಸುತ್ತವೆ. ಇಂತಹ ಎರೆಹುಳು ಗೊಬ್ಬರ ಘಟಕಗಳನ್ನು ನಿರ್ಮಿಸಿಕೊಳ್ಳುವ ರೈತರಿಗೆ ಸಹಾಯಧನ ನೀಡಲಾಗುವುದು.

ಎರೆಹುಳು ಗೊಬ್ಬರ ಘಟಕ ನಿರ್ಮಾಣ ಮಾಡಲು ಇಲಾಖೆಯಿಂದ ಧನಸಹಾಯವನ್ನು ಪಡೆಯಲು ಕೆಳಕಂಡ ಅಂಶಗಳನ್ನು ಒಳಗೊಂಡಿದೆ.

- ರೈತರು ಎರೆಹುಳು ಗೊಬ್ಬರ ಉತ್ಪಾದನಾ ಘಟಕ ಸ್ಥಾಪಿಸಲು ಸಹಾಯಧನ ನೀಡುವುದು.
- ಪ್ರತಿಘಟಕದ ನಿರ್ಮಾಣದ ಅಂದಾಜು ವೆಚ್ಚ ರೂ. 60,000/–ಗಳಲ್ಲಿ ಶೇ 50% ಗರಿಷ್ಠ ರೂ. 30,000/–ಗಳಿಗೆ ಮಿತಿಗೊಳಿಸಿ ಪ್ರತಿ ಫಲಾನುಭವಿಗೆ ಸಹಾಯಧನ ನೀಡಬಹುದು.
- ಎರೆಹುಳು ಗೊಬ್ಬರ ಘಟಕ/ ಬಯೋ ಡೈಜೆಸ್ಟರ್ ಘಟಕಕ್ಕೆ ಸಹಾಯಧನ ಪಡೆಯಲು ಬಯಸುವ ಫಲಾನುಭವಿಗಳು ಹಸು, ಎಮ್ಮೆ, ಕುರಿ, ಮೇಕೆ, ಕೋಳಿ ಸಾಗಾಣಿಕೆ ಇವುಗಳಲ್ಲಿ ಕನಿಷ್ಠ ಯಾವುದಾದರೊಂದನ್ನು ಹೊಂದಿರಬೇಕು. ಎರೆಹುಳು ಗೊಬ್ಬರ ಉತ್ಪಾದನಾ ಘಟಕ ನಿರ್ಮಿಸಲು ತಗಲುವ ಅಂದಾಜು ವೆಚ್ಚ(Indicative Costs):

ಮೇಲಿನ ಯೋಜನೆಯ ವಿವರಗಳು ರೈತರಿಗೆ ಅನುಕೂಲವಾಗಲೆಂದು ಎರೆಹುಳು ಗೊಬ್ಬರದ ತಯಾರಿಕೆಗೆ ಹೊಲಗಳಲ್ಲಿಯೇ ಅನುವು ಮಾಡಿಕೊಡುವ ಯೋಜನೆಯಾಗಿದೆ. ಸರ್ಕಾರವು ಪ್ರತಿ ಘಟಕದ ನಿರ್ಮಾಣಕ್ಕೆ ತಗಲುವ ವೆಚ್ಚದಲ್ಲಿ, ಶೇ.50ರಷ್ಟನ್ನು ಕೊಡುತ್ತದೆ.

ಈ ಯೋಜನೆಯ ಲಾಭ ಪಡೆಯಲು ರೈತರು ಸ್ವಂತ ಹಸು, ಎಮ್ಮೆ, ಕುರಿ ಇತ್ಯಾದಿ ಪ್ರಾಣಿಗಳನ್ನು ಹೊಂದಿರಬೇಕು. ಸಾವಯವ ಗೊಬ್ಬರದಿಂದ ಬೆಳೆಗಳನ್ನು ಬೆಳೆಯಲು ರೈತರಿಗೆ ಅನುಕೂಲವಾಗುತ್ತದೆ.

**ಕೋಷ್ಟಕ–14**

**ಎರೆಹಳು ಗೊಬ್ಬರದ ಘಟಕ ನಿರ್ಮಿಸಲು ತಗಲುವ ಅಂದಾಜು ವೆಚ್ಚದ ವಿವರಗಳು**

| ಕ್ರ.ಸಂ. | ಅಂದಾಜು ವೆಚ್ಚದ ವಿವರಗಳು | ರೂ.ಗಳು |
|---|---|---|
| 1. | ನೆರಳಿಗಾಗಿ ಮೇಲ್ಛಾವಣಿ ನಿರ್ಮಿಸುವುದು. ಉದ್ದ 50'* ಅಗಲ 20'* ಎತ್ತರ 8ರಿಂದ 10 ಅಡಿ(ಆಸ್‌ಬೆಸ್ಟಸ್/ಮಂಗಳೂರು ಹೆಂಚಿನ ಮೇಲ್ಛಾವಣಿ, ಕಲ್ಲು/ಸಿಮೆಂಟ್ ಕಂಬಗಳು ಸೇರಿದಂತೆ ಇತರೆ ಅಗತ್ಯ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು) | 30,000–00 |
| 2. | ಇಟ್ಟಿಗೆ ಅಥವಾ ಹಾಲೋಬ್ಲಾಕ್ಸ್‌ಗಳಿಂದ ತೊಟ್ಟಿಗಳ ನಿರ್ಮಾಣ (ಉದ್ದ 20'* ಅಗಲ 4'* ಎತ್ತರ 3') 240 ಘನ ಅಡಿ ಒಟ್ಟು 8 ತೊಟ್ಟಿಗಳು–1920 ಘನ ಅಡಿ ಒಂದು ತೊಟ್ಟಿಗೆ ರೂ. 2250/–ರಂತೆ, ತೊಟ್ಟಿಗಳ ಮಧ್ಯೆ ಕನಿಷ್ಠ 21/2ಯಿಂದ 3 ಅಡಿ ಬಿಟ್ಟು ಇನ್ನೊಂದು ತೊಟ್ಟಿಯನ್ನು ನಿರ್ಮಿಸ ಬೇಕಾಗಿರುತ್ತದೆ. | 18,000–00 |
| 3 | ಎರೆಹುಳುಗಳ ಖರೀದಿ 3 ಕೆ.ಜಿ. ಒಂದು ತೊಟ್ಟಿಗೆ, ಒಂದು ಕೆ.ಜಿ ಎರೆಹುಳು ರೂ.2400/– ಪ್ರತಿ ಕೆ.ಜಿ.ಯಂತೆ, ಒಟ್ಟು 8 ತೊಟ್ಟಿಗೆ 24 ಕೆ.ಜಿ.ಎರೆಹುಳು. | 7200–00 |
| 4. | ಇತರೆ ವೆಚ್ಚ | 4800–00 |
| | ಒಟ್ಟು | 60000–00 |

**ಮಾಹಿತಿಯಮೂಲ:** ತೋಟಗಾರಿಕೆ ಇಲಾಖೆ, ಬಳ್ಳಾರಿ, 2012–13

ಮೇಲ್ಕಂಡ ಖರ್ಚಿನ ಶೇ.50ರಷ್ಟು ಅಥವಾ ಗರಿಷ್ಠ ರೂ. 30,000/–ಗಳಿಗೆ ಮಿತಿಗೊಳಿಸಿ ಸಹಾಯಧನವನ್ನು ರೈತರಿಗೆ ನೀಡುವುದು ಇಲಾಖೆಯ ಮುಖ್ಯ ಉದ್ದೇಶವಾಗಿದೆ.

ಮೇಲಿನ ಕೋಷ್ಟಕ–14ರಲ್ಲಿ ಎರೆಹಳು ಗೊಬ್ಬರದ ಘಟಕ ನಿಮಿಸಲು ತಗಲುವ ಅಂದಾಜು ವೆಚ್ಚದ ಮಾಹಿತಿಯನ್ನು ತೋಟಗಾರಿಕೆ ಇಲಾಖೆಯಿಂದ ಪಡೆಯಲಾಗಿದೆ. ನೆರಳಿಗಾಗಿ ಮೇಲ್ಛಾವಣಿ ನಿರ್ಮಿಸುವುದು. ಉದ್ದ 50'* ಅಗಲ 20'* ಎತ್ತರ 8ರಿಂದ 10 ಅಡಿ(ಆಸ್‌ಬೆಸ್ಟಸ್/ ಮಂಗಳೂರು ಹೆಂಚಿನ ಮೇಲ್ಛಾವಣಿ, ಕಲ್ಲು/ ಸಿಮೆಂಟ್ ಕಂಬಗಳು ಸೇರಿದಂತೆ ಇತರೆ ಅಗತ್ಯ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು) ರೂ. 30000/–ಯಂತೆ ಮತ್ತು ಎರೆಹುಳುಗಳ ಖರೀದಿ 3 ಕೆ.ಜಿ. ಒಂದು ತೊಟ್ಟಿಗೆ, ಒಂದು ಕೆ.ಜಿ ಎರೆಹುಳು ರೂ.2400/– ಪ್ರತಿ ಕೆ.ಜಿ.ಯಂತೆ, ಒಟ್ಟು 8 ತೊಟ್ಟಿಗೆ 24 ಕೆ.ಜಿ. ಎರೆಹುಳುಗಳಿಗೆ ರೂ. 7200/–, ಹಾಗೂ ಕೋಷ್ಟಕ–14ರಲ್ಲಿ ಇತರೆ ವೆಚ್ಚವೂ ರೂ. 4800ರಂತೆ ಇಲಾಖೆಯೂ ಎರೆಹುಳು ಗೊಬ್ಬರ ಮಾಡಲಿಕ್ಕೆ ರೈತರಿಗೆ ನೀಡುತ್ತದೆ. ಹಾಗೆಯೇ ರೈತರ ಖರ್ಚಿನ ಶೇ.50ರಷ್ಟು, ಅಥವಾ ಗರಿಷ್ಠ 30000/– ರೂ. ಗಳಷ್ಟು ಧನ ಸಹಾಯವನ್ನು ಮಾಡುತ್ತಾರೆ.

**ಜೀವಸಾರ ಉತ್ಪಾದನಾ ಘಟಕ(ಬಯೋ ಡೈಜೆಸ್ಟರ್):** ಜೀವಸಾರ ಉತ್ಪಾದನಾ ಘಟಕದಿಂದ ದೊರಕುವ ಸಾರವು ಬೆಳೆಗಳಿಗೆ ಅಮೂಲ್ಯವಾದ ಸತು ಪೋಷಕಾಂಶಗಳನ್ನು ನೀಡುವುದರ ಜೊತೆಗೆ ಹಲವು ರೋಗ, ಕೀಟ ನಿರೋಧಕ/ನಿಯಂತ್ರಕ ಗುಣಗಳನ್ನು ಹೊಂದಿರುವ ಕಾರಣ, ಇದನ್ನು ಸಾವಯವ ಬೇಸಾಯದಲ್ಲಿ ಬಳಸಲು ತಾಂತ್ರಿಕವಾದ ಶಿಫಾರಸ್ಸು ಮಾಡಲಾಗಿದೆ. ಪ್ರತಿ ಫಲಾನುಭವಿಗೆ ಈ ಘಟಕದ ನಿರ್ಮಾಣಕ್ಕೆ ತಗಲುವ ಒಟ್ಟು ಖರ್ಚಿನ ಶೇ.50 ರಷ್ಟು ಅಥವಾ ಗರಿಷ್ಠ ರೂ.30,000/–ಗಳಿಗೆ ಮಿತಿಗೊಳಿಸಿ ಸಹಾಯಧನ ನೀಡಲಾಗುವುದು. ಜೀವಸಾರ ಉತ್ಪಾದನಾ ಘಟಕ ನಿರ್ಮಿಸಲು ತಗಲುವ ಅಂದಾಜು ವೆಚ್ಚ.

**ಕೋಷ್ಟಕ–15**

**ಜೀವಸಾರ ಉತ್ಪಾದನಾ ಘಟಕ ನಿರ್ಮಿಸಲು ತಗಲುವ ಅಂದಾಜು ವೆಚ್ಚದ ವಿವರಗಳು**

| ಕ್ರ.ಸಂ | ಅಂದಾಜು ವೆಚ್ಚದ ವಿವರಗಳು | ರೂ.ಗಳು |
|---|---|---|
| 1 | ಡೈಜೆಸ್ಟರ್ ಟ್ಯಾಂಕ್ ನಿರ್ಮಾಣ (20x10x6) ಮತ್ತು 1200 ಘನ ಅಡಿ ಸಂಗ್ರಹಣಾ ತೊಟ್ಟಿ (Storage Tank)( 5x5x8) | 55,000/– |
| 2 | ಪಿವಿಸಿ ಪೈಪ್ ಮತ್ತು ಮೆಶ್‌ಗೆ ತಗಲುವ ವೆಚ್ಚ, ನೀರಿನ ಪೈಪ್ ಲೈನ್ ಇತ್ಯಾದಿ | 3000/– |
| 3 | ಇತರೆ ವೆಚ್ಚ | 2000/– |
| | ಒಟ್ಟು | 60,000/– |

**ಮಾಹಿತಿಯ ಮೂಲ:** ತೋಟಗಾರಿಕೆ ಇಲಾಖೆ ಬಳ್ಳಾರಿ, 2012–13

ಮೇಲಿನ ಕೋಷ್ಟಕ–15ರಲ್ಲಿ ತೋಟಗಾರಿಕೆ ಇಲಾಖೆಯ ಜೀವಸಾರ ಉತ್ಪಾದನಾ ಘಟಕ ನಿರ್ಮಿಸಲು ತಗಲುವ ಅಂದಾಜು ವೆಚ್ಚದ ವಿವರವನ್ನು ನೀಡಲಾಗಿದೆ. ಇಲಾಖೆಯು ಡೈಜೆಸ್ಟರ್ ಟ್ಯಾಂಕ್ ನಿರ್ಮಾಣ(20x10x6) ಮತ್ತು 1200 ಘನ ಅಡಿ ಸಂಗ್ರಹಣಾ ತೊಟ್ಟಿ (Storage Tank) (5x5x8) ನಿರ್ಮಾಣಕ್ಕೆ ರೂ. 55000/–ಗಳನ್ನು ನೀಡುತ್ತಿದ್ದು, ಪಿವಿಸಿ ಪೈಪ್ ಮತ್ತು ಮೆಶ್‌ಗೆ ತಗಲುವ ವೆಚ್ಚ, ನೀರಿನ ಪೈಪ್ ಲೈನ್ ಇತ್ಯಾದಿಗಳಿಗೆ ರೂ. 3000/–ಗಳನ್ನು ಹಾಗೂ ಇತರೆ ವೆಚ್ಚವನ್ನು ರೈತರಿಗೆ ರೂ. 2000ಗಳನ್ನು ನೀಡುತ್ತಿದ್ದಾರೆ.

3. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ತೋಟಗಾರಿಕೆ ಬೆಳೆಗಳಲ್ಲಿ ಸಾವಯವ ಕೃಷಿ ಅಳವಡಿಕೆ ಮತ್ತು ದೃಢೀಕರಣ ಕಾರ್ಯಕ್ರಮ: ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ತೋಟಗಾರಿಕೆ ಬೆಳೆಗಳಲ್ಲಿ ಸಾವಯವ ಕೃಷಿ ಅಳವಡಿಕೆ ಮತ್ತು ದೃಢೀಕರಣ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಉಲ್ಲೇಖ (2)ರ ಗೈಡ್‌ಲೈನ್ಸ್‌ನ ಪತ್ರದಲ್ಲಿ ಮಾರ್ಗಸೂಚಿಯನ್ನು ನೀಡಿರುತ್ತಾರೆ(ಪತ್ರದ ಪ್ರತಿಯನ್ನು ಮಾಹಿತಿ ಮತ್ತು ಅನುಷ್ಠಾನಕ್ಕಾಗಿ ಅನುಬಂಧಿಸಿದೆ). ಈ ಕಾರ್ಯಕ್ರಮವು ಪ್ರಸ್ತಾವನೆ ಆಧಾರಿತ ಕಾರ್ಯಕ್ರಮವಾಗಿದ್ದು NHM, ವತಿಯ Gu Empowered Committee ಸಭೆಯಲ್ಲಿ ಅನುಮೋದನೆ ಪಡೆಯಬೇಕಾಗಿತ್ತದೆ. ಪ್ರಸ್ತಾವನೆ ಅನುಮೋದನೆ ಪಡೆಯುವವರೆಗೂ ಈ ಕಾರ್ಯಕ್ರಮ ಅನುಷ್ಠಾನಗೊಳಿಸಲು ಸಾಧ್ಯ ವಾಗುವುದಿಲ್ಲ.

ಸಾವಯವ ಕೃಷಿ ಕಾರ್ಯಕ್ರಮದಡಿ ಅಳವಡಿಕೆ ಮತ್ತು ಸಾವಯವ ಕೃಷಿ ದೃಢೀಕರಣ ಕಾರ್ಯಕ್ರಮವನ್ನು ಗುಚ್ಛ ಮಾದರಿಯಲ್ಲಿ(Cluster) ಅನುಷ್ಠಾನಗೊಳಿಸಬೇಕಾಗುತ್ತದೆ ಹಾಗೂ ಒಂದೇ ಜಮೀನಿನಲ್ಲಿ ಪ್ರಾರಂಭದಿಂದ 3 ವರ್ಷ ಸಾವಯವ ಮತ್ತು ದೃಢೀಕರಣ ಕಾರ್ಯಕ್ರಮಗಳು ಕಡ್ಡಾಯವಾಗಿರುತ್ತವೆ. ಸಾವಯವ ಕೃಷಿಪದ್ಧತಿಯಲ್ಲಿ ಭೂಮಿಯನ್ನು ಸಾವಯವ ಪದ್ಧತಿಗೆ ತರಬೇಕೇ ಹೊರತು ಬೆಳೆಯಲು ಮುಖ್ಯವಾಗಿರುವುದಿಲ್ಲ. ಸಾವಯವ ಕೃಷಿ ಕಾರ್ಯಕ್ರಮದಡಿ ಅಳವಡಿಕೆ ಮತ್ತು ಸಾವಯವ ಕೃಷಿ ದೃಢೀಕರಣ ಕಾರ್ಯಕ್ರಮದಡಿ ಈ ಕೆಳಕಂಡಂತೆ ವೆಚ್ಚ ಭರಿಸಬಹುದಾಗಿರುತ್ತದೆ. ಸಾವಯುವ ಕೃಷಿ ಅಳವಡಿಕೆ ಕಾರ್ಯಕ್ರಮದಡಿ(Adpation of Organic Farming) ಪ್ರತಿ ಹೆಕ್ಟೇರ್‌ಗೆ ರೂ. 20000/– ಗಳಂತೆ ವ್ಯಯ ಮಾಡಬೇಕಾಗಿದೆ. ಇದರಲ್ಲಿ ಶೇ.50 ರಂತೆ ನಿಗದಿಯಾಗಿರುವ ಸಹಾಯಧನದಲ್ಲಿ ರೂ. 10,000/–ಗಳನ್ನು 3 ವರ್ಷಗಳಲ್ಲಿ ಅಂದರೆ, ಮೊದಲನೇ ವರ್ಷ ರೂ. 4000/–ಗಳು, ಎರಡನೇ ವರ್ಷ ರೂ. 3000/–ಗಳು ಮೂರನೇ ವರ್ಷ ರೂ.3000/–ಸಹಾಯಧನವನ್ನು ರೈತರಿಗೆ ನೀಡಬೇಕಾಗುತ್ತದೆ.

- ಸಾವಯವ ಕೃಷಿ ಅಳವಡಿಕೆ ಕಾರ್ಯಕ್ರಮದಡಿ(Adpation of Organic Farming) ಮೊದಲನೇ ವರ್ಷ ಶೇ.50ರಂತೆ ಪ್ರತಿ ಹೆಕ್ಟೇರ್‌ಗೆ ರೂ. 4000/–ರಂತೆ ಸಹಾಯಧನ ನೀಡಲು ಅವಕಾಶವಿದ್ದು, 50 ಹೆಕ್ಟೇರ್ ಗುಚ್ಛಕ್ಕೆ(Cluster/Block) ರೂ. 2.00 ಲಕ್ಷವಾಗುತ್ತದೆ.
- ಪ್ರತಿಯೊಬ್ಬ ಫಲಾನುಭವಿಗೆ ಕನಿಷ್ಠ 0.4 ಹೆಕ್ಟೇರ್‌ನಿಂದ ಗರಿಷ್ಠ 4 ಹೆಕ್ಟೇರ್‌ವರೆಗೆ ನೆರವು ನೀಡಬಹುದು.
- ಪ್ರತಿ ಹೆಕ್ಟೇರ್‌ಗೆ ನಿಗದಿಯಾಗಿರುವ ರೂ. 4000/–ಗಳ ಸಹಾಯಧನದ ಮೊತ್ತದಲ್ಲಿ ಫಲಾನುಭವಿಗಳಿಗೆ ಅವಶ್ಯವಿರುವ ಸಾವಯವ ಕೃಷಿಗೆ ಪೂರಕವಾದ ಮೂಲಭೂತ ಸೌಕರ್ಯಗಳನ್ನು ಅಳವಡಿಸಿಕೊಳ್ಳಲು ಹಾಗೂ ಬೇಕಾಗಿರುವ ಹಸಿರೆಲೆ ಗೊಬ್ಬರದ ಬೀಜ ಹಾಗೂ ಹಿಂಡಿಗಳನ್ನು ಖರೀದಿಸಲು ನೀಡಬಹುದು.
- ಮೊದಲನೇ ವರ್ಷದ ರೂ. 4000/–ಗಳ ಮೊತ್ತಕ್ಕೆ ಅನುಗುಣವಾಗಿ ಭೂಮಿಯನ್ನು ಹದ ಮಾಡುವುದು, ನಾಟಿ ಮಾಡುವುದು ಹಾಗೂ ಇತರೆ ಅಂತರಬೇಸಾಯ ಕ್ರಮಗಳಿಗೆ ರೈತರೇ ಸ್ವಂತ ಖರ್ಚಿನಿಂದ ವೆಚ್ಚ ಭರಿಸಬೇಕಾಗುತ್ತದೆ.
- ಸಾವಯವ ಕೃಷಿ ಅಳವಡಿಕೆ ಕಾರ್ಯಕ್ರಮದಲ್ಲಿ ಫಲಾನುಭವಿಗೆ ಎರಡನೇ ಹಾಗೂ ಮೂರನೇ ವರ್ಷ ಪ್ರತಿ ಹೆಕ್ಟೇರ್‌ಗೆ ಶ.50ರಂತೆ ನೀಡಬಹುದಾದ ರೂ. 3000/–ಗಳನ್ನು ಫಲಾನುಭವಿಗಳಿಗೆ ಅವಶ್ಯವಿರುವ ಸಾವಯವ ಪರಿಕರಗಳಾದ ಬಯೋಫರ್ಟಿಲೈಸರ್ಸ್, ಬಯೋಪೆಸ್ಟಿಸೈಡ್ಸ್‌ಗಳಿಗೆ ಮತ್ತು ಸಾವಯವ ಕೃಷಿಗೆ ಪೂರಕವಾದ ಮೂಲಭೂತ ಸೌಕರ್ಯಗಳನ್ನು ಅಳವಡಿಸಿಕೊಳ್ಳಲು ಫಲಾನುಭವಿಗಳಿಗೆ ನೀಡುವುದು. ರೈತರ ವಂತಿಗೆ ರೂ. 3000/–ಗಳನ್ನು ಅಂತರಬೇಸಾಯ ಕ್ರಮಗಳಿಗೆ ರೈತರೇ ವೆಚ್ಚ ಭರಿಸತಕ್ಕದ್ದು.

4. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಸ್ಯಾಗಾರ ಸ್ಥಾಪನೆ

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆ ಯಡಿಯಲ್ಲಿ ಭಾರತ ಸರ್ಕಾರದ ಮಾರ್ಗಸೂಚಿಯನ್ವಯ, ಸಸ್ಯಾಗಾರದಲ್ಲಿ ಕೆಳಕಂಡ ಮೂಲಭೂತ ಸೌಕರ್ಯಗಳು ಅಗತ್ಯತೆಗೆ ಅನುಗುಣವಾಗಿ ಒಳಗೊಂಡಿರಬೇಕು. ಒಂದು, ತಾಯಿ ಗಿಡಗಳಿಗೆ ತಾಕಿಗೆ ಸರಿಯಾದ ಬೇಲಿ, ಎರಡು, ಹವಾಮಾನ ವೈಪರೀತ್ಯದಿಂದ ರಕ್ಷಿಸುವುದಕ್ಕೆ ತಾಯಿ ಗಿಡಗಳನ್ನು ಪಾಲಿ ಮನೆಯಲ್ಲಿ ನಿರ್ವಹಿಸುವುದು. ಮೂರು, ನೆಟ್ ಹೌಸ್ ವಾತಾವರಣದಲ್ಲಿ ರೂಟ್ ಸ್ಟಾಕ್‌ನ್ನು ಬೆಳೆಸುವುದು. ನಾಲ್ಕು ಸಸ್ಯಾಭಿವೃದ್ಧಿ ಮನೆ ಸುಸೂತ್ರವಾದ ಗಾಳಿ ಸಂಚಾರವಿರುವ ಕೀಟನಿರೋಧಕ ಬಲೆಯುಳ್ಳ ಮಂಜು ಹಾಗೂ ತುಂತುರು ನೀರಾವರಿವುಳ್ಳ ಉಷ್ಣವಲಯ

ಪಾಲಿಮನೆ. ಐದು, ತುಂತುರು ನೀರಾವರಿಯುಳ್ಳ ಕೀಟನಿರೋಧಕ ಮನೆಯಲ್ಲಿ ಸಸ್ಯಾಭಿವೃದ್ಧಿ ಪಡಿಸಿದ ಗಿಡಗಳ ನಿರ್ವಹಣೆ. ಉಷ್ಣವಲಯ ಪಾಲಿಮನೆ. ಆರು, ಕನಿಷ್ಠ ಎರಡು ದಿನಗಳಿಗೆ ನೀರಾವರಿಯ ಅಗತ್ಯತೆಯನ್ನು ಪೂರೈಸಲು ನೀರು ಸಂಗ್ರಹಣಾ ತೊಟ್ಟಿ ಮತ್ತು ಪಂಪ್ ಮನೆ. ಏಳು, ಮಣ್ಣು ರೋಗಾಣುರಹಿತವಾಗಿಡಲು ಸೌಲಭ್ಯಗಳು– ಬಾಯ್ಲರನ್ನು ಬಳಸಿ ಆವಿಯ ಸಹಾಯದಿಂದ ಗಿಡಗಳನ್ನು ರೋಗಾಣು ರಹಿತವಾಗಿಡುವ ಪದ್ಧತಿ.

ಈ ಯೋಜನೆಯ ಉದ್ದೇಶವು ರಾಜ್ಯದಲ್ಲಿ ರೈತರಿಗೆ ಅಗತ್ಯವಿರುವ ತೋಟಗಾರಿಕೆ ಬೆಳೆಗಳ ಗುಣಮಟ್ಟದ ಕಸಿ/ಸಸಿ ಗಿಡಗಳ ಉತ್ಪಾದನೆಗಾಗಿ ಸಸ್ಯಾಗಾರಗಳ ಅಗತ್ಯತೆ ಇದ್ದು, ವಿವಿಧ ಮೂಲಭೂತ ಸೌಕರ್ಯಗಳನ್ನೊಳಗೊಂಡ ಸುಸಜ್ಜಿತ ಸಸ್ಯಾಗಾರಗಳನ್ನು ಸ್ಥಾಪಿಸಲು ಸಹಾಯಧನವನ್ನು ನೀಡುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ.

ಸಸ್ಯಾಗಾರ ಸ್ಥಾಪನೆಗೆ ಸಹಾಯಧನ ಪಡೆಯಲು ರೈತರಿಗೆ ಇರಬೇಕಾದ ಅರ್ಹತೆಗಳು

- ನರ್ಸರಿ ಮಾಡಲು ಉದ್ದೇಶಿಸಿರುವ ಜಮೀನು ಫಲಾನುಭವಿಯ ಹೆಸರಿನಲ್ಲಿ ಇರಬೇಕು. ಇದಕ್ಕೆ ಸಂಬಂಧಿಸಿದ ಅರ್.ಟಿ.ಸಿ.ಯನ್ನು ಲಗತ್ತಿಸಬೇಕು.
- ಮಾದರಿ ನರ್ಸರಿ ನಿರ್ಮಿಸುವ ಫಲಾನುಭವಿಯು ಕನಿಷ್ಠ 4 ಹೆಕ್ಟೇರ್ ಜಮೀನು.
- ಹಾಗೂ ಸಣ್ಣ ನರ್ಸರಿ ನಿರ್ಮಿಸಿದಲ್ಲಿ ಕನಿಷ್ಠ 1 ಹೆಕ್ಟೇರ್ ಜಮೀನು ಹೊಂದಿರಬೇಕು. ಸ್ಥಳ ಪರಿಶೀಲನೆ ಮತ್ತು ಅಧಿಕಾರಿಗಳ ಜವಾಬ್ದಾರಿ.
- ಪ್ರಸ್ತಾವನೆಯೊಂದಿಗೆ ಸಲ್ಲಿಸುವ ಎಲ್ಲ ದಾಖಲಾತಿ ಪತ್ರಗಳಿಗೆ ಆಯಾ ರೈತ ಸಂಪರ್ಕ ಕೇಂದ್ರದ ಸ.ತೋ.ಅ. ಮತ್ತು ತಾಲೂಕಿನ ಹಿ.ಸ.ತೋ.ನಿ./ಸ.ತೋ.ನಿ.ಅವರು ಕಡ್ಡಾಯವಾಗಿ ಸ್ಥಳ ಪರಿಶೀಲನೆ ಮಾಡಿದ ದಿನಾಂಕದೊಂದಿಗೆ ದೃಢೀಕರಣ ಮಾಡಬೇಕು.
- ಕಾಮಗಾರಿ ಪೂರ್ಣಗೊಂಡ ನಂತರ ಫಲಾನುಭವಿಯೊಂದಿಗೆ ಸಂಬಂಧಿಸಿದ ರೈತ ಸಂಪರ್ಕ ಕೇಂದ್ರದ ಅಧಿಕಾರಿ ಹಾಗೂ ತಾಲೂಕು ಮಟ್ಟದ ಅಧಿಕಾರಿಗಳೊಂದಿಗೆ ತೆಗೆದಿರುವ ಛಾಯಾಚಿತ್ರಗಳನ್ನು ಕಡ್ಡಾಯವಾಗಿ KSHMA ಕಛೇರಿಗೆ ಸಲ್ಲಿಸುವುದು.

1. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ಬೀಜೋತ್ಪಾದನೆಗೆ ಪ್ರೋತ್ಸಾಹ ನೀಡುವುದು:

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಯಲ್ಲಿ ಸಾರ್ವಜನಿಕ ಮತ್ತು ಖಾಸಗಿ ವಲಯದ ಬೀಜೋತ್ಪಾದನೆಗೆ ಪ್ರೋತ್ಸಾಹ ನೀಡುವುದು ಈ ಕೆಳಗಿನಂತಿದೆ.

- ಕಾರ್ಯಕ್ರಮದ ಹೆಸರು-ತೋಟಗಾರಿಕೆ ಬೆಳೆಗಳಲ್ಲಿ ಬೀಜೋತ್ಪಾದನೆ.
- ಅನುದಾನ ಹಂಚಿಕೆ-2012-22013ನೇ ಸಾಲಿನ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ತೋಟಗಾರಿಕೆ ಬೆಳೆಗಳ ಬೀಜೋತ್ಪಾದನೆಗಾಗಿ ಈ ಕೆಳಕಂಡತೆ ಒಟ್ಟು 99.00 ಲಕ್ಷಗಳಿಗೆ ವಾರ್ಷಿಕ ಕ್ರಿಯಾಯೋಜನೆಗೆ ಅನುಮೋದನೆಯನ್ನು ಪಡೆಯಲಾಗಿದೆ.

**ಕೋಷ್ಟಕ-16**

**ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ**

**ಬೀಜೋತ್ಪಾದನೆಗೆ ಪ್ರೋತ್ಸಾಹ ನೀಡುವುದರ ವಿವರಗಳು**

| ಕ್ರ.ಸಂ. | ಕಾರ್ಯಕ್ರಮಗಳು | ಭೌತಿಕ (ಸಂಖ್ಯೆ) | ಆರ್ಥಿಕ (ರೂ.ಲಕ್ಷಗಳಲ್ಲಿ) |
|---|---|---|---|
| 1. | ಸಾರ್ವಜನಿಕ ವಲಯದ ಬೀಜೋತ್ಪಾದನೆ | 95 | 47.50 |
| 2. | ಖಾಸಗಿ ವಲಯದ ಬೀಜೋತ್ಪಾದನೆ | 206 | 51.50 |

**ಮಾಹಿತಿಯ ಮೂಲ:** ತೋಟಗಾರಿಕೆ ಇಲಾಖೆ, ಬಳ್ಳಾರಿ, 2012-13.

ಕೋಷ್ಟಕ-16ರಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ಬೀಜೋತ್ಪಾದನೆ ಪ್ರೋತ್ಸಾಹಧನವನ್ನು ರೈತರಿಗೆ ನೀಡುತ್ತಿದ್ದು ಅವುಗಳ ವಿವರವನ್ನು ನೀಡಲಾಗಿದೆ. ಮೊದಲನೆಯ ದಾಗಿ ಸಾರ್ವಜನಿಕ ವಲಯದ ಬೀಜೋತ್ಪಾದನೆಗೆ ಇಲಾಖೆಯಿಂದ ರೂ. 47.50/-ಲಕ್ಷಗಳನ್ನು, ಮತ್ತು ಖಾಸಗಿ ವಲಯದ ಬೀಜೋತ್ಪಾದನೆಗೆ, ರೂ. 51.50/- ಲಕ್ಷಗಳನ್ನು ಇಲಾಖೆಯು ಬಿಡುಗಡೆ ಮಾಡಿದೆ.

- ಯೋಜನೆಯ ವಿವರ-ಸಾರ್ವಜನಿಕ ವಲಯದಡಿ, ರೈತರಿಗೆ ಬೀಜೋತ್ಪಾದನೆಗಾಗಿ ಶೇ.100ರಷ್ಟು ಗರಿಷ್ಠ ರೂ.50,000/- ಪ್ರತಿ ಹೆಕ್ಟೇರಿಗೆ ಹಾಗೂ ಖಾಸಗಿ ವಲಯದಡಿ, ಪ್ರತಿ ಹೆಕ್ಟೇರಿಗೆ ಶೇ.50ರಷ್ಟು ರೂ.25,000/- ಪ್ರತಿ ಹೆಕ್ಟೇರ್‌ಗೆ ಗರಿಷ್ಠ 5 ಹೆಕ್ಟೇರ್‌ವರೆಗೆ ಬೀಜೋತ್ಪಾದನೆಗೆ ಸಹಾಯಧನವನ್ನು ಕೊಡಲಾಗುತ್ತದೆ. ಈ ಕಾರ್ಯಕ್ರಮವು ಪ್ರಸ್ತಾವನೆ ಆಧಾರಿತ ಕಾರ್ಯಕ್ರಮವಾಗಿದ್ದು(ಪ್ರೋಜೆಕ್ಟ್ ಬೇಸ್ಡ್), ರಾಜ್ಯ ಕಾರ್ಯಕಾರಿಣಿ ಸಭೆಯಲ್ಲಿ ಅನುಮೋದನೆಯನ್ನು ಪಡೆಯಬೇಕು, ಅನುಮೋದನೆಯಾದ ನಂತರವೇ ರೈತರಿಗೆ ಯೋಜನೆಯ ಹಣವನ್ನು ಬಿಡುಗಡೆಗೊಳಿಸಲಾಗುತ್ತದೆ.
- ತಾಂತ್ರಿಕ ವಿಶಿಷ್ಟತೆ-ಈ ಯೋಜನೆಯನ್ನು ಬಳಸಿಕೊಳ್ಳಲು ರೈತರು, ಕೆಲವು ನಿಬಂದನೆಗಳನ್ನು ಪೂರ್ಣಗೊಳಿಸಬೇಕು. ಅವು, ರೈತರು ಬೀಜೋತ್ಪಾದನೆಗೆ ತೆಗೆದುಕೊಳ್ಳುವ ಜಮೀನಿನ

ವಿಸ್ತೀರ್ಣಕ್ಕೆ ತಕ್ಕಂತೆ ಸದಾಕಾಲ ನೀರಾವರಿ ಸೌಕರ್ಯ ಇರುವುದನ್ನು ಖಚಿತ ಪಡಿಸಿಕೊಳ್ಳ ಬೇಕು. ಉದ್ದೇಶಿತ ಬೆಳೆ ಮತ್ತು ತಳಿಯ ಪ್ರಮಾಣಿತ ಅಥವಾ ಲೇಬಲ್ ಮಾಡಿದ ಬೀಜ ಬೆಳೆಯಲು ಅವಶ್ಯಕವಿರುವ ಬೀಜವನ್ನು ಉಪಯೋಗಿಸಬೇಕು.

- ಈ ಯೋಜನೆಯ ಉದ್ದೇಶವು ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ಶ್ರೇಷ್ಠ ಗುಣಮಟ್ಟದ ಬಿತ್ತನೆ ಬೀಜ ಅತಿ ಮುಖ್ಯವಾಗಿರುತ್ತದೆ. ಒಳ್ಳೆಯ ಬಿತ್ತನೆ ಬೀಜಗಳನ್ನು ಕಡಿಮೆ ಬೆಲೆಯಲ್ಲಿ ರೈತರಿಗೆ ಪೂರೈಸಲು ಅನುಕೂಲವಾಗುವಂತೆ ಬಿತ್ತನೆ ಬೀಜ ಬೆಳೆಯಲು/ ಉತ್ಪಾದನೆ ಮಾಡಲು ರೈತರಿಗೆ ಅನುವು ಮಾಡಿಕೊಡುತ್ತದೆ.
- ಈ ಯೋಜನೆಯ ಸಹಾಯಧನ ಪಡೆಯಲು ಇರಬೇಕಾದ ಅರ್ಹತೆಗಳೆಂದರೆ, ಜಿಲ್ಲೆಗೆ ಬೇಡಿಕೆ ಇರುವಂತಹ ಬೀಜೋತ್ಪಾದನೆ ತೆಗೆದುಕೊಳ್ಳಲು ಸಿದ್ಧರಿರುವಂತಹ ರೈತರನ್ನು ಆಯ್ಕೆ ಮಾಡತಕ್ಕದ್ದು. ಖಾಸಗಿ ವಲಯದಡಿ, ಈ ಕಾರ್ಯಕ್ರಮವು ಪ್ರಸ್ತಾವನೆ ಆಧಾರಿತ ಕಾರ್ಯಕ್ರಮವಾಗಿದ್ದು ಫಲಾನುಭವಿಯು ಬ್ಯಾಂಕ್‌ಗಳಿಂದ ಸಾಲ ಪಡೆಯುವುದು ಕಡ್ಡಾಯವಾಗಿರುತ್ತದೆ.
- ಯೋಜನೆಯನ್ನು ಫಲಾನುಭವಿಗೆ ಸಹಾಯಧನ ವಿತರಿಸುವ ವೇಳೆ ಅನುಸರಿಸಬೇಕಾದ ಕ್ರಮಗಳು–ಫಲಾನುಭವಿಯು ಬೀಜೋತ್ಪಾದನೆಗಾಗಿ ತೆಗೆದುಕೊಂಡಿರುವ ಬ್ಯಾಂಕ್ ಸಾಲದ ಖಾತೆಗೆ ನಿಯಮಾನುಸಾರ ಮಾರ್ಗಗಳನ್ನು ಪಾಲಿಸಿಕೊಂಡು ಎನ್‌ಇಎಫ್‌ಟಿ/ಇಸಿಎಸ್ ಮುಖಾಂತರ ಸಹಾಯಧನ ನೀಡಲು ಕ್ರಮ ವಹಿಸುವುದು. ಫಲಾನುಭವಿ ಈ ಹಿಂದೆ ರಾಜ್ಯ/ಕೇಂದ್ರ ಸರ್ಕಾರದ ಯಾವುದೇ ಬೀಜೋತ್ಪಾದನೆ ಕಾರ್ಯಕ್ರಮದಡಿ ಸಹಾಯಧನ ಪಡೆದಿದ್ದಲ್ಲಿ ಮತ್ತೆ ಸಹಾಯಧನ ಪಡೆಯಲು ಅರ್ಹರಾಗಿರುವುದಿಲ್ಲ.

ಹಾಗೆಯೇ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿಯಲ್ಲಿ ಮಾವು ತೋಟಗಳ ಪುನಃಶ್ಚೇತನ ಕಾರ್ಯಕ್ರಮ ಈ ಯೋಜನೆಯನ್ನು ತೋರಿಸಲಾಗಿದೆ. ಮಾವು ತೋಟಗಳ ಪುನಃಶ್ಚೇತನ, ವೆಚ್ಚ ರೂ.30,000/ ಹೆ.ಗರಿಷ್ಠ 2 ಹೆ/ಫಲಾನುಭವಿಗೆ ರೂ. ಎನ್ನುವುದನ್ನು ಗಣನೆಗೆ ತೆಗೆದುಕೊಂಡು, ಗರಿಷ್ಠ ಸಹಾಯಧನ ಶೇ.50ರಷ್ಟು ರೂ.15,000/–/ಹೆ.ಗೆ ಇಲಾಖೆಯು ಪ್ರತಿ ವರ್ಷ ರೈತರಿಗೆ ನೀಡಲಾಗುತ್ತದೆ. ಈ ಯೋಜನೆಯ ಲಾಭ ಪಡೆಯಲು ತಾಂತ್ರಿಕ ವಿಶಿಷ್ಟತೆಯೂ, ಪ್ರತಿ ರೈತರು ಎಕರೆಗೆ 100 ಮಾವಿನ ಸಸಿಗಳನ್ನು ನೆಡಬೇಕು. ಪ್ರತಿ ಎಕರೆಗೆ 100 ಮಾವಿನ ಸಸಿಗಳನ್ನು ನೆಟ್ಟಾಗ ಮಾತ್ರವೇ ಯೋಜನೆಯ ಲಾಭವನ್ನು ಪಡೆಯಬಹುದು ಎನ್ನುವುದನ್ನು ಇಲಾಖೆಯಲ್ಲಿ ಯೋಜನೆಗೆ ಸಂಬಂಧಿಸಿದಂತೆ ತಿಳಿಸಲಾಗಿದೆ.

**ಕೋಷ್ಟಕ–17**

**ಮಾವಿನ ತೋಟಗಳ ಪುನಶ್ಚೇತನಕ್ಕೆ ತಗಲುವ ವೆಚ್ಚದ ವಿವರಗಳು**

| ಕ್ರ ಸಂ. | ಕೆಲಸದ ವಿವರಗಳು | ರೈತ ಫಲಾನು ಭವಿ ಯಿಂದ ಶೇ.50ರಷ್ಟು | ಎನ್‌ಎಚ್ ಎಮ್ ಯೋಜನೆಯಿಂದ ಶೇ.50 ರಷ್ಟು | ಒಟ್ಟು |
|---|---|---|---|---|
| 1 | 2 | 3 | 4 | 5 |
| 1. | ಮರಗಳನ್ನು ಗುರುತಿಸುವುದು ಮತ್ತು ಅನಗತ್ಯ ರೆಂಬೆ ಹಾಗೂ ಟೋಂಗೆಗಳನ್ನು ಕತ್ತರಿಸುವುದು/ಸವರಿ ತೆಗೆಯುವುದು ಹಾಗೂ ಬೋರ್ಡೋಪೇಸ್ಟ್ ಲೇಪನ ಮಾಡುವುದು. | 3000.00 | 3000.00 | 6000.00 |
| 2. | ಮಣ್ಣು ಮತ್ತು ನೀರಿನ ನಿರ್ವಹಣೆ: ಉಳುಮೆ ಮಾಡಿ ಪಾತಿ ಮಾಡುವುದು, ಬುಡದಲ್ಲಿ ಮಣ್ಣು ಸಡಿಲಗೊಳಿಸುವುದು. | 45000.00 | 0.00 | 4500.00 |
| 3. | 2*2*2* ಅಡಿ ಗಾತ್ರದ 2 ಗುಂಡಿಗಳು ಪ್ರತಿ ಮರಕ್ಕೆ ತೆಗೆಯುವುದು(ರೂ.15/– ಒಂದು ಗುಂಡಿಗೆ) | 0.00 | 4500.00 | 4500.00 |
| 4. | ಮರದ ಬುಡದ ರಕ್ಷಣ ಪೇಸ್ಟ್ ಹಾಗೂ ಸಸ್ಯ ಸಂರಕ್ಷಣಾ ಔಷಧಗಳ ಸಿಂಪಡನೆ | 2000.00 | 2000.00 | 4000.00 |
| 5. | ಫಲವತ್ತತೆ ನಿರ್ವಹಣೆ: ಹಸಿರಲೆ ಗೊಬ್ಬರ/ ಕೊಟ್ಟಿಗೆ ಗೊಬ್ಬರ/ಲಘು ಪೋಷಕಾಂಶ ಗಳು/ಬೇವಿನ ಹಿಂಡಿ/ಜೈವಿಕ ಪೋಷಕಾಂಶಗಳು ಇತರೆ | 2000.00 | 2000.00 | 4000.00 |
| 6. | ಕಸಿ ಮಾಡುವುದು ಪ್ರತಿ ಮರಕ್ಕೆ 15 ಕಸಿ ಗಳ ಬೆಲೆ ರೂ2.00. ಮತ್ತು ಕಸಿ ಕಟ್ಟಲು ರೂ.2.00 ಮತ್ತು ಖಾಲಿ ಇರುವ ಜಾಗ ದಲ್ಲಿ ಹೊಸ ಸಸಿ ನೆಡುವುದು. | 3000.00 | 3000.00 | 6000.00 |
| 7 | ಸಲಕರಣೆಗಳು ಮತ್ತು ಸಾಮಗ್ರಿಗಳು | 500.00 | 500.00 | 1000.00 |
| | ಒಟ್ಟು ಖರ್ಚು(ಗರಿಷ್ಠ ರೂ.) | 15000.00 | 15000.00 | 30,000.00 |

**ಮಾಹಿತಿಯ ಮೂಲ:** ತೋಟಗಾರಿಕೆ ಇಲಾಖ, ಬಳ್ಳಾರಿ, 2012–13.

ಮೇಲಿನ ಕೋಷ್ಟಕ-17ರಲ್ಲಿ ಮಾವಿನ ಬೆಳೆಗಳ ಪುನಶ್ಚೇತನಕ್ಕೆ ಸಂಬಂಧಿಸಿದ ವಿವರಗಳ ಮಾಹಿತಿಯನ್ನು ನೀಡಲಾಗಿದೆ. ತೋಟಗಾರಿಕೆ ಇಲಾಖೆಯು ವಿವಿಧ ಹಣ್ಣು ಬೆಳೆಗಳ ಉತ್ಪಾದನೆಗೆ, ಧನಸಹಾಯ ಮಾಡುತ್ತಿದ್ದು ಕೋಷ್ಟಕ-17ರಲ್ಲಿ ಮಾವಿನ ಹಣ್ಣಿನ ಮರಗಳ ಪುನಶ್ಚೇತನಕ್ಕೆ ಧನ ಸಹಾಯದ ವಿವರವು ಇಂತಿದೆ. ಮರಗಳನ್ನು ಗುರುತಿಸುವುದು ಮತ್ತು ಅನಗತ್ಯ ರೆಂಬೆ ಹಾಗೂ ಟೊಂಗೆಗಳನ್ನು ಕತ್ತರಿಸುವುದು/ಸವರಿ ತೆಗೆಯುವುದು ಹಾಗೂ ಬೋರ್ಡೋ‌ಪೇಸ್ಟ್ ಲೇಪನ ಮಾಡುವುದು. ರೈತ ಫಲಾನುಭವಿಯಿಂದ ಶೇ.50ರಷ್ಟು ಅಂದರೆ ರೂ. 3000/– ಹಾಗೂ ಎನ್‌ಎಚ್‌ಎಮ್ ಯೋಜನೆಯಿಂದ ಶೇ.50ರಷ್ಟು ಅಂದರೆ ರೂ.3000ಗಳನ್ನು ನೀಡುತ್ತಾರೆ. ಮಣ್ಣು ಮತ್ತು ನೀರಿನ ನಿರ್ವಹಣೆ, ಉಳುಮೆ ಮಾಡಿ ಪಾತಿ ಮಾಡುವುದು, ಬುಡದಲ್ಲಿ ಮಣ್ಣು ಸಡಿಲಗೊಳಿಸುವುದು, ರೈತ ಫಲಾನುಭವಿಯಿಂದ ಶೇ.50ರಷ್ಟು ಅಂದರೆ, ರೂ.4500/–, ಎನ್‌ಎಚ್‌ಎಮ್ ಯೋಜನೆಯಿಂದ ಶೇ.50ರಷ್ಟು ಪ್ರಸ್ತುತ ಯೋಜನೆಗೆ ಇರುವುದಿಲ್ಲ. ಹೀಗೆ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಯಿಂದ ಮತ್ತು ಎನ್‌ಎಚ್‌ಎಮ್ ಕಡೆಯಿಂದ ರೈತರಿಗೆ ದೊರೆಯುವ ಧನಸಹಾಯದ ಕುರಿತು ವಿವರಗಳನ್ನು ನೀಡಲಾಗಿದೆ.

**• ಯೋಜನೆಯ ಉದ್ದೇಶಗಳು**

1. ಸಾಧಾರಣವಾಗಿ 20 ವರ್ಷಕ್ಕಿಂತ ಹೆಚ್ಚಿಗೆ ಇರುವಂತಹ ತೋಟಗಳಲ್ಲಿನ ಅನುತ್ಪಾದಿತ ಮರಗಳನ್ನು ಹೆಚ್ಚು ಉತ್ಪಾದಕತೆ ಮಾಡುವುದೇ ಈ ಕಾರ್ಯಕ್ರಮದ ಮೂಲ ಉದ್ದೇಶವಾಗಿದೆ. ಇಂತಹ ತೋಟಗಳಲ್ಲಿ ಮರಗಳ ಎತ್ತರ ಕಡಿಮೆ ಮಾಡುವುದು, ತಳಿ ಸರಿ ಇಲ್ಲದಿದ್ದಲ್ಲಿ ಮಾರುಕಟ್ಟೆಯಲ್ಲಿ ಬೇಡಿಕೆ ಇರುವಂತಹ ತಳಿಗಳನ್ನು ಟಾಪ್ ವರ್ಕ್ ಮುಖಾಂತರ ಕಸಿ ಮಾಡಲು ಕ್ರಮ ವಹಿಸುವುದು, ಒಣಗಿರುವ/ರೋಗಬಾಧಿತ ರೆಂಬೆ/ಪರಾವಲಂಬಿ ಗಿಡಗಳು ಇರುವ ಟೊಂಗೆಗಳು ಮತ್ತು ದಟ್ಟವಾದ ರೆಂಬೆಗಳನ್ನು ಕತ್ತರಿಸಿ ತೆಗೆಯುವುದು.
2. ಮರದ ಮಧ್ಯಭಾಗದಲ್ಲಿ ಎಲ್ಲ ರೆಂಬೆಗಳಿಗೆ ಸಾಕಷ್ಟು ಬೆಳಕು ಮತ್ತು ಗಾಳಿ ಬರುವಂತೆ ಅನಗತ್ಯ ರೆಂಬೆ/ಕೊಂಬೆಗಳನ್ನು ತೆಗೆಯುವುದು ಹಾಗೂ ಗ್ಯಾಪ್ ಫಿಲ್ಲಿಂಗ್ ಮಾಡುವುದು.
3. ಭೂಮಿಯ ಫಲವತ್ತತೆಯನ್ನು ಹೆಚ್ಚಿಸಲು ಮರದ ಬುಡದಲ್ಲಿ ಸುತ್ತಲೂ ಅಗೆದು ಸ್ವಚ್ಛತೆ ಕಾಪಾಡುವುದು.
4. ಮಳೆಗಾಲದಲ್ಲಿ ನೀರು ಮರದ ಹತ್ತಿರ ಬಸಿಯಲು ಸೂಕ್ತ ಸಂರಕ್ಷಣ ಕ್ರಮಗಳನ್ನು ತೆಗೆದುಕೊಳ್ಳುವುದು.

- ಈ ಯೋಜನೆಯ ಸಹಾಯಧನ ಪಡೆಯಲು ಫಲಾನುಭವಿಗಳಿಗೆ ಇರಬೇಕಾದ ಅರ್ಹತೆ ಘಟಕವನ್ನು ನಿರ್ಮಿಸಲು ಇಚ್ಛಿಸುವ ರೈತರು, ತಮ್ಮ ಹೆಸರಿನಲ್ಲಿಯೆ ಕಡ್ಡಾಯವಾಗಿ ಜಮೀನು ಹೊಂದಿರಬೇಕು. ಸಹಾಯಧನವನ್ನು ಪ್ರಸಕ್ತ ಸಾಲಿನಲ್ಲಿ ಹೊಸದಾಗಿ ತೆಗೆದುಕೊಳ್ಳುವ ಮಾವು ತೋಟಗಳ ಪುನಃಶ್ಚೇತನ ತಾಕುಗಳಿಗೆ ಮಾತ್ರ ನೀಡಲಾಗುವುದು.

7. ರಾಷ್ಟ್ರೀಯ ತೋಟಗಾರಿಗೆ ಮಿಷನ್ ಯೋಜನೆಯಡಿ ಗೇರು ತೋಟಗಳ ಪುನಃಶ್ಚೇತನ ಗೊಳಿಸುವುದು

- ಈ ಕಾರ್ಯಕ್ರಮದ ಹೆಸರು ಗೇರು ತೋಟಗಳ ಪುನಃಶ್ಚೇತನ ಕಾರ್ಯಕ್ರಮವಾಗಿದ್ದು ಯೋಜನೆಗೆ ಅನುದಾನ ಹಂಚಿಕೆಯು, 2012–13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿ ರಾಜ್ಯದ ಈ ಕಾರ್ಯಕ್ರಮಕ್ಕಾಗಿ ಭೌತಿಕ 200 ಹೆ. ಆರ್ಥಿಕ ರೂ.30.00 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿರುತ್ತದೆ.

**ಕೋಷ್ಟಕ–18**

**ರಾಷ್ಟ್ರೀಯ ತೋಟಗಾರಿಗೆ ಮಿಷನ್ ಯೋಜನೆಯಡಿ ವಿವಿಧ ಹಣ್ಣುಗಳ ಪುನಃಶ್ಚೇತನಕ್ಕೆ ಧನಸಹಾಯದ ವಿವರಗಳು**

| ಕ್ರ.ಸಂ. | ಕಾರ್ಯಕ್ರಮ | ಒಟ್ಟು ವೆಚ್ಚ | ಗರಿಷ್ಠ ಸಹಾಯಧನ |
|---|---|---|---|
| 1. | ಗೇರು ತೋಟಗಳ ಪುನಃ ಶ್ಚೇತನ Rejuvenation of cashew | ರೂ.30,000/–ಹೆ/ ಫಲಾನುಭವಿಗಳಿಗೆ | ಶೇ.50ರಷ್ಟು ರೂ.15,000/–ಹೆ. |
| 2. | ನಿಂಬೆ/ಕಿತ್ತಳೆ/ಮೂಸಂಬಿ ತೋಟಗಳ ಪುನಃಶ್ಚೇತನ ಕಾರ್ಯಕ್ರಮ: Rejuvenation citrus/orange, | ರೂ.30,000/–ಹೆ/ ಫಲಾನುಭವಿಗಳಿಗೆ | ಶೇ.50ರಷ್ಟು ರೂ.15,000/–ಹೆ. |
| 3. | ಕಾಳುಮೆಣಸು ತೋಟಗಳ ಪುನಃಶ್ಚೇತನ ಕಾರ್ಯಕ್ರಮ peper Rejuvenation | ರೂ.30,000/–ಹೆ/ ಫಲಾನುಭವಿಗಳಿಗೆ | ಶೇ.50ರಷ್ಟು ರೂ.15,000/–ಹೆ |

**ಮಾಹಿತಿಯ ಮೂಲ:** ತೋಟಗಾರಿಕೆ ಇಲಾಖೆ, ಬಳ್ಳಾರಿ, 2012–13.

ಮೇಲಿನ ಕೋಷ್ಟಕ–18ರಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಗೇರು ತೋಟಗಳ ಪುನಃಶ್ಚೇತನಕ್ಕಾಗಿ ಇಲಾಖೆಯಿಂದ ರೈತರಿಗೆ, ವೆಚ್ಚದಲ್ಲಿ ರೂ.30,000/–ಹೆ/ಫಲಾನುಭವಿಗಳಿಗೆ, ಗರಿಷ್ಠ ಸಹಾಯಧನ ಶೇ.50ರಷ್ಟು ರೂ. 15,000/–ಹೆ.ಗೆ ನೀಡಲಾಗುತ್ತಿದೆ.

ಉಳಿದಂತೆ ಗೇರುತೋಟಗಳ ಪುನಃಶ್ಚೇತನ ಉದ್ದೇಶ, ತಾಂತ್ರಿಕ ವಿಶಿಷ್ಟತೆಯು ಮಾವು ತೋಟಗಳ ಪುನಃಶ್ಚೇತನದಂತೆಯೇ ಇರುತ್ತವೆ. ಹಾಗೆಯೇ ಇದೇ ಯೋಜನೆಯಡಿಯಲ್ಲಿ ನಿಂಬೆ/ಕಿತ್ತಳೆ/ಮೂಸಂಬಿ ತೋಟಗಳ ಪುನಃಶ್ಚೇತನ ಕಾರ್ಯಕ್ರಮದ ವಿವರವನ್ನು ನೀಡಲಾಗಿದೆ. ಯೋಜನೆಯ ಕಾರ್ಯಕ್ರಮದ ಹೆಸರು ನಿಂಬೆ/ಕಿತ್ತಳೆ/ಮೂಸಂಬಿ ತೋಟಗಳ ಪುನಃಶ್ಚೇತನ ಕಾರ್ಯಕ್ರಮವಾಗಿದ್ದು, ಯೋಜನೆಗೆ ಅನುದಾನ ಹಂಚಿಕೆಯು 2012–13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿ ರಾಜ್ಯದ ಈ ಕಾರ್ಯಕ್ರಮಕ್ಕಾಗಿ ಭೌತಿಕ 1500 ಹೆ. ಆರ್ಥಿಕ ರೂ.225.00 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿದೆ. ಮೇಲಿನ ಕೋಷ್ಟಕ–20ರಲ್ಲಿ, ತೋಟಗಾರಿಕೆ ಇಲಾಖೆಯು ರೈತರಿಗೆ ನಿಂಬೆ/ಕಿತ್ತಳೆ/ಮೂಸಂಬಿ ತೋಟಗಳ ಪುನಃಶ್ಚೇತನಕ್ಕಾಗಿ ಧನಸಹಾಯ ಮಾಡುತ್ತಿದ್ದು ಅವುಗಳ ವಿವರವನ್ನು ನೀಡಲಾಗಿದೆ. ನಿಂಬೆ/ಕಿತ್ತಳೆ/ಮೊಸಂಬಿ ತೋಟಗಳ ಪುನಃಶ್ಚೇತನಕ್ಕಾಗಿ, ರೂ. 30,000/–ಹೆ/ಫಲಾನುಭವಿಗಳಿಗೆ ವೆಚ್ಚದಲ್ಲಿ, ಶೇ.50ರಷ್ಟು ರೂ. 15,000/–ಹೆ. ಗರಿಷ್ಠ ಸಹಾಯಧನವನ್ನು ಪ್ರತಿ ವರ್ಷವೂ ಇಲಾಖೆ ನೀಡುತ್ತಿದೆ.

ಅಲ್ಲದೆ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಕಾಳುಮೆಣಸು ತೋಟಗಳ ಪುನಃಶ್ಚೇತನ ಕಾರ್ಯಕ್ರಮವಿದ್ದು, ಯೋಜನೆಗೆ ಅನುದಾನ ಹಂಚಿಕೆಯು 2012–13ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕಾಗಿ ಭೌತಿಕ 2025 ಹೆ. ಆರ್ಥಿಕ ರೂ.303.76 ಲಕ್ಷಗಳ ಕ್ರಿಯಾ ಯೋಜನೆಗೆ ಅನುಮೋದನೆಯಾಗಿರುತ್ತದೆ. ಕೋಷ್ಟಕ–20ರಲ್ಲಿ ಕಾಳುಮೆಣಸು ತೋಟಗಳ ಪುನಃಶ್ಚೇತನ ಕಾರ್ಯಕ್ರಮಕ್ಕೆ ಇಲಾಖೆಯು, ರೂ. 30,000/–ಹೆ/ಫಲಾನುಭವಿಗಳಿಗೆ ವೆಚ್ಚದಲ್ಲಿ, ಶೇ.50ರಷ್ಟು ರೂ. 15,000/–ಹೆ/ ಗರಿಷ್ಠ ಸಹಾಯಧನವನ್ನು ನೀಡುತ್ತಿದೆ ಎನ್ನುವ ಮಾಹಿತಿಯನ್ನು ನೀಡಲಾಗಿದೆ.

10. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಮುದಾಯ ನೀರು ಸಂಗ್ರಹಣಾ ಕಾರ್ಯಕ್ರಮ

- ಕಾರ್ಯಕ್ರಮದ ಹೆಸರು ಸಮುದಾಯ ನೀರು ಸಂಗ್ರಹಣ ಕಾರ್ಯಕ್ರಮವಾಗಿದ್ದು, ಅನುದಾನ ಹಂಚಿಕೆಯು 2012–13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿ ರಾಜ್ಯದ ಈ ಕಾರ್ಯಕ್ರಮಕ್ಕಾಗಿ ಭೌತಿಕ 50 ಸಂಖ್ಯೆ. ಒಟ್ಟು ರೂ.200.00 ಲಕ್ಷಗಳ ಕ್ರಿಯಾ ಯೋಜನೆಗೆ ಅನುಮೋದನೆಯಾಗಿದೆ. ಯೋಜನೆಯ ವಿವರವೂ ತೋಟಗಾರಿಕೆ ಬೆಳೆಗಳಿಗೆ ನೀರಿನ ಸೌಕರ್ಯ ಕಲ್ಪಿಸುವ ಸಲುವಾಗಿ ಸಂಘ/ಸಂಸ್ಥೆ/ರೈತರ ಗುಂಪುಗಳಿಗೆ ನೀರು ಸಂಗ್ರಹಣೆ ಮಾಡಲು ಕನಿಷ್ಠ 1500 ಘ.ಮೀ.ಸಾಮರ್ಥ್ಯದಿಂದ ಗರಿಷ್ಠ 6000 ಘ.ಮೀ.

ಸಾಮರ್ಥ್ಯದವರೆಗಿನ ಘಟಕಗಳಿಗೆ ಪ್ರತಿ ಘ.ಮೀ.ಗೆ ರೂ.66.66/–ರಂತೆ ಗರಿಷ್ಠ ರೂ.4.00 ಲಕ್ಷದವರೆಗೆ ಸಹಾಯಧನ ನೀಡಲು ಅವಕಾಶವಿರುತ್ತದೆ. ಯೋಜನೆಯ ಉದ್ದೇಶಗಳು ಮಳೆಗಾಲದಲ್ಲಿ ಅಥವಾ ಆಯಾ ಭಾಗದಲ್ಲಿ ನೀರಿನ ಸೌಕರ್ಯಗಳು ಲಭ್ಯವಿದ್ದಲ್ಲಿ ಈ ಹೆಚ್ಚುವರಿ ನೀರನ್ನು ಸಂಗ್ರಹಣೆ ಮಾಡಿ ನಂತರ ಬೇಸಿಗೆ ಕಾಲದಲ್ಲಿ ಅಥವಾ ನೀರಿನ ಅಭಾವವಿರುವ ಸಂದರ್ಭದಲ್ಲಿ ತೋಟಗಾರಿಕೆ ಬೆಳೆಗಳಿಗೆ ನೀರಿನ ಸೌಕರ್ಯ ಕಲ್ಪಿಸುವುದು (Protective Irrigation Under Critical Conditions) ಈ ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ.

11. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಪ್ಲಾಸ್ಟಿಕ್ ಹೊದಿಕೆ ಮತ್ತು ಪಕ್ಷಿ/ ಆಲಿಕಲ್ಲು ನಿರೋಧಕ ಬಲೆ ಕಾರ್ಯಕ್ರಮ

- ಕಾರ್ಯಕ್ರಮದ ಹೆಸರು ಪ್ಲಾಸ್ಟಿಕ್ ಹೊದಿಕೆ ಮತ್ತು ಪಕ್ಷಿ/ಆಲಿಕಲ್ಲು ನಿರೋಧಕ ಬಲೆ ಕಾರ್ಯಕ್ರಮವಾಗಿದ್ದು, ಅನುದಾನ ಹಂಚಿಕೆಯೂ 2012–13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿ ರಾಜ್ಯದ ಈ ಕಾರ್ಯಕ್ರಮಕ್ಕಾಗಿ ಭೌತಿಕ 920ರ ಆರ್ಥಿಕ ರೂ.276.50 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿರುತ್ತದೆ.

**ಕೋಷ್ಟಕ–19**

**ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಪ್ಲಾಸ್ಟಿಕ್ ಹೊದಿಕೆ ಮತ್ತು ಪಕ್ಷಿ/ಆಲಿಕಲ್ಲು ನಿರೋಧಕ ಬಲೆಗೆ ಧನಸಹಾಯ ನೀಡುವುದರ ವಿವರಗಳು**

| ಕ್ರ.ಸಂ. | ಕಾರ್ಯಕ್ರಮ | ವೆಚ್ಚ | ಗರಿಷ್ಠ ಸಹಾಯಧನ |
|---|---|---|---|
| 1. | ಪ್ಲಾಸ್ಟಿಕ್ ಹೊದಿಕೆ Plastic mulching | ರೂ.20,000/–ಹೆ ಗರಿಷ್ಠ 2 ಹೆ. ಫಲಾನುಭವಿಗಳಿಗೆ | ಶೇ.50ರಷ್ಟು ರೂ.10,000/–ಹೆ. |
| 2. | ಪಕ್ಷಿ/ಆಲಿಕಲ್ಲು ನಿರೋಧಕ ಬಲೆ Anti birds nets/anti hall nets | ರೂ.20,/sq.m ಗರಿಷ್ಠ 5000 sq.m ಫಲಾನುಭವಿಗಳಿಗೆ | ಶೇ.50ರಷ್ಟು ರೂ.10,sq.m |

**ಮಾಹಿತಿಯ ಮೂಲ:** ತೋಟಗಾರಿಕೆ ಇಲಾಖೆ, ಬಳ್ಳಾರಿ, 2012–13.

ಮೇಲಿನ ಕೋಷ್ಟಕ–19ರಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಪ್ಲಾಸ್ಟಿಕ್ ಹೊದಿಕೆ ಮತ್ತು ಪಕ್ಷಿ/ಆಲಿಕಲ್ಲು ನಿರೋಧಕ ಬಲೆಯನ್ನು ಕೊಂಡುಕೊಳ್ಳಲು ಇಲಾಖೆಯೂ

ಧನ ಸಹಾಯವನ್ನು ನೀಡುತ್ತಿದ್ದು, ಇಲಾಖೆಯು ಪ್ಲಾಸ್ಟಿಕ್ ಹೊದಿಕೆಗೆ, ರೂ. 20,000/–ಹೆ ಗರಿಷ್ಠ 2 ಹೆ. ಫಲಾನುಭವಿಗಳಿಗೆ ವೆಚ್ಚದಲ್ಲಿ, ಗರಿಷ್ಠ ಶೇ.50ರಷ್ಟು ರೂ.10,000/–ಹೆ.ಗೆ ಧನ ಸಹಾಯವನ್ನು ಪಡೆಯುತ್ತಿದ್ದು, ಪಕ್ಷಿ/ಆಲಿಕಲ್ಲು ನಿರೋಧಕ ಬಲೆಗೆ, ರೂ.20,/sq.m ಗರಿಷ್ಠ 5000 sq.m ಫಲಾನುಭವಿಗಳಿಗೆ ವೆಚ್ಚದಲ್ಲಿ, ಶೇ.50ರಷ್ಟು ರೂ.10,sq.m ಗರಿಷ್ಠ ಸಹಾಯಧನವನ್ನು ನೀಡಲಾಗಿದೆ.

ಪಕ್ಷಿ/ಆಲಿಕಲ್ಲು ನಿರೋಧಕ ಬಲೆ(Anti birds nets/anti hall nets) ಈ ಯೋಜನೆಯ ಉದ್ದೇಶಗಳು ತೋಟಗಾರಿಕೆ ಬೆಳೆಗಳನ್ನು ಸಂರಕ್ಷಿತ ವಾತಾವರಣದಲ್ಲಿ ಬೆಳೆಯಲು ಪ್ರೋತ್ಸಾಹಿಸುವುದು ಮತ್ತು ತೋಟಗಾರಿಕೆ ಬೆಳೆಗಳಲ್ಲಿ ಕಳೆಯನ್ನು ತಡೆಗಟ್ಟಲು ಮಣ್ಣಿನ ತೇವಾಂಶವನ್ನು ಕಾಪಾಡಲು, ಮಣ್ಣಿನಲ್ಲಿರುವ ಉಪಯುಕ್ತ ಸೂಕ್ಷ್ಮಜೀವಿಗಳ ಸಂಖ್ಯೆ ಹೆಚ್ಚಿಸುವುದು ಹಾಗೂ ಕೀಟ/ ಪಕ್ಷಿಗಳಿಂದ ಆಲಿಕಲ್ಲಿನಿಂದ ತೋಟಗಾರಿಕೆ ಬೆಳೆ/ಉತ್ಪನ್ನಗಳು ಹಾನಿಯಾಗುವುದನ್ನು ತಡೆಗಟ್ಟುವುದು ಈ ಯೋಜನೆಯ ಮುಖ್ಯ ಉದ್ದೇಶಗಳಾಗಿವೆ.

12. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಮಗ್ರ ಪೋಷಕಾಂಶಗಳ ನಿರ್ವಹಣೆ ಹಾಗೂ ಸಮಗ್ರ ರೋಗ/ಕೀಟ ನಿಯಂತ್ರಣ ಕಾರ್ಯಕ್ರಮ

- ಈ ಕಾರ್ಯಕ್ರಮದ ಹೆಸರು ಸಮಗ್ರ ಪೋಷಕಾಂಶಗಳ ನಿರ್ವಹಣೆ ಹಾಗೂ ಸಮಗ್ರ ರೋಗ/ಕೀಟ ನಿಯಂತ್ರಣ ಕಾರ್ಯಕ್ರಮವಾಗಿದ್ದು, ಅನುದಾನ ಹಂಚಿಕೆಯೂ 2012–13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿ ರಾಜ್ಯದ ಈ ಕಾರ್ಯಕ್ರಮಕ್ಕಾಗಿ ಭೌತಿಕ 45000 ಸಂಖ್ಯೆ ಹಾಗೂ ಆರ್ಥಿಕ ರೂ.450.00 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿದೆ. ಈ ಯೋಜನೆಯ ವಿವರಗಳು ರೈತರ ಪೋಷಕಾಂಶಗಳ/ ಕ್ರಿಮಿನಾಶಕಗಳ ಖರೀದಿಗಾಗಿ ಖರ್ಚು ಮಾಡಬಹುದಾದ ಅಂದಾಜು ವೆಚ್ಚ ರೂ.2000/ – ಗಳಾಗಿದ್ದಲ್ಲಿ, ಇದರಲ್ಲಿ ಶೇಕಡ 50ರಂತೆ ರೂ.1000/–ಗಳಂತೆ ಪ್ರತಿ ಫಲಾನುಭವಿಗೆ ಗರಿಷ್ಠ 4 ಹೆ.ವರೆಗೆ ಸಹಾಯಧನವನ್ನು ನೀಡಲಾಗುತ್ತದೆ. ಈ ಯೋಜನೆಯ ಉದ್ದೇಶಗಳು ಸಮಗ್ರ ಕೀಟ/ರೋಗ ನಿಯಂತ್ರಣ ಕಾರ್ಯಕ್ರಮಗಳು ಅಯಾ ಪ್ರದೇಶಕ್ಕೆ ಅನುಗುಣವಾಗಿ ತೋಟಗಾರಿಕೆ ಬೆಳೆಗಳಿಗೆ ತಗುಲುವ ರೋಗ/ಕೀಟಗಳ ನಿಯಂತ್ರಣಕ್ಕಾಗಿ/ಹತೋಟಿಗಾಗಿ ಬಳಸುವ ಕ್ರಿಮಿ/ರೋಗ ನಾಶಕಗಳಿಗೆ ಮಾತ್ರ ಸಹಾಯಧನ ನೀಡುವುದು. ಸಮಗ್ರ ಪೋಷಕಾಂಶಗಳ ನಿಯಂತ್ರಣ ಕಾರ್ಯಕ್ರಮವು ತೋಟಗಾರಿಕೆ ಬೆಳೆಗಳಿಗೆ ಇಚ್ಛಿತ ಇಳುವರಿ ಪಡೆಯಲು ಹಾಗೂ ಹೆಚ್ಚಿನ ಗುಣಮಟ್ಟವನ್ನು ಸಾಧಿಸಲು ರೈತರು ತಮ್ಮ ತೋಟಗಾರಿಕೆ

ಬೆಳೆಗಳಿಗೆ ಅವಶ್ಯಕವಿರುವ ಪೋಷಕಾಂಶಗಳನ್ನು ಒದಗಿಸಲು ಸಹಾಯ ಧನವನ್ನು ನೀಡಲಾಗುತ್ತದೆ.

13. ರಾಷ್ಟ್ರೀಯ ತೋಟಗಾರಿ ಮಿಷನ್ ಯೋಜನೆಯಡಿ ಯಾಂತ್ರೀಕರಣ ಕಾರ್ಯಕ್ರಮದಡಿ 20 ಹೆಚ್.ಪಿ.ಗಿಂತ ಹೆಚ್ಚು ಸಾಮರ್ಥ್ಯದ ಟ್ರ್ಯಾಕ್ಟರ್‌ಗೆ ನೀಡುವ ಸಹಾಯಧನದ ಕಾರ್ಯಕ್ರಮ.

ಈ ಕಾರ್ಯಕ್ರಮದ ಹೆಸರು 20 ಹೆಚ್.ಪಿಗಿಂತ ಹೆಚ್ಚು ಸಾಮರ್ಥ್ಯದ ಟ್ರ್ಯಾಕ್ಟರ್‌ಗಳಿಗೆ ಹಣಕಾಸಿನ ನೆರವು. ಇದಕ್ಕೆ ಅನುದಾನ ಹಂಚಿಕೆಯು 2012-13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿಯಲ್ಲಿ 20 ಹೆಚ್.ಪಿ.ಗಿಂತ ಹೆಚ್ಚು ಸಾಮರ್ಥ್ಯದ ಟ್ರ್ಯಾಕ್ಟರ್ ರಾಜ್ಯಕ್ಕೆ ಭೌತಿಕ 565 ಸಂಖ್ಯೆ ಹಾಗೂ ಆರ್ಥಿಕ ರೂ.423.75 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿದೆ. ಯೋಜನೆಯ ವಿವರವೂ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ತೋಟಗಾರಿಕೆಯಲ್ಲಿ ಯಾಂತ್ರೀಕರಣವನ್ನು ಉತ್ತೇಜಿಸಲು 20 ಹೆಚ್.ಪಿ. ಕಾರ್ಯಕ್ರಮದಲ್ಲಿ ಪ್ರತಿ ಘಟಕಕ್ಕೆ ಶೇ.25%ರಂತೆ ಗರಿಷ್ಠ 75000 ರೂ.ವರೆಗೆ ಸಹಾಯಧನವನ್ನು ನೀಡಲಾಗುತ್ತದೆ.

- ಈ ಯೋಜನೆಯ ತಾಂತ್ರಿಕ ವಿಶಿಷ್ಟತೆಯು ರೈತರು ಖರೀದಿಸಲು ಇಚ್ಛಿಸುವ ಟ್ರ್ಯಾಕ್ಟರ್ 20 ಹೆಚ್.ಪಿ.ಸಾಮರ್ಥ್ಯಕಿಂತ ಹೆಚ್ಚು ಇರಬೇಕು ಮತ್ತು ಉತ್ತಮ ಗುಣಮಟ್ಟದ್ದಾಗಿರಬೇಕು. ಈ ಯೋಜನೆಯ ಉದ್ದೇಶಗಳು ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ತೋಟಗಾರಿಕೆಯಲ್ಲಿ ಯಾಂತ್ರೀಕರಣವನ್ನು ಉತ್ತೇಜಿಸುವುದಾಗಿದೆ.

14. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಪ್ಯಾಕ್ ಹೌಸ್ ನಿರ್ಮಾಣ ಕಾರ್ಯಕ್ರಮ

- ಈ ಕಾರ್ಯಕ್ರಮದ ಹೆಸರು ಪ್ಯಾಕ್ ಹೌಸ್ ನಿರ್ಮಾಣ ಕಾರ್ಯಕ್ರಮವಾಗಿದ್ದು, ಯೋಜನೆಗೆ ಅನುದಾನ ಹಂಚಿಕೆಯು 2012-13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿಯಲ್ಲಿ ಪ್ಯಾಕ್ ಹೌಸ್‌ನ ನಿರ್ಮಾಣ ಕಾರ್ಯಕ್ರಮದಡಿ ಭೌತಿಕ 604 ಸಂಖ್ಯೆ ಹಾಗೂ ಆರ್ಥಿಕ ರೂ. 906.00 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿದೆ. ಯೋಜನೆಯ ವಿವರವು, ತೋಟಗಾರಿಕೆ ಉತ್ಪನ್ನ ಪ್ಯಾಕಿಂಗ್ ಮತ್ತು ಗ್ರೇಡಿಂಗ್ ಮಾಡಲು ನಿರ್ಮಿಸುವ ಪ್ಯಾಕ್ ಹೌಸ್ ಘಟಕದ ಅಳತೆಯು 9 ಮೀಟರ್ ಅಗಲ, ಕನಿಷ್ಠ 3 ಮೀಟರ್ ಎತ್ತರ ಒಟ್ಟು 54 ಚ.ಮೀ. ವಿಸ್ತೀರ್ಣವಿರುವ ಪ್ರತಿ ಘಟಕಕ್ಕೆ ರೂ. 3.00 ಲಕ್ಷಗಳವರೆಗೆ ಯೋಜನಾ ಪ್ರಸ್ತಾವನೆ ವೆಚ್ಚವು ಇದ್ದು, ಇದರಲ್ಲಿ ಶೇ.50%ರಂತೆ ಗರಿಷ್ಠ ರೂ.1.50 ಲಕ್ಷದವರೆಗೆ ಸಹಾಯಧನ ನೀಡಲು ಅವಕಾಶವಿರುತ್ತದೆ.

• ಯೋಜನೆಯ ಉದ್ದೇಶಗಳು

1. ತೋಟಗಾರಿಕೆ ಬೆಳೆಗಳ ಕಟಾವಿನ ನಂತರ ಹಾಳಾಗದಂತೆ ಕ್ಷೇತ್ರ ಮಟ್ಟದಲ್ಲಿ ಸಂರಕ್ಷಿಸಲು, ದಾಸ್ತಾನು ಮಾಡಲು ಪ್ಯಾಕ್ ಹೌಸ್‌ಗಳನ್ನು ನಿರ್ಮಿಸುವುದು ಅವಶ್ಯವಾಗಿರುತ್ತದೆ.

2. ತೋಟಗಾರಿಕೆ ಬೆಳೆಗಳನ್ನು ಕೊಯ್ಲಾದ ನಂತರ ತೋಟಗಾರಿಕೆ ಉತ್ಪನ್ನಗಳನ್ನು ಆಂತರಿಕ ಮಾರಾಟ ಮತ್ತು ರಫ್ತು ಮಾಡುವ ಸಲುವಾಗಿ ವೈಜ್ಞಾನಿಕವಾಗಿ ವಿಂಗಡಿಸಿ ಅಗತ್ಯತೆಗೆ ತಕ್ಕಂತೆ ವಿವಿಧ ರೀತಿಯ ಕಂಟೈನರ್‌ಗಳಲ್ಲಿ ಪ್ಯಾಕ್ ಮಾಡಲು ಅನುಕೂಲವಾಗಿರುತ್ತದೆ.

15. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಈರುಳ್ಳಿ ಶೇಖರಣಾ ಘಟಕ ನಿರ್ಮಾಣ ಕಾರ್ಯಕ್ರಮ.

• ಈ ಕಾರ್ಯಕ್ರಮದ ಹೆಸರು ಈರುಳ್ಳಿ ಶೇಖರಣಾ ಘಟಕವಾಗಿದ್ದು, ಯೋಜನೆಗೆ ಅನುದಾನ ಹಂಚಿಕೆಯು 2012-13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿಯಲ್ಲಿ ಈರುಳ್ಳಿ ಶೇಖರಣಾ ಘಟಕ ನಿರ್ಮಾಣ ಕಾರ್ಯಕ್ರಮದಡಿ ಭೌತಿಕ 229 ಸಂಖ್ಯೆ ಹಾಗೂ ಆರ್ಥಿಕ ರೂ. 114.50 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆಯಾಗಿರುತ್ತದೆ.

• ಯೋಜನೆಯ ವಿವರವು ಈರುಳ್ಳಿ ಶೇಖರಣಾ ಗೋದಾಮು 12 ಮೀಟರ್(ಉದ್ದ)x3.60 ಮೀ.(ಅಗಲ)x1.80ಮೀ.(ಬದಿಯ ಎತ್ತರ)x 2.10ಮೀ.(ಮದ್ಯದ ಎತ್ತರ), ಒಟ್ಟು 90 ಘ.ಮೀ.ಅಳತೆ ಹಾಗೂ ಘಟಕವು ಕನಿಷ್ಠ 25 ಮೆಟ್ರಿಕ್ ಟನ್ ಶೇಖರಣಾ ಸಾಮರ್ಥ್ಯವಿರುವ, ಪ್ರತಿ ಘಟಕಕ್ಕೆ ರೂ.1.00 ಲಕ್ಷಗಳವರೆಗೆ ಯೋಜನಾ ಪ್ರಸ್ತಾವನೆ ವೆಚ್ಚವು ಇದ್ದು, ಇದರಲ್ಲಿ ಇದರಲ್ಲಿ ಶೇ.50%ರಂತೆ ಗರಿಷ್ಠ ರೂ.0.50 ಲಕ್ಷದವರೆಗೆ ಸಹಾಯಧನ ನೀಡಲು ಅವಕಾಶವಿರುತ್ತದೆ.

• ಯೋಜನೆಯ ಉದ್ದೇಶಗಳು: ಈರುಳ್ಳಿಯು ಹೆಚ್ಚು ತೇವಾಂಶಭರಿತ ಬೆಳೆಯಾಗಿದ್ದು, ಶ್ರೀಘವಾಗಿ ಹಾಳಾಗುವ ಗುಣ ಹೊಂದಿರುವ ಕಾರಣ, ಈರುಳ್ಳಿಯನ್ನು ಕಟಾವಾದ ನಂತರ ಅನೇಕ ದಿನಗಳವರೆಗೂ ಹಾಳಾಗದಂತೆ ಸುಸ್ಥಿತಿಯಲ್ಲಿ ಶೇಖರಿಸಿ ಇಡಲು ಅನುಕೂಲವಾಗುತ್ತದೆ.

16. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಪ್ರಚಾರ ಕಾರ್ಯಕ್ರಮ

• ಈ ಕಾರ್ಯಕ್ರಮದ ಹೆಸರು ಪ್ರಚಾರ ಕಾರ್ಯಕ್ರಮವಾಗಿದ್ದು(publicity propaganda) ಅನುದಾನ ಹಂಚಿಕೆಯೂ 2012-13ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಅಡಿಯಲ್ಲಿ ಪ್ರಚಾರ ಕಾರ್ಯಕ್ರಮಕ್ಕೆ ರೂ.57.99 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆ

ಯಾಗಿರುತ್ತದೆ. ಯೋಜನೆಯ ವಿವರವೂ ಈ ಕಾರ್ಯಕ್ರಮದಡಿ ವಿವಿಧ ವಿಚಾರಸಂಕಿರಣ, ಕಾರ್ಯಾಗಾರಗಳು, ಫಲಪುಷ್ಪ ಪ್ರದರ್ಶನಗಳು, ತೋಟಗಾರಿಕೆ ಮೇಳಗಳು, ಜಾಹಿರಾತುಗಳು ಇತ್ಯಾದಿಗಳಿಗೆ ಸಹಾಯಧನ ನೀಡಲು ಅವಕಾಶವಿರುತ್ತದೆ.

17. 2012-13ನೇ ಸಾಲಿನಲ್ಲಿ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ ತೋಟಗಾರಿಕೆ ಉತ್ಪನ್ನಗಳ ಸಂಸ್ಕರಣೆ ಕಾರ್ಯಕ್ರಮದ ಅಂಶಗಳು ಈ ಕೆಳಗಿನಂತಿವೆ.

ಈ ಯೋಜನೆಯ ಹೆಸರು ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ ತೋಟಗಾರಿಕೆ ಉತ್ಪನ್ನಗಳ ಸಂಸ್ಕರಣೆಯಾಗಿದ್ದು, ಯೋಜನೆಗೆ ಅನುದಾನವು ಸದರಿ ಕಾರ್ಯಕ್ರಮಕ್ಕೆ 2012-13ನೇ ಸಾಲಿನಲ್ಲಿ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯ ಲೆಕ್ಕ ಶೀರ್ಷಿಕೆ 2401-00-111-0-08 ಅಡಿ ರೂ.150.00 ಲಕ್ಷಗಳ ಅನುದಾನ. ಯೋಜನೆಯ ಧ್ಯೇಯ ಮತ್ತು ಉದ್ದೇಶವು ಭಾರತ ದೇಶದಲ್ಲಿ ಕರ್ನಾಟಕ ರಾಜ್ಯವು ತೋಟಗಾರಿಕೆ ವಲಯದ ಪ್ರಗತಿ ಪರ ರಾಜ್ಯವೆಂದು ಪ್ರಖ್ಯಾತಗೊಂಡಿದೆ. ರಾಜ್ಯದಲ್ಲಿ 19.01 ಲಕ್ಷ ಹೆಕ್ಟರ್ ಪ್ರದೇಶದಲ್ಲಿ ತೋಟಗಾರಿಕೆ ಬೆಳೆಗಳನ್ನು ಬೆಳೆಯಲಾಗಿದ್ದು, ಒಟ್ಟು ಉತ್ಪನ್ನ 152.13 ಲಕ್ಷ ಟನ್‌ಗಳಷ್ಟು ಇರುತ್ತದೆ. ತೋಟಗಾರಿಕೆ ಉತ್ಪನ್ನಗಳು ಅದರಲ್ಲೂ ವಿಶೇಷವಾಗಿ ಹಣ್ಣು ಮತ್ತು ತರಕಾರಿಗಳು ಅತೀ ಶೀಘ್ರವಾಗಿ ಹಾಳಾಗುವ ಗುಣವನ್ನು ಹೊಂದಿದ್ದು ಕೊಯ್ಲೋತ್ತರ ನಿರ್ವಹಣೆಯ ಹಂತದಲ್ಲಿ ಸಂಸ್ಕರಣೆಯು ಪ್ರಮುಖ ಪಾತ್ರ ವಹಿಸುತ್ತದೆ. ಸಂಸ್ಕರಣೆಯಿಂದ ಉತ್ಪನ್ನಗಳ ಮೌಲ್ಯ ವರ್ಧನೆ ಮತ್ತು ಮಾರುಕಟ್ಟೆಯಲ್ಲಿ ತೋಟಗಾರಿಕೆ ಉತ್ಪನ್ನಗಳ ಸರಬರಾಜು ಮತ್ತು ಬೆಲೆ ನಿಯಂತ್ರಣ ಸಾದ್ಯವಾಗಲಿದೆ. ಈ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರವು ಉತ್ಪನ್ನಗಳ ಸಂಸ್ಕರಣೆಗೆ ಮಹತ್ವವನ್ನು ನೀಡುತ್ತಿದ್ದು, ಇದಕ್ಕಾಗಿ ಸದರಿ ಯೋಜನೆಯನ್ನು ರೂಪಿಸಲಾಗಿದೆ.

ಈ ಯೋಜನೆಯ ಉದ್ದೇಶವು ತೋಟಗಾರಿಕೆ ಬೆಳೆಗಳ ಕೊಯ್ಲೋತ್ತರ ನಿರ್ವಹಣೆ ಹಾಗೂ ಮೌಲ್ಯವರ್ಧನೆಗೆ(ಸಂಸ್ಕರಣೆ) ಹೆಚ್ಚಿನ ಹೊತ್ತು ನೀಡುವುದು ಹಾಗೂ ಉದ್ದಿಮೆದಾರರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಸಹಾಯಧನ ನೀಡುವುದು. ತೋಟಗಾರಿಕೆ ಉತ್ಪಾದನೆ ಮತ್ತು ಗ್ರಾಹಕರ ಬೇಡಿಕೆಯನ್ನು ಆಧರಿಸಿ ಕ್ಷೇತ್ರ ಮಟ್ಟದ ರೈತ ಸಮೂಹ ಹಾಗೂ ಉದ್ದಿಮೆದಾರರು ಅಗತ್ಯವಾದಂತಹ ಸಂಸ್ಕರಣೆ ಮತ್ತು ಮೌಲ್ಯ ವೃದ್ಧೀಕರಣ ಘಟಕಗಳನ್ನು ಅಳವಡಿಸಿಕೊಳ್ಳಲು ಉತ್ತೇಜಿಸುವುದು. ತೋಟಗಾರಿಕೆ ಉತ್ಪನ್ನಗಳ ಕೊಯ್ಲೋತ್ತರ ಹಾನಿಯನ್ನು ಮತ್ತು ನಷ್ಟವನ್ನು ತಡೆಯಲು ಪ್ರಥಮ ಹಂತದ ಸಂಸ್ಕರಣೆ ಜೊತೆಗೆ ಮೌಲ್ಯವರ್ಧಿತ ಸಂಸ್ಕರಣೆಯನ್ನು ಕೈಗೊಳ್ಳಲು ಉತ್ತೇಜಿಸುವುದು.

ಆ. ಯೋಜನೆಯ ಪ್ರಮುಖ ಅಂಶಗಳು ಹಾಗೂ ಸಹಾಯಧನದ ವಿವರ

1. ತೋಟಗಾರಿಕೆ ಉತ್ಪನ್ನಗಳನ್ನು ಉಪಯೋಗಿಸಿ ವಿವಿಧ ವಿಧಾನಗಳಿಂದ ಉತ್ಪನ್ನಗಳನ್ನು ಪ್ರಾಥಮಿಕ ಸಂಸ್ಕರಣೆ ಮಾಡಿ ಮಾರುಕಟ್ಟೆಗೆ ಬಿಡುಗಡೆ ಮಾಡುವ ಘಟಕಗಳಿಗೆ ಸಹಾಯಧನ ನೀಡಲು ಪರಿಗಣಿಸುವುದು.

2. ಈ ಯೋಜನೆಯು ಪ್ರಸ್ತಾವನೆ ಆಧಾರಿತ ಕಾರ್ಯಕ್ರಮವಾಗಿದ್ದು, ಸಂಬಂಧಿಸಿದ ಉದ್ದಿಮೆದಾರರು ಯೋಜನಾ ವರದಿ(Project Report)ಗಳನ್ನು ತಾಂತ್ರಿಕ ಸಂಪನ್ನತೆ ಹೊಂದಿದ ಸಂಸ್ಥೆಗಳ ಮಾರ್ಗದರ್ಶನದಲ್ಲಿ ರಚಿಸಬೇಕು ಅಥವಾ ಆ ಸಂಸ್ಥೆಗಳು ನೀಡಿದಂತಹ ವರದಿಗಳಾಗಿರಬೇಕು. ಈ ಉದ್ದೇಶಕ್ಕಾಗಿ ತಾಂತ್ರಿಕ ಪರಿಣತಿ ಹೊಂದಿರುವ ಸಂಸ್ಥೆಯಾಗಿರಬೇಕು.

3. ಸಹಾಯಧನವು(Credit Linked) ಬ್ಯಾಕ್-ಎಂಡೆಡ್(Credit Linked Back-ended) ಸಹಾಯಧನವಾಗಿರುತ್ತದೆ. ರಾಷ್ಟ್ರೀಕೃತ ಬ್ಯಾಂಕ್, ಸರ್ಕಾರದಿಂದ ಮಾನ್ಯತೆ ಪಡೆದ ಇತರೆ ಆರ್ಥಿಕ ಸಂಸ್ಥೆಗಳು/ಸಹಕಾರಿ ಬ್ಯಾಂಕ್‌ಗಳಿಂದ ಸಾಲ ಪಡೆಯುವುದು ಕಡ್ಡಾಯವಾಗಿರುತ್ತದೆ. ಸದರಿ ಸಾಲವನ್ನು 2010-11ನೇ ಸಾಲಿನ ನಂತರ ಪಡೆದಿರಬೇಕು ಹಾಗೂ ಬ್ಯಾಂಕಿನ ಸಾಲವು ಸಹಾಯಧನದ ಮೊತ್ತಕ್ಕಿಂತ ಹೆಚ್ಚಿರಬೇಕು.

4. ಆಯಾ ಸಂಸ್ಕರಣ ಘಟಕದ ಫಲಾನುಭವಿಗಳು ಸಹಾಯಧನ ಪಡೆದ ಕನಿಷ್ಠ 3 ವರ್ಷಗಳವರೆಗೆ ಮಾಲೀಕತ್ವ ಬದಲಾಯಿಸುವುದಿಲ್ಲವೆಂದು ಒಡಂಬಡಿಕೆಯಲ್ಲಿ ನಮೂದಿಸ ತಕ್ಕದ್ದು.

5. ಸಹಾಯಧನಕ್ಕಾಗಿ ಕೇವಲ ಸ್ಥಿರ ಭಂಡವಾಳ ಹೂಡಿಕೆ(Capital cost and plant and machinery etc)ಯನ್ನು ಮಾತ್ರ ಪರಿಗಣಿಸಲಾಗುವುದು(Land Value, Labour Sheds, Office / quarters, Guest House, Office equipments / Furniture, Vehicles, Tracters, etc. ಕಾಂಪೌಂಡ್ ಗೋಡೆ ಮತ್ತು ರಸ್ತೆ ನಿರ್ಮಾಣಗಳ ವೆಚ್ಚ ಹೊರತುಪಡಿಸಿ) ಅಲ್ಲದೇ ದುಡಿಯುವ ಬಂಡವಾಳ ಹೂಡಿಕೆ(Recurinng costs)ಗಳನ್ನು ಸಹ ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

6. ಸಹಾಯಧನಕ್ಕಾಗಿ ಪ್ರಸ್ತಾವನೆಯನ್ನು ಯೋಜನೆ ಕಾರ್ಯಾರಂಭಿಸಿದ ನಂತರ(After commissioning) ಸಂಬಂಧಪಟ್ಟ ತಾಲೂಕಿನ ಅನುಷ್ಠಾನಾಧಿಕಾರಿಗಳು ಮತ್ತು ತೋಟಗಾರಿಕೆ ಉಪನಿರ್ದೇಶಕರು(ಜಿ.ಪಂ.) ಅವರು ಘಟಕವನ್ನು ತಪಾಸಣೆ ಮಾಡಿದ ನಂತರ ಸಲ್ಲಿಸುವುದು.

7. ಫಲಾನುಭವಿಗಳ ಆಯ್ಕೆ ಸಂದರ್ಭದಲ್ಲಿ ಕೃಷಿ ರಫ್ತುವಲಯ(Agri Export Zone) ವ್ಯಾಪ್ತಿಗೆ ಒಳಪಡುವ ಘಟನೆಗಳು ಹಾಗೂ ರಫ್ತು ಘಟಕಗಳಿಗೆ(Export oriented Units) ಆದ್ಯತೆ ನೀಡುವುದು.

8. ಮಹಿಳಾ ಫಲಾನುಭವಿಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಫಲಾನುಭವಿಗಳಿಗೂ ಹೆಚ್ಚಿನ ಆದ್ಯತೆ ನೀಡುವುದು.

9. ಅನುಧಾನ ಲಭ್ಯತೆಯನ್ನು ಆಧರಿಸಿ ತೋಟಗಾರಿಕೆ ಉಪ ನಿರ್ದೇಶಕರು(ಜಿ.ಪಂ) ಅವರು ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಎಲ್ಲ ಅಡಕಗಳೊಂದಿಗೆ ಹಾಗೂ ಶಿಫಾರಸ್ಸಿನೊಂದಿಗೆ ತಾಂತ್ರಿಕ ಮಂಜೂರಾತಿಗಾಗಿ ನಿಗದಿತ ನಮೂನೆಯಲ್ಲಿ ಮತ್ತು ನಿಗದಿತ ಸಮಯದೊಳಗೆ ನಿರ್ದೇಶನಾಲಯಕ್ಕೆ ಸಲ್ಲಿಸುವುದು.

10. ಜ್ಯೇಷ್ಠತೆ ಆಧಾರದ ಮೇಲೆ ಪ್ರಸ್ತಾವನೆಯನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.

ಮೇಲಿನ ಎಲ್ಲ ಅಂಶಗಳನ್ನು ರೈತರು, ಸಮರ್ಪಕವಾಗಿ ನಿಭಾಯಿಸಿದರೆ, ಯಾವ ರೈತರು ಮೊದಲು ಅರ್ಜಿ ಸಲ್ಲಿಸಿ, ಇಲಾಖೆಯ ನಿಬಂಧನೆಗಳನ್ನು ಪೂರೈಸುತ್ತಾರೊ ಅಂತಹ ರೈತರಿಗೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ. ಯೋಜನೆಯನ್ನು ಪಡೆದುಕೊಳ್ಳಲು ಪ್ರಸ್ತಾವನೆಯೊಂದಿಗೆ ಸಲ್ಲಿಸಬೇಕಾದ ದಾಖಲೆಗಳು ಇಂತಿವೆ. ಒಂದು, ಸಾಲ ಪಡೆದ ಬ್ಯಾಂಕಿನಿಂದ ಒಟ್ಟು ಯೋಜನಾ ವೆಚ್ಚಕ್ಕೆ Investment certificate ಅನ್ನು ಪಡೆದು ಪ್ರಸ್ತಾವನೆಯೊಂದಿಗೆ ಸಲ್ಲಿಸುವುದು. ಎರಡು, ಸಾಲ ಪಡೆದ ಬ್ಯಾಂಕ್ ವತಿಯಿಂದ(Project Appraisal, Project Feasibility ಪ್ರಮಾಣ ಪತ್ರ ಪಡೆಯುವುದು. ಮೂರು, ಪೂರ್ಣ ಪ್ರಮಾಣದ ಸಾಲವು ಉದ್ದಿಮೆದಾರರ ಖಾತೆಗೆ ಬಿಡುಗಡೆ ಆಗಿರುವುದನ್ನು ಖಾತರಿಪಡಿಸಲು Loan Released Statement ಪಡೆದು ಸಲ್ಲಿಸುವುದು. Loan Sanction Later ಅನ್ನು ಪಡೆದು ಪ್ರಸ್ತಾವನೆಯೊಂದಿಗೆ ಸಲ್ಲಿಸುವುದು. ನಾಲ್ಕು, ಘಟಕಗಳಿಗೆ ವಿದ್ಯುತ್‌ಚ್ಛಕ್ತಿ ಪೂರೈಕೆಯಾದ ದಿನಾಂಕ/ವಿವರಗಳ ಬಗ್ಗೆ ದಾಖಲೆ ಪಡೆಯುವುದು. ಐದು, ಪ್ರೊಜೆಕ್ಟ್‌ಗಳಿಗೆ ನಿಯಮಾನುಸಾರ ಸಕ್ಷಮ ಪ್ರಾಧಿಕಾರಗಳಿಂದ (ಗ್ರಾಮ ಪಂಚಾಯಿತಿ, Pollution Control Board, ವಾಣಿಜ್ಯ ತೆರಿಗೆ ಇಲಾಖೆ, Industries And Commerce Inspectionof Factories And Boiler) ಪ್ರಸ್ತಾವನೆಗೆ ಸಂಬಂಧಿಸಿದ ಇತರ ಇಲಾಖೆಗಳಿಂದ ಒಪ್ಪಿಗೆ(Clearance) ಪಡೆಯತಕ್ಕದ್ದು. ಆರು, ಯೋಜನೆಯನ್ನು ಅನುಷ್ಠಾನ ಗೊಳಿಸುತ್ತಿರುವ ಭೂಮಿಗೆ ಸಂಬಂಧಿಸಿದ ಸಂಸ್ಥೆ ಅಥವಾ ಉದ್ದಿಮೆದಾರರ ಹೆಸರಿನಲ್ಲಿ ಇರುವುದನ್ನು ಖಾತರಿಪಡಿಸಿಕೊಂಡು ಸಂಬಂಧಿಸಿದ ದಾಖಲೆಗಳನ್ನು ಪ್ರಸ್ತಾವನೆಯೊಂದಿಗೆ ಸಲ್ಲಿಸುವುದು. ಏಳು, ಯೋಜನೆಯಲ್ಲಿ ಅಳವಡಿಸಲಾಗಿರುವ ಉಪಕರಣಗಳ

ಪಟ್ಟಿ, ಅವುಗಳ ವೆಚ್ಚ ಹಾಗೂ TIN ನಂಬರ್ ಇರುವಂತಹ ರಸೀದಿ ಪಟ್ಟಿ ಮಾಡಿ ದೃಢೀಕರಿಸಿ ಪ್ರಸ್ತಾವನೆಯೊಂದಿಗೆ ಅನುಬಂಧಿಸುವುದು.

ಹಾಗೆಯೇ ಎಂಟನೆಯದು, ಕನಿಷ್ಠ ರೂ.10.000ಗಳ ಛಾಪಾ ಕಾಗದದ ಮೇಲೆ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಈ ಹಿಂದೆ ರಾಜ್ಯ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಇತರೆ ಯಾವುದೇ ಸಂಸ್ಥೆಗಳಿಂದ ಸಹಾಯಧನಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಹಾಗೂ ಸಹಾಯಧನ ಪಡೆದಿರುವುದಿಲ್ಲ ವೆಂದು ದೃಢೀಕರಣ ಪಡೆಯುವುದು. ಒಂಬತ್ತು, ಮಾರ್ಗಸೂಚಿಯಲ್ಲಿ ತಿಳಿಸಿದ ಎಲ್ಲ ಅಗತ್ಯ ದಾಖಲೆಗಳು ಪ್ರಸ್ತಾವನೆಯೊಂದಿಗೆ ಇರುವುದನ್ನು ಖಾತರಿ ಪಡಿಸಿಕೊಂಡು ಇಲಾಖೆ ಅಧಿಕಾರಿಗಳ ಶಿಫಾರಸ್ಸಿನೊಂದಿಗೆ ನಿರ್ದೇಶನಾಲಯಕ್ಕೆ ಪ್ರಸ್ತಾವನೆ ಕಳುಹಿಸುವುದು. ಅಪೂರ್ಣ ಪ್ರಸ್ತಾವನೆಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸಕೂಡದು. ಹತ್ತು, ಫಲಾನುಭವಿಯನ್ನು ಒಳಗೊಂಡ ಘಟಕದ ಒಳಾಂಗಣ ಹಾಗೂ ಹೊರಾಂಗಣದ ವಿವರಗಳು ಸ್ಪಷ್ಟವಾಗಿ ಕಾಣುತ್ತಿರುವಂತಹ ತಲಾ 4 ಛಾಯಾಚಿತ್ರಗಳನ್ನು ಪ್ರಸ್ತಾವನೆಯೊಂದಿಗೆ ಕಡ್ಡಾಯವಾಗಿ ಸಲ್ಲಿಸುವುದು.

ಈ ಯೋಜನೆಗೆ ಸಹಾಯಧನದ ವಿತರಣೆಯು, ನಿಗದಿತ ಅನುದಾನವನ್ನು ಲೆಕ್ಕ ಶೀರ್ಷಿಕೆ: 2401–00–111–0–08ರಲ್ಲಿ ಭರಿಸತಕ್ಕದ್ದು. ಸಹಾಯಧನವನ್ನು ಯಾವುದೇ ಸಂದರ್ಭದಲ್ಲಿ ಫಲಾನುಭವಿಗಳಿಗೆ ನಗದಾಗಿ ವಿತರಿಸುದಿಲ್ಲ. ಹಣವನ್ನು ಅಕೌಂಟ್ ಪೇಯಿ ಚೆಕ್ ರೂಪದಲ್ಲಿ ಫಲಾನುಭವಿಯ ಬ್ಯಾಂಕ್ ಸಾಲದ ಖಾತೆಗೆ ಜಮಾ ಮಾಡುತ್ತಾರೆ. ಸಹಾಯಧನ ಪಡೆದ ನಂತರ ಫಲಾನುಭವಿಯು ತಮ್ಮ ಸಂಸ್ಕರಣಾ ಘಟಕದ ಮುಂಭಾಗದ ಗೋಡೆಯ ಮೇಲೆ ಯಾವ ಯೋಜನೆ/ಯೋಜನೆಗಳ ಅಡಿಯಲ್ಲಿ ಸಹಾಯದನ ಪಡೆಯಲಾಗಿದೆ ಎಂಬುದನ್ನು ನಮೂದಿಸಬೇಕು. ನಂತರವೇ ಸಹಾಯಧನವನ್ನು ವಿತರಿಸುತ್ತಾರೆ.

11. 2011–12ನೇ ಸಾಲಿನ ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಮಿಷನ್ ಯೋಜನೆಯು ಈ ಕೆಳಕಂಡ ಅಂಶಗಳನ್ನು ಒಳಗೊಂಡಿದೆ.

ಈ ಯೋಜನೆಯು ಜಿಲ್ಲೆಗಳು 2011–12ನೇ ಸಾಲಿಗೆ ರಾಜ್ಯಾದ್ಯಂತ ಎಲ್ಲ ವರ್ಗದ ರೈತರಿಗೆ ಮೊದಲ 2 ಹೆಕ್ಟೇರ್ ಪ್ರದೇಶದವರೆಗೆ ಶೇ.75ರಂತೆ ಮತ್ತು ಉಳಿದ 3 ಹೆಕ್ಟೇರ್ ಪ್ರದೇಶಕ್ಕೆ ಶೇ.50ರಂತೆ ಸಹಾಯಧನವನ್ನು ಒದಗಿಸಬೇಕಿರುತ್ತದೆ. ಯೋಜನೆಯಲಿ ಬೆಳೆಯುವ ಬೆಳೆಗಳಿಗೆ ಸಹಾಯಧನವನ್ನು. ಕಾಫಿ, ರಬ್ಬರ್, ಟೀ, ಹೊರತುಪಡಿಸಿ ಇತರೆ ನಿರ್ಧರಿತ ತೋಟಗಾರಿಕೆ ಬೆಳೆಗಳಿಗೆ ಗರಿಷ್ಠ 5 ಹೆಕ್ಟೇರ್‌ವರೆಗೆ ನೀಡುವುದು. ಯೋಜನೆಯ ಸಹಾಯಧನದ ವಿಸ್ತೀರ್ಣದ ಆಧಾರದ ಮೇಲೆ ಅಂದರೆ 2011–12ನೇ ಸಾಲಿನ ಅರ್ಜಿಗಳಿಗೆ ಸಹಾಯಧನವನ್ನು ಪ್ರತಿ ಫಲಾನುಭವಿಯ ಕುಟುಂಬಕ್ಕೆ ಗರಿಷ್ಠ ಐದು ಹೆಕ್ಟೇರ್ ಪ್ರದೇಶದವರೆಗೆ ನೀಡುವುದು ಹನಿ

ನೀರಾವರಿಗೆ 2 ಹೆಕ್ಟೇರ್ ಪ್ರದೇಶದವರಿಗೆ ಶೇ.75% ಮತ್ತು 2 ಹೆಕ್ಟೇರ್ ಮೇಲ್ಪಟ್ಟು 5 ಹೆಕ್ಟರ್‌ವರೆಗೆ ಶೇ.50%ರಂತೆ ಸಹಾಯಧನ ನೀಡಬೇಕಿರುತ್ತದೆ. ಇದನ್ನು ಈಗಾಗಲೇ ಮಾರ್ಗ ಸೂಚಿಯ ಅನುಬಂಧ–1ರಲ್ಲಿ ತಿಳಿಸಿರುವ ಗರಿಷ್ಠ ಮಿತಿಗೆ ಒಳಪಟ್ಟಂತೆ ಸಹಾಯಧನ ನೀಡುವುದು.

1. ಪ್ರತಿ ಫಲಾನುಭವಿಗೆ ಹಣ್ಣಿನ ಮತ್ತು ತೋಟದ ಬೆಳೆಗಳಿಗೆ ಗರಿಷ್ಠ 5 ಹೆಕ್ಟೇರ್ ಮತ್ತು ತರಕಾರಿ ಮತ್ತು ಹೂವಿನ ಬೆಳೆಗಳಿಗೆ ಗರಿಷ್ಠ 2 ಹೆಕ್ಟೇರ್ ವಿಸ್ತೀರ್ಣಕ್ಕೆ ಸಹಾಯಧನ ನೀಡುವುದು. ಸಹಾಯಧನ ನೀಡುವಲ್ಲಿ ಬಿಲ್ಲಿನ ಮೊತ್ತದ ಶೇಕಡ 75%ರಂತೆ ಅಥವಾ ಅನುಬಂಧ–1ರಲ್ಲಿ ಸೂಚಿಸಿರುವ ಮಿತಿಯಲ್ಲಿ ಯಾವುದು ಕನಿಷ್ಠವೂ ಆ ಮೊತ್ತವನ್ನು ನೀಡುವುದು.

2. ಹಿಂದಿನ ಸಾಲುಗಳಲ್ಲಿ ಯಾವುದೇ ಹನಿ ನೀರಾವರಿ ಯೋಜನೆಯಡಿ ರೈತರು 5 ಹೆಕ್ಟೇರ್ ಪ್ರದೇಶಕ್ಕೆ ಸಹಾಯಧನ ಪಡೆಯದಿದ್ದಲ್ಲಿ ಬಾಕಿ ಇರುವ ತೋಟಗಾರಿಕೆ ಬೆಳೆ ವಿಸ್ತೀರ್ಣಕ್ಕೆ 2011–12ನೇ ಸಾಲಿನಲ್ಲಿ ಗರಿಷ್ಠ 5 ಹೆಕ್ಟೇರ್‌ಗೆ ಮೀರದಂತೆ ಸಹಾಯಧನ ನೀಡಬಹುದು. ಉದಾಹರಣೆಗೆ ಈ ಹಿಂದೆ ಫಲಾನುಭವಿಗೆ 2 ಹೆಕ್ಟೇರ್ ವಿಸ್ತೀರ್ಣಕ್ಕೆ ಸಹಾಯಧನ ಪಡೆಯದಿದ್ದಲ್ಲಿ 2011–12ನೇ ಸಾಲಿನಲ್ಲಿ ಉಳಿದ 3 ಹೆಕ್ಟೇರ್ ವಿಸ್ತೀರ್ಣಕ್ಕೆ ಸಹಾಯಧನ ನೀಡಬಹುದು.

3. ಫಲಾನುಭವಿಗಳ ಆಯ್ಕೆಯನ್ನು ತೋಟಗಾರಿಕೆ ಉಪನಿರ್ದೇಶಕರು ಭಾರತ ಸರ್ಕಾರದ ಮಾರ್ಗಸೂಚಿ ಪ್ರಕಾರ ಒಟ್ಟು ಅನುದಾನ ಶೇ.16 ಮತ್ತು ಶೇ.8ನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮತ್ತು ಶೇ.30%ನ್ನು ಮಹಿಳಾ ಫಲಾನುಭವಿಗಳಿಗೆ ಆದ್ಯತೆ ಮೇರೆಗೆ ಮೀಸಲಾಗಿ ಇಡುವುದು. ಈ ಯೋಜನೆಗೆ ಫಲಾನುಭವಿಗಳ ಆಯ್ಕೆಯನ್ನು ಪಂಚಾಯತ್ ರಾಜ್ ಸಂಸ್ಥೆಗಳ(ಜಿ.ಪಂ, ತಾ.ಪಂ, ಗ್ರಾ.ಪಂ) ಮುಖಾಂತರ ಮಾಡುವುದು. ಜಿಲ್ಲಾ ಮಟ್ಟದ ಸೂಕ್ಷ್ಮ ನೀರಾವರಿ ಸಮಿತಿಯು ಫಲಾನುಭವಿಗಳ ಆಯ್ಕೆಯಲ್ಲಿ ಮತ್ತು ಪರಿಣಾಮಕಾರಿ ರೀತಿಯಲ್ಲಿ ರೈತರಿಗೆ ನೆರವನ್ನು ಬಿಡುಗಡೆಗೊಳಿಸುವುದರಲ್ಲಿ ಪೂರ್ಣ ಪಾರದರ್ಶಕತೆಯನ್ನು ನಿಶ್ಚಿತಗೊಳಿಸುವುದು. ಡಿ.ಎಂ.ಐ.ಸಿ ಸಭೆಗಳನ್ನು ಜಿಲ್ಲಾ ತೋಟಗಾರಿಕೆ ಉಪನಿರ್ದೇಶಕರು(ಜಿ.ಪಂ) ಅವರು ಪ್ರತಿ ತಿಂಗಳು 2ನೇ ವಾರದಲ್ಲಿ ಸಭೆಯನ್ನು ಕಡ್ಡಾಯವಾಗಿ ಏರ್ಪಡಿಸಿ ಸಭೆ ನಡವಳಿಗಳನ್ನು ನಿರ್ದೇಶನಾಲಯಕ್ಕೆ ಕಳುಹಿಸುವುದು.

19. 2012–13ನೇ ಸಾಲಿನಲ್ಲಿ ಡಿ–06 ಶೈತ್ಯಾಗಾರಗಳಿಗೆ ಧನಸಹಾಯ(ಜಿಲ್ಲಾ ವಲಯ) ಯೋಜನೆ. ಈ ಯೋಜನೆಯು ಈ ಕೆಳಕಂಡ ಅಂಶಗಳ ಆಧಾರದ ಮೇಲೆ ಸಹಾಯ ಮಾಡಲಾಗುತ್ತದೆ.

ಈ ಯೋಜನೆಯಲ್ಲಿ ತೋಟಗಾರಿಕೆ ಉತ್ಪನ್ನಗಳಾದ ಹಣ್ಣು ಮತ್ತು ತರಕಾರಿಗಳು ಬಹುಬೇಗ ಹಾನಿಗೆ ಒಳಗಾಗುವಂತಹ ಪದಾರ್ಥಗಳಾಗಿದ್ದು, ಇವುಗಳ ಉತ್ಪಾದನೆ ಅಧಿಕವಾದಾಗ ಶೀತಲಗೃಹದಲ್ಲಿ ಕೆಡದಂತೆ ಸಂರಕ್ಷಿಸಿರುವುದು ಅವಶ್ಯಕವಾಗಿರುತ್ತದೆ. ಇದರಿಂದ ರೈತರಿಗೆ ಉತ್ತಮ ಬೆಲೆ ದೊರಕಲು ಅನುಕೂಲವಾಗುತ್ತದೆ. ಈ ಶೀತಲಗೃಹಗಳ ನಿರ್ವಹಣೆಯಲ್ಲಿ ವಿದ್ಯುತ್‌ಚ್ಚಕ್ತಿಯ ಪಾತ್ರ ಮಹತ್ತರವಾಗಿದ್ದು ಶೀತಲಗೃಹಗಳ ಮಾಲೀಕರು ವಿದ್ಯುಚ್ಛಕ್ತಿಯ ವೆಚ್ಚ ಭರಿಸುವಲ್ಲಿ ಅನುಭವಿಸುತ್ತಿರುವ ತೊಂದರೆಗಳನ್ನು ಮನಗೊಂಡು ಶೀತಲಗೃಹಗಳು ಬಳಸುವ ಪ್ರತೀ ಯುನಿಟ್ ವಿದ್ಯುಚ್ಛಕ್ತಿಗೆ ರೂ.1 ರಂತೆ ಸಹಾಯಧನ ನೀಡಲಾಗುತ್ತಿದೆ. ಯೋಜನೆಯ ಉದ್ದೇಶಗಳು, ಪ್ರಸ್ತುತ ರಾಜ್ಯದಲ್ಲಿರುವ ಖಾಸಗಿ ವಲಯದ ಶೀತಲಗೃಹಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ರೈತ ಸಮೂಹದ ಪದಾರ್ಥಗಳನ್ನು ಸಂರಕ್ಷಿಸುವ ಮೂಲ ಉದ್ದೇಶದಿಂದ ಕಾರ್ಯ ನಿರ್ವಹಿಸಲು ಪ್ರೇರೇಪಿಸುವ ಸಲುವಾಗಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದೆ.

20. (field) ತಾಕುಗಳ ಕ್ಷೇತ್ರ ಪರಿಶೀಲನಾ ಕ್ರಮಗಳು– ತಾಕು ಪರಿಶೀಲನೆ ಎಂದರೆ, ರೈತರ ಹೊಲಗಳನ್ನು ಅಧಿಕಾರಿಗಳು ಪರಿಶೀಲಿಸಿ, ಯೋಜನೆಗಳ ಫಲಾಭವಿಗಳು ಯೋಜನೆಯನ್ನು ಸಮರ್ಪಕವಾಗಿ ಬಳಸಿಕೊಂಡಿದ್ದಾರೆಯೇ ಇಲ್ಲವೇ ಎಂಬುದನ್ನು ನೋಡುವುದಾಗಿದೆ. ತಾಕು ಪರಿಶೀಲನೆ ಸಮಯದಲ್ಲಿ ಅನುಷ್ಠಾನಾಧಿಕಾರಿಗಳು ಈ ಕೆಳಕಂಡ ಅಂಶಗಳನ್ನು ಕಡ್ಡಾಯವಾಗಿ ಪರಿಶೀಲಿಸತಕ್ಕದ್ದು. ರೈತರು ತಮ್ಮ ಭೂಮಿಯ ಪರಿಶೀಲನೆ ಸಂದರ್ಭದಲ್ಲಿ ಅಧಿಕಾರಿಗಳಿಗೆ ಕೆಳಗಿನವುಗಳನ್ನು ಕಡ್ಡಾಯವಾಗಿ ತೋರಿಸತಕ್ಕದ್ದು.

ಒಂದು, ರೈತರ ಹೆಸರಿನಲ್ಲಿ ಇರುವ ಪಹಣಿಯಲ್ಲಿ ನಮೂದಿಸಿರುವ ಬೆಳೆ ಮತ್ತು ವಿಸ್ತೀರ್ಣ, ಹನಿ ನೀರಾವರಿ/ಸ್ಪಿಂಕ್ಲರ್ ಅಳವಡಿಕೆ ಸಹಾಯಧನ ಅರ್ಜಿಯಲ್ಲಿ ನಮೂದಿಸಿರುವ ಬೆಳೆಗು, ಗಿಡಗಳ ಸಂಖ್ಯೆ ಮತ್ತು ಕ್ಷೇತ್ರ ವಿಸ್ತೀರ್ಣಕ್ಕೂ ಹೊಂದಾಣಿಕೆಯಾಗಿರಬೇಕು. ಎರಡು, ಭಾರತ ಸರ್ಕಾರದ ಮಾರ್ಗ ಸೂಚಿಯಲ್ಲಿ ನಮೂದಿಸಿರುವ ಉಪಕರಣಗಳ ಪಟ್ಟಿಯು ಕೇವಲ ಸೂಚನಾತ್ಮಕವಾಗಿದ್ದು ರೈತರು ತಾಕಿನಲ್ಲಿ ವಿನ್ಯಾಸಕ್ಕೆ/ತಾಂತ್ರಿಕ ಅಗತ್ಯತೆಗೆ ಅನುಸಾರವಾಗಿ ಅಳವಡಿಸಿದ ಪೈಪುಗಳನ್ನು/ಉಪಕರಣಗಳನ್ನು ಸಹಾಯಧನ ನೀಡಲು ಪರಿಗಣಿಸಬಹುದಾಗಿರುತ್ತದೆ. 2007–08ನೇ ಸಾಲಿನಿಂದ ರಸಾವರಿಯು ಅಳವಡಿಸಿ, ಹನಿ ನೀರಾವರಿಯ ಅವಿಭಾಜ್ಯವಾಗಿದ್ದು, ಕಡ್ಡಾಯವಾಗಿ ಅಳವಡಿಸಬೇಕಾಗಿರುತ್ತದೆ. ಪ್ರತಿ ಫಲಾನುಭವಿಯು ಹನಿ ನೀರಾವರಿ ಪದ್ಧತಿಯಲ್ಲಿ ರಸಾವರಿ ಪದ್ಧತಿ ಅಳವಡಿಸಿರಲೇಬೇಕು. ಅಗತ್ಯ ಉಪಕರಣಗಳಾದ ವೆಂಚರಿ ಅಥವಾ ಫರ್ಟಿಗೇಷನ್ ಟ್ಯಾಂಕ್ ಬೈಪಾಸ್ ಅಸೆಂಬ್ಲಿ ಕಡ್ಡಾಯವಾಗಿ ಅಳವಡಿಸಿರತಕ್ಕದ್ದು. ಸಹಾಯಧನವು ಭಾರತ

ಸರ್ಕಾರ/ರಾಜ್ಯ ಸರ್ಕಾರವು ನಿಗದಿಪಡಿಸಿದ ಮೊತ್ತಕ್ಕಿಂತ ಮೀರಿರತಕ್ಕದ್ದಲ್ಲ. ಮೂರು, ಹನಿ ನೀರಾವರಿ/ಸ್ಪ್ರಿಂಕ್ಲರ್ ವ್ಯವಸ್ಥೆಯ ಅಳವಡಿಕೆ ವಿನ್ಯಾಸ ತೃಪ್ತಿದಾಯಕವಾಗಿ ಇರಬೇಕು. ನಾಲ್ಕು, ನೀರಿನ ಹಂಚಿಕೆಯ ಎಲ್ಲ ಭಾಗಗಳಲ್ಲೂ ಸಮಪ್ರಮಾಣದಲ್ಲಿರಬೇಕು(ಶೇ.10ಕ್ಕಿಂತ ಕಡಿಮೆ ವ್ಯತ್ಯಾಸ ಇದ್ದಲ್ಲಿ ಒಪ್ಪ ಬಹುದು). ಈ ಬಗ್ಗೆ ತಾಕಿನ 5–6 ಸ್ಥಳಗಳನ್ನು ಪರಿಶೀಲಿಸಬೇಕು. ಐದು, ಫಲಾನುಭವಿಗಳು ಅಳವಡಿಸಿದ ಹನಿ ನೀರಾವರಿ/ತುಂತುರು ನೀರಾವರಿ ಉಪಕರಣಗಳ ಸದ್ಬಳಕೆ ಮಾಡುವುದಾಗಿ ಮತ್ತು 3 ವರ್ಷ ಕಡ್ಡಾಯವಾಗಿ ತಾಕಿನಲ್ಲಿ ಉಪಯೋಗ ಮಾಡುವುದಾಗಿ ಅವರಿಂದ ದೃಢೀಕರಣ ಪತ್ರ ಪಡೆಯತಕ್ಕದ್ದು.

ಯೋಜನೆಗೆ ಸಹಾಯಧನವನ್ನು ಲೆಕ್ಕಾಚಾರ ಮಾಡುವ ವಿಧಾನವು ಕೆಳಕಂಡತಿವೆ. ಸಹಾಯಧನವನ್ನು ಲೆಕ್ಕಾಚಾರ ಮಾಡುವಲ್ಲಿ ಈ ಕೆಳಕಂಡ ಅಂಶಗಳನ್ನು ಅಧಿಕಾರಿಗಳು ಪರಿಗಣಿಸುವುರು.

1. ಕಂಪನಿಗಳು ಬಿಲ್ಲಿನಲ್ಲಿ ನಮೂದಿಸಿದ ಧರವು ನಿರ್ದೇಶನಾಲಯದಿಂದ ಕಳುಹಿಸಲಾದ ಧರಗಳಿಗೆ ತಾಳೆ ಹೊಂದಬೇಕು ಅಥವಾ ಅದಕ್ಕಿಂತ ಕಡಿಮೆ ಇದ್ದರೆ ಪರಿಗಣಿಸಬಹುದು.
2. ತಾಕಿನಲ್ಲಿ ಅಂತರ ಬೆಳೆಗಳು ಇದ್ದಲ್ಲಿ ಕನಿಷ್ಠ ಅಂತರವನ್ನು ಹೊಂದಿರುವ ಬೆಳೆಗೆ ಸಹಾಯಧನವನ್ನು ಲೆಕ್ಕಾಚಾರ ಮಾಡಿ ನೀಡತಕ್ಕದ್ದು.
3. ಮೌಲ್ಯವರ್ಧಿತ ತೆರಿಗೆ(ವ್ಯಾಟ್)ಯನ್ನು ಬಿಲ್ಲಿನಲ್ಲಿ ಪ್ರತ್ಯೇಕವಾಗಿ ನಮೂದಿಸಬೇಕು, ವ್ಯಾಟ್ ಸಂಖ್ಯೆಯನ್ನು ಬಿಲ್ಲಿನಲ್ಲಿ ತಪ್ಪದೇ ನಮೂದಿಸಿರಬೇಕು.
4. ಸಹಾಯಧನವನ್ನು ಅನುಬಂಧದ ಕೋಷ್ಟಕದಲ್ಲಿ ನೀಡಿದ ದರಗಳ ಗರಿಷ್ಠಮಿತಿಗೆ ಮಾತ್ರ ನೀಡತಕ್ಕದ್ದು. ಬಿಲ್ಲಿನ ಮೊತ್ತವು ಗರಿಷ್ಠ ಮಿತಿ ಇವುಗಳಲ್ಲಿ ಯಾವುದು ಕಡಿಮೆಯೋ ಆ ಮೊತ್ತದಷ್ಟು ಸಹಾಯಧನ ನೀಡತಕ್ಕದ್ದು. ಒಂದು ವೇಳೆ ತಾಕಿನಲ್ಲಿ ವಿನ್ಯಾಸಕ್ಕನುಸಾರ ಹೆಚ್ಚಿನ ಮೊತ್ತದ ಉಪಕರಣ ಅಳವಡಿಸಬೇಕಾದಲ್ಲಿ ಅವುಗಳ ವೆಚ್ಚವನ್ನು ರೈತರು ಭರಿಸಬೇಕಾಗಿರುತ್ತದೆ. ಹೆಚ್ಚಿನ ಮೊತ್ತವನ್ನು ಸಹಾಯಧನಕ್ಕಾಗಿ ಪರಿಗಣಿಸಲು ಸರ್ಕಾರದಿಂದ ಅವಕಾಶ ಇರುವುದಿಲ್ಲ. ಐಚ್ಛಿಕ ಉಪಕರಣಗಳಾದ(Optional Items) ಮರಳು ಶೋಧಕ (Sand Filter), ಸೈಕ್ಲೋನ್ ಫಿಲ್ಟರ್‌ಗಳಿಗೆ ಸಹಾಯಧನ ಇರುವುದಿಲ್ಲ.
5. ಕಂಪನಿಗಳು ಹಾಗೂ ಡೀಲರ್‌ಗಳು ಹನಿ ನೀರಾವರಿ/ಸ್ಪ್ರಿಂಕ್ಲರ್ ಪದ್ಧತಿಯನ್ನು ಅಳವಡಿಸುವಾಗ ರೈತರಿಗೆ ನೀಡುವ ವಿನ್ಯಾಸ ತಾಂತ್ರಿಕವಾಗಿರಬೇಕು. ಹಾಗೂ ನಕ್ಷೆಯಲ್ಲಿ ದಿಕ್ಕು(ಡೈರೆಕ್ಷನ್) ಸರಹದ್ದು(ಬೌಂಡರಿ) ರೈತನ ಜಮೀನಿನ ಅಕ್ಕಪಕ್ಕದಲ್ಲಿರುವ ಸರ್ವೆ ನಂಬರ್‌ಗಳು ಕ್ಷೇತ್ರದ

ವಿಸ್ತೀರ್ಣ ಇವುಗಳನ್ನು ಕಡ್ಡಾಯವಾಗಿ ನಮೂದಿಸಿರಬೇಕು. ರೈತರು ಕಂಪನಿ ಡೀಲರ್‌ಗಳು ಹಾಗೂ ತಾಲೂಕು ಮಟ್ಟದ ಅನುಷ್ಠಾನಾಧಿಕಾರಿಗಳು ತಪ್ಪದೇ ದೃಢೀಕರಿಸಿರಬೇಕು.

6. ಉಪಕರಣ ಅಳವಡಿಕೆ ನಕ್ಷೆಯಲ್ಲಿ ಫಿಲ್ಟರ್ ಅಳವಡಿಸಿದ ಸ್ಥಳ, ಮುಖ್ಯ/ಉಪ ಪೈಪ್ ಲೈನ್‌ಗಳ ಅಳತೆ ಮತ್ತು ದಿಕ್ಕು ಇವುಗಳನ್ನು ನಮೂದಿಸಿ ಡೀಲರ್‌ಗಳು ಕಂಪನಿಗಳು ಹಾಗೂ ರೈತರು ನಕ್ಷೆಯ ಮೇಲೆ ಸಹಿ ಮಾಡಿರಬೇಕು. ಹಾಗೂ ತಾಲೂಕು ಮಟ್ಟದ ಅನುಷ್ಠಾನಾಧಿಕಾರಿಗಳು ದೃಢೀಕರಿಸಿರಬೇಕು.

7. ಹನಿ ನೀರಾವರಿ ಕಂಪನಿಗಳು ಐ.ಎಸ್.ಐ ಗುರಿತಿನ ಪಿ.ವಿ.ಸಿ.ಪೈಪ್‌ಗಳು ಲ್ಯಾಟರಲ್ ಫಿಲ್ಟರ್ಸ್ ಡ್ರಿಪ್ಪರ್ಸ್ ಮತ್ತು ಸ್ಪಿಂಕ್ಲರ್(Nozzles, Hdpe) ಪೈಪ್ ಮುಂತಾದವುಗಳನ್ನು ಅಳವಡಿಸಿರುವ ಬಗ್ಗೆ ಅನುಷ್ಠಾನಾಧಿಕಾರಿಗಳು ಸಹಾಯಧನ ನೀಡುವ ಪೂರ್ವದಲ್ಲಿ ಇವುಗಳನ್ನು ಖಾತರಿ ಪಡಿಸಿಕೊಳ್ಳಬೇಕು. Control Valveಗಳಿಗೆ ಕಡ್ಡಾಯವಾಗಿ ಪಿ.ವಿ.ಸಿ ವಸ್ತುಗಳನ್ನೇ ಉಪಯೋಗಿಸ ತಕ್ಕದ್ದು. ಉ.I ವಾಲ್ವ್‌ಗಳನ್ನು ಉಪಯೋಗಿಸಬಾರದು.

8. ಸಹಾಯಧನವನ್ನು ಮುಖ್ಯ ಉಪಕರಣಗಳಾದ ಪಿ.ವಿ.ಸಿ. ಪೈಪ್, ಲ್ಯಾಟರಲ್ಸ್ ಡ್ರಿಪ್ಪರ್ ಮೈಕ್ರೋಟ್ಯೂಬ್ Spagatty Pipe, Control Valve, Screen Filter, Disc Filter, Bypass Assambly. Ventury Assambly Fertigation Tank ಮತ್ತು Accessories ಈ ಉಪಕರಣಗಳಿಗೆ ಮಾತ್ರ ನೀಡತಕ್ಕದ್ದು. ಐಚ್ಛಿಕ ಉಪಕರಣಗಳಾದ ಸ್ಯಾಂಡ್ ಪಿಲ್ಟರ್, ಸೈಕ್ಲೋನ್ ಫಿಲ್ಟರ್ ಇವುಗಳನ್ನು ರೈತರು ಅಳವಡಿಸಿಕೊಳ್ಳಲು ಬಯಸಿದ್ದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಭರಿಸತಕ್ಕದ್ದು. ಇವುಗಳನ್ನು ಸಹಾಯಧನ ಲೆಕ್ಕಾಚಾರದಲ್ಲಿ ಪರಿಗಣಿಸಬಾರದು. ಈ ಯೋಜನೆಯಡಿ ಹನಿ ನೀರಾವರಿ ಮೈಕ್ರೋಟ್ಯೂಬ್‌ಗಳಿಗೆ ಧರವನ್ನು ನೀಡಲಾಗಿದ್ದು ಬೆಳೆಯ ಬೇಡಿಕೆ ಆಧರಿಸಿ ಇತರೆ ಉಪಕರಣಗಳಾದ ಆನ್‌ಲೈನ್/ಇನ್‌ಲೈನ್ ಡ್ರಿಪ್ಪ ಸಿಸ್ಟಂಮ್ ಮೈಕ್ರೋಜೆಟ್ ಮೈಕ್ರೋ ಸ್ಪಿಂಕ್ಲರ್‌ಗಳು ಇತ್ಯಾದಿಗಳನ್ನು ಉಪಯೋಗಿಸ ಬಹುದಾಗಿರುತ್ತದೆ. ಸ್ರಿಂಕ್ಲರ್ ಬೆಟ್ಟಗುಡ್ಡದ ಪ್ರದೇಶದಲ್ಲಿ ಸ್ಪಿಂಕ್ಲರ್ ಉಪಕರಣಕ್ಕೆ 4 ಕೆ.ಜಿ ಅಥವಾ 6 ಕೆ.ಜಿ ಒತ್ತಡದ ಹೆಚ್.ಡಿ.ಎಫ್.ಇ.ಪೈಪ್‌ಗಳನ್ನು ಉಪಯೋಗಿಸಲು ಅವಕಾಶವಿದೆ. ಆದರೆ ಸಹಾಯಧನವನ್ನು ಮಾರ್ಗಸೂಚಿಯ ಗರಿಷ್ಠ ಮಿತಿಗೆ ಒಳಪಟ್ಟಂತೆ ನೀಡುವುದು.

9. ಇಬ್ಬರು ಅಥವಾ ಹೆಚ್ಚಿನ ಫಲಾನುಭವಿಗಳು ಒಂದೇ ಬಾವಿಯಿಂದ ನೀರನ್ನು ಹಂಚಿಕೊಳ್ಳುತ್ತಿದ್ದಲ್ಲಿ ನೀರನ್ನು ಹನಿ ನೀರಾವರಿಗೆ ಉಪಯೋಗಿಸಿಕೊಳ್ಳುತ್ತಿರುವ ಬಗ್ಗೆ ಎಲ್ಲ ಫಲಾನುಭವಿಗಳಿಂದ ಅಭ್ಯಂತರವಿಲ್ಲದ ದೃಢೀಕರಣ ಪತ್ರ ಇರುವ ಬಗ್ಗೆ ಖಚಿತಪಡಿಸಿ ಕೊಳ್ಳತಕ್ಕದ್ದು ಹಾಗೂ ನೋ ಅಬ್‌ಜೆಕ್ಷನ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಲಗತ್ತಿಸಿರಬೇಕು.

10. ತಾಲೂಕು ಅಧಿಕಾರಿಗಳು ರೈತ ಫಲಾನುಭವಿಗಳ ತಾಕಿನಲ್ಲಿ ಹನಿ ನೀರಾವರಿ ಉಪಕರಣಗಳನ್ನು ಅಳವಡಿಸಿದ ನಂತರ ಉಪಕರಣಗಳಿಗೆ ಹಾಗೂ ಅವುಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುವ ಬಗ್ಗೆ ಮುಂದಿನ 3 ವರ್ಷಗಳ ಗ್ಯಾರೆಂಟಿ ನೀಡಿದ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು. ನಿಯಮಿತ ಹಾಗೂ ಕಾಲಕಾಲಕ್ಕೆ ಮಾರಾಟ ನಂತರ ನಿರ್ವಹಣೆ ದುರಸ್ತಿ(Difective parts free of costreplacement) ಬಗ್ಗೆ ರೈತ ಫಲಾನುಭವಿಗಳಿಗೆ ದೃಢೀಕರಣ ಪತ್ರ ತಪ್ಪದೇ ನೀಡತಕ್ಕದ್ದು.

11. ಒಟ್ಟು 20 ದಿನಗಳೊಳಗಾಗಿ ಇಲಾಖೆಯ ಪೂರ್ಣ ಪ್ರಕ್ರಿಯೆ ಮುಗಿದು ಸಹಾಯಧನವನ್ನು ಫಲಾನುಭವಿಯ ಖಾತೆಗೆ ಜಮೆ ಮಾಡುವುದು.

12. ರೈತರಿಂದ ಅರ್ಜಿಗಳು ಬಂದಲ್ಲಿ ಅರ್ಜಿಗಳನ್ನು ಕೂಡಲೇ ಆನ್‌ಲೈನ್ ರಿಜಿಸ್ಟ್ರೇಷನ್ ಮಾಡುವುದು ಕಡ್ಡಾಯವಾಗಿರುತ್ತದೆ.

13. ಹನಿ ನೀರಾವರಿ ಅಳವಡಿಸಿದ ತಾಕುಗಳನ್ನು ಶೇ. 100% ಸ.ತೋ.ಹ(ಆರ್.ಎಸ್.ಕೆ)/ ತೋ.ಸ ಹಾಗೂ ಹಿ.ಸ.ತೋ ಮತ್ತು ಸ.ತೋ.ನಿ. ಅವರು ಶೇ.50%ರಷ್ಟು ಹಾಗೂ ತೋಟಗಾರಿಕೆ ಉಪನಿರ್ದೇಶಕರು(ಜಿ.ಪಂ) ಅವರು ಶೇ.10%ರಷ್ಟು ಪರಿಶೀಲನೆ ಮಾಡುವುದು ಕಡ್ಡಾಯವಾಗಿರುತ್ತದೆ.

ಮೇಲಿನ ಭಾಗದಲ್ಲಿ ರೈತರಿಗಾಗಿರುವ ಕೃಷಿನೀತಿಗಳು ಮತ್ತು ಕಾರ್ಯಕ್ರಮಗಳ ಕುರಿತು ಚರ್ಚಿಸಲಾಗಿದೆ. ಸರ್ಕಾರದಿಂದ ರೈತಪರ ಯೋಜನೆಗಳನ್ನು ಪ್ರತಿ ವರ್ಷವೂ ಬಿಡುಗಡೆ ಮಾಡಲಾಗುತ್ತದೆ. ಹಾಗೆಯೇ ಕೃಷಿ ಯೋಜನೆಗಳ ಜೊತೆಗೆ ಸರ್ಕಾರವೂ ಕೃಷಿ ಮತ್ತು ರೈತರ ಅಭಿವೃದ್ಧಿಗಾಗಿ ವಿವಿಧ ಸಾಂಸ್ಥಿಕ ಸಂಸ್ಥೆಗಳನ್ನು ಪ್ರಾರಂಭಿಸಿದೆ. ಸಾಂಸ್ಥಿಕ ಸಂಸ್ಥೆಗಳು ಕೃಷಿ ಉತ್ಪನ್ನ ಮಾರುಕಟ್ಟೆ, ಹಣಕಾಸು ಸಂಸ್ಥೆಗಳು ಇತ್ಯಾದಿಗಳು. ಇವುಗಳನ್ನು ವಿವರವಾಗಿ ಈ ಕೆಳಕಂಡತೆ ವಿಶ್ಲೇಷಿಸಲಾಗಿದೆ.

**ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ**

ಕೃಷಿ ಉತ್ಪನ್ನ ಮಾರುಕಟ್ಟೆಯ ಸ್ಥಾಪನೆಯ ಉದ್ದೇಶವು, ರೈತರು ಚಳಿ, ಮಳೆ, ಗಾಳಿಯೆನ್ನದೆ ಕಷ್ಟಪಟ್ಟು ದುಡಿದು ಬೆಳೆಗಳನ್ನು ಬೆಳೆಯುತ್ತಾರೆ. ಈ ರೀತಿ ಶ್ರಮ ವಹಿಸಿ ಬೆಳೆದ ಬೆಳೆಗಳನ್ನು ಮಾರಾಟ ಮಾಡಿ ಅವುಗಳಿಗೆ ಸೂಕ್ತ ಬೆಲೆ ಪಡೆದಾಗ ಮಾತ್ರ ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆತಂತಾಗಿ ತನ್ಮೂಲಕ ರೈತರ ಅಭಿವೃದ್ಧಿ ಹಾಗೂ ದೇಶದ ಅಭಿವೃದ್ಧಿ ಸಾಧ್ಯ. ಆದುದರಿಂದ ಕೃಷಿ ಉತ್ಪನ್ನಗಳಿಗೆ ಉತ್ತಮ ಹಾಗೂ ದಕ್ಷ ಮಾರಾಟ ವ್ಯವಸ್ಥೆ ಒದಗಿಸುವುದು ಅನಿವಾರ್ಯವಾಗಿದೆ.

ಕೃಷಿ ಮಾರುಕಟ್ಟೆಗಳ ಸ್ಥಾಪನೆಯ ಪೂರ್ವದಲ್ಲಿ ಕೃಷಿ ಉತ್ಪನ್ನ ಮಾರಾಟ ವ್ಯವಸ್ಥೆಯು ಅನೇಕ ದೋಷಗಳಿಂದ ಕೂಡಿತ್ತು. ಅವುಗಳಲ್ಲಿ ಮುಖ್ಯವಾದವುಗಳು ತೂಕದಲ್ಲಿ ಮೋಸ, ಕದ್ದು ಮುಚ್ಚಿನ ವ್ಯಾಪಾರ, ಅನಧಿಕೃತ ರಿವಾಜುಗಳನ್ನು ವಸೂಲಿ ಮಾಡುವುದು, ವ್ಯಾಪಾರಿ ಕೊಟ್ಟಿದ್ದೇ ಬೆಲೆ ಮುಂತಾದುವುಗಳು. ಇಂತಹ ಅಕ್ರಮಗಳನ್ನು ತೊಡೆದುಹಾಕಿ ಸುವ್ಯವಸ್ಥಿತ ಕೃಷಿ ಉತ್ಪನ್ನಗಳ ಮಾರಾಟ ವ್ಯವಸ್ಥೆಯನ್ನು ಆಚರಣೆಯಲ್ಲಿ ತರುವುದು. ಮಾರಾಟಕ್ಕೆ ಅಗತ್ಯವಾದ ಸೌಕರ್ಯ ಹಾಗೂ ಸೌಲಭ್ಯಗಳನ್ನು ಒದಗಿಸುವುದು ಹಾಗೂ ಮಾರಾಟದಲ್ಲಿನ ರಿವಾಜುಗಳನ್ನು ನಿಗದಿಪಡಿಸಿ ತನ್ಮೂಲಕ ಅನವಶ್ಯಕ ವೆಚ್ಚಗಳನ್ನು ನಿರ್ಬಂಧಿಸುವುದು ಇವೇ ಮುಂತಾದ ಉದ್ದೇಶಗಳಿಂದ ರೈತರ ಉತ್ಪನ್ನಗಳಿಗೆ ಸ್ಪರ್ಧಾತ್ಮಕವಾದ ಬೆಲೆಗಳನ್ನು ಪಡೆದುಕೊಳ್ಳಲು ಅನುಕೂಲತೆಯನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ ಶಾಸನ 1966ನ್ನು ರಚಿಸಿ ಜಾರಿಯಲ್ಲಿ ತರಲಾಗಿದೆ. ಈ ಕಾಯ್ದೆ ಅನ್ವಯ ರಾಜ್ಯದಾದ್ಯಂತ  ಸ್ಥಾಪಿಸಿರುವ ಕೃಷಿ ಉತ್ಪನ್ನ ಮಾರುಕಟ್ಟೆಗಳು ಕಾರ್ಯ ನಿರ್ವಹಿಸುತ್ತವೆ

ಕೃಷಿ ಉತ್ಪನ್ನ ಮಾರಾಟ(ನಿಯಂತ್ರಣ) ಶಾಸನ 1966 ವಿಶೇಷ ಅಂಶಗಳು–ಈ ಶಾಸನದ ಅಡಿಯಲ್ಲಿ ಸಮಿತಿಯ ರಚನೆಯಲ್ಲಿ ರೈತರಿಗಿರುವ ಅರ್ಹತೆಗಳು ಇಂತಿವೆ. ರೈತರಿಗೆ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಅವರದೇ ಆದ ಸ್ಥಾನಮಾನಗಳಿವೆ. ಅವುಗಳ ವಿವರವನ್ನು ಚರ್ಚಿಸಲಾಗಿದೆ. ಸಮಿತಿಯ ರಚನೆಯಲ್ಲಿ ರೈತರಿಗೆ ಹೆಚ್ಚಿನ ಪ್ರಾತಿನಿಧ್ಯ, ಕೃಷಿ ಮಾರುಕಟ್ಟೆಯು ಸಮಿತಿಯನ್ನು ರಚಿಸುವಾಗ ರೈತರಿಗೆ ಆದ್ಯತೆ ನೀಡಬೇಕು ಎನ್ನುವುದು, 1966ರ ಶಾಸನದಡಿಯಲ್ಲಿ ಹೇಳಲಾಗಿದೆ. ಸಮಿತಿಯ ರಚನೆಯಲ್ಲಿ ಪ.ಜಾ. ಮತ್ತು ಪ.ಪಂ.ರೈತರಿಗೆ ಪ್ರಾತಿನಿಧ್ಯ ಮೀಸಲು ಇರುತ್ತದೆ. ಸಮಿತಿಯ ರಚನೆಯಲ್ಲಿ ಓರ್ವ ರೈತ ಮಹಿಳೆಗೆ ಸಹ ಪ್ರಾತಿನಿಧ್ಯವನ್ನು  ಮೀಸಲಿಡುತ್ತಾರೆ. ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಶಾಸನ 1966ರ ಪ್ರಕಾರ ರೈತರಿಗೆ ನೇರ ಮಾರಾಟಕ್ಕೆ ಅವಕಾಶ ನೀಡಲಾಗುತ್ತದೆ. ಸಮಿತಿಯಲ್ಲಿ ಸಮಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರಾಗುವ ಹಕ್ಕು ರೈತ ಪ್ರತಿನಿಧಿಗಳಿಗೆ ಮಾತ್ರವೇ ಇರುತ್ತದೆ. ಸಮಿತಿಯ ಜೊತೆಗೆ ಮಂಡಲ ಪಂಚಾಯಿತಿಗಳಿಗೆ ಸಮಿತಿ ಪರವಾಗಿ ಕಾರ್ಯ ನಿರ್ವಹಿಸಲು ಅವಕಾಶವಿರುತ್ತದೆ. ಕೃಷಿ ಉತ್ಪನ್ನ ಮಾರಾಟ ಶಾಸನ 1966 ವಿಶೇಷತೆಯೂ ವ್ಯಾಪಾರಿಗಳಿಗೆ ಮಿತಿ ಮೀರಿದ ವ್ಯಾಪಾರಕ್ಕ ತಡೆ ಮಾಡುವುದು.

ರೈತರು ಯಾವುದೇ ಉತ್ಪನ್ನಗಳನ್ನು ಉತ್ಪಾದಿಸಿ ಮಾರುಕಟ್ಟೆಗೆ ತಂದರೂ ಮಾರಾಟ ಮಾಡಲು ಅನುಕೂಲ ಮಾಡುವುದು. ಅಂದರೆ ವಿಶೇಷ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಪ್ರತ್ಯೇಕ ಮಾರುಕಟ್ಟೆಗಳನ್ನು ಸ್ಥಾಪಿಸಲು ಮಾರುಕಟ್ಟೆಯಲ್ಲಿ ಅವಕಾಶವನ್ನು ನೀಡಲಾಗುತ್ತದೆ.

ಮಾರುಕಟ್ಟೆಯಲ್ಲಿ ಪರಸ್ಪರ ಮಧ್ಯ ಉಂಟಾಗುವ ವ್ಯಾಜ್ಯಗಳನ್ನು ಸಮಿತಿಯ ಮಟ್ಟದಲ್ಲಿಯೇ ವ್ಯಾಜ್ಯಗಳ ತೀರ್ಮಾನಕ್ಕಾಗಿ ವ್ಯವಸ್ಥೆ, ಸ್ಪರ್ಧಾತ್ಮಕ ಬೆಲೆಗಳನ್ನು ದೊರಕಿಸಿಕೊಡಲು ಬಹಿರಂಗ ಹರಾಜು ಮತ್ತು ಟೆಂಡರ್ ಪದ್ಧತಿಗಳನ್ನು ಅಳವಡಿಸಲಾಗುತ್ತದೆ. ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ದಲ್ಲಾಳಿಗಳಿಂದಾಗುವ ತೊಂದರೆ, ಅಂದರೆ ರೈತರಿಂದ ದಲ್ಲಾಳಿ ಶುಲ್ಕ ವಸೂಲಿಯನ್ನು ತಡೆಯುವುದು. ಒಟ್ಟಾರೆ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ವೈಜ್ಞಾನಿಕ ರೀತಿ ಕೃಷಿ ಉತ್ಪನ್ನ ಮಾರಾಟಕ್ಕಾಗಿ ಸುಸಜ್ಜಿತ ಸೌಲಭ್ಯವನ್ನು ಶಾಸನ 1966ರ ಅಡಿಯಲ್ಲಿ ರೈತರಿಗೆ ಉತ್ಪನ್ನಗಳನ್ನು ಮಾರಾಟ ಮಾಡಲು ಒದಗಿಸುವುದಾಗಿದೆ.

## ಮಾರುಕಟ್ಟೆ ಪ್ರಾಂಗಣದಲ್ಲಿ ಒದಗಿಸಿರುವ ಸೌಲಭ್ಯಗಳು

ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ರೈತರಿಗಾಗಿ ವಿವಿಧ ಮಾರಾಟ ಸೌಲಭ್ಯಗಳನ್ನು ಮಾರುಕಟ್ಟೆಯು ಒದಗಿಸುತ್ತದೆ. ಅವುಗಳ ವಿವರಗಳು ಇಂತಿವೆ. ರೈತರಿಗಾಗಿ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಮಾರಾಟಕ್ಕಾಗಿ ಬಹಿರಂಗ ಹರಾಜುಕಟ್ಟೆಗಳನ್ನು ನಿರ್ಮಿಸಲಾಗಿದೆ, ರೈತರು ಉತ್ಪನ್ನಗಳನ್ನು ಮಾರಲು ಮಾರುಕಟ್ಟೆಗೆ ಬಂದಾಗ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಬಹಿರಂಗ ಹರಾಜುಕಟ್ಟೆಗಳ ಸೌಲಭ್ಯವನ್ನು ಒದಗಿಸುವುದು. ರೈತರಿಗೆ ವರ್ಗೀಕರಣ ಸೌಲಭ್ಯಗಳನ್ನು ಅಂದರೆ ಕೃಷಿ ಉತ್ಪನ್ನಗಳನ್ನು, ಚಿಕ್ಕದು ದೊಡ್ಡದು ಅಥವಾ ಒಣಗಿದ್ದು ಹಸಿ ಉತ್ಪನ್ನಗಳಾಗಿ ರೈತರು ಬೇರ್ಪಡಿಸಿಕೊಳ್ಳಲು ನೆರವು ನೀಡುವ ಸೌಲಭ್ಯವನ್ನು ಒದಗಿಸುವುದು. ಮಾರುಕಟ್ಟೆಯಲ್ಲಿ ರೈತರಿಗೆ ಉತ್ಪನ್ನಗಳನ್ನು ಮಾರಲು ನೇರ ಮಾರಾಟ ಪದ್ಧತಿಯ ವ್ಯವಸ್ಥೆಯನ್ನು ಒದಗಿಸುವುದು. ರೈತರು ಉತ್ಪನ್ನಗಳನ್ನು ಮಾರಲು ಮಾರುಕಟ್ಟೆಗೆ ಬಂದಾಗ ಅವರಿಗೆ ತಂಗಲು, ವಿಶ್ರಾಂತಿ ಗೃಹಗಳನ್ನು ಒದಗಿಸುವುದು. ಮಾರುಕಟ್ಟೆಯಲ್ಲಿ ದನ, ಕರು, ಎಮ್ಮೆ ಇತ್ಯಾದಿಗಳನ್ನು ಮಾರಲು ಅವುಗಳನ್ನು ತಂಗಿಸಲು ಜಾನುವಾರುಗಳಿಗಾಗಿ ಕೊಟ್ಟಿಗೆಗಳನ್ನು ನಿರ್ಮಿಸುವುದು. ರೈತರು ಉತ್ಪನ್ನಗಳನ್ನು ತೆಗೆದುಕೊಂಡು ಮಾರುಕಟ್ಟೆಗೆ ಬಂದಾಗ ಗಾಡಿಗಳನ್ನು ನಿಲ್ಲಿಸುವ ಪ್ರತ್ಯೇಕ ಸ್ಥಳದ ವ್ಯವಸ್ಥೆ ಮಾಡುವುದು. ಮಾರುಕಟ್ಟೆಯಲ್ಲಿ ರೈತರಿಗೆ ಕುಡಿಯುವ ನೀರಿನ ವ್ಯವಸ್ಥೆ.

ರೈತರಿಗೆ ಮಾರುಕಟ್ಟೆಯಲ್ಲಿ ಹಣಕಾಸಿನ ವ್ಯವಹಾರವನ್ನು ಮಾಡಲು, ಅಂಚೆ ತಂತಿ ಕಛೇರಿ ಮತ್ತು ಬ್ಯಾಂಕುಗಳ ಸೌಲಭ್ಯವನ್ನು ಒದಗಿಸುವುದು. ಹಾಗೆಯೇ ರೈತರಿಗೆ ವಿವಿಧ ಮಾರುಕಟ್ಟೆಯ ಮಾಹಿತಿಯನ್ನು ಒದಗಿಸಲು, ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಮಾರಾಟ ಕುರಿತಂತೆ ಪೇಟೆ ಸಮಾಚಾರ ಸೇವೆಯನ್ನು ಸಮಯಕ್ಕೆ ಸರಿಯಾಗಿ ರೈತರಗೆ ತಲುಪಿಸುವ ಕೆಲಸವನ್ನು ಕೃಷಿ ಉತ್ಪನ್ನ ಮಾರುಕಟ್ಟೆಯು ಮಾಡುತ್ತದೆ.

ಕೃಷಿ ಉತ್ಪನ್ನ ಮಾರುಕಟ್ಟೆ ಪ್ರಾಂಗಣದಲ್ಲಿಯೇ ಮಾರಾಟ ಮಾಡಿದರೆ ದೊರೆಯುವ ಪ್ರಯೋಜನೆಗಳು–ರೈತರು ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ತಾವು ಉತ್ಪಾದಿಸಿದ ಉತ್ಪನ್ನಗಳನ್ನು ಮಾರಾಟ ಮಾಡಿದಾಗ ಅನೇಕ ಅನುಕೂಲಗಳನ್ನು ಪಡೆದುಕೊಳ್ಳುತ್ತಾರೆ. ಅವುಗಳ ವಿವರವೂ ಈ ಕೆಳಗಿನಂತಿದೆ. ಒಂದು, ರೈತರಿಗೆ ಮಾರಾಟ ಮಾಡುವಾಗ ಸರಿಯಾದ ತೂಕದ ವ್ಯವಸ್ಥೆ ಮಾಡಲಾಗುತ್ತದೆ. ಎರಡು, ರೈತರ ಸರಕುಗಳನ್ನು ಅವುಗಳ ಗುಣಧರ್ಮದ ಆಧಾರದ ಮೇಲೆ ಮಾರುಕಟ್ಟೆಯಲ್ಲಿಯೇ ವರ್ಗೀಕರಿಸಲಾಗುತ್ತದೆ. ಮೂರು, ಮಾರಾಟ ಮಾಡಲು ಟೆಂಡರ್ ಪದ್ದತಿ, ಬಹಿರಂಗ ಹರಾಜು ಪದ್ಧತಿ ಅಥವಾ ಪರಸ್ಪರ ಬಹಿರಂಗ ಒಪ್ಪಂದದ ಪದ್ಧತಿಯ ಮಾರಾಟದ ಮೂಲಕ ಸ್ಪರ್ಧಾತ್ಮಕ ಬೆಲೆಯನ್ನು ಪಡೆಯಲು ಸಹಕಾರ ಮಾಡುವುದು. ನಾಲ್ಕು, ಕಾನೂನುಬದ್ಧ ರಿವಾಜುಗಳನ್ನು ಮಾತ್ರ ಮುರಿದುಕೊಳ್ಳುವುದರಿಂದ ಅಕ್ರಮ ರಿವಾಜುಗಳಿಗೆ ಅವಕಾಶವಿರುವುದಿಲ್ಲ. ಐದು, ರೈತರ ಮತ್ತು ಮಾರಾಟಗಾರರ ಮಧ್ಯ ಏರ್ಪಡುವ ತಂಟೆ-ತಕರಾರುಗಳ ಸುಲಭ ನಿವಾರಣೆಗಾಗಿ ಸಮಿತಿಯನ್ನು ನೇಮಿಸಲಾಗಿದೆ. ಆರು, ರೈತರು ಸುಲಭವಾಗಿ ಪೇಟೆ ಮಾಹಿತಿಯನ್ನು ಪಡೆಯಬಹುದು. ಏಳು, ರೈತರು ಉತ್ಪನ್ನಗಳನ್ನು ಮಾರಾಟವಾದ ದಿನವೇ ಸರಕಿನ ಮೌಲ್ಯವನ್ನು ಪಡೆಯಬಹುದು. ಇವೆಲ್ಲವುಗಳ ಸೌಕರ್ಯಗಳನ್ನು ರೈತರು ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಹೋಗಿ ಉತ್ಪನ್ನಗಳನ್ನು ಮಾರಾಟ ಮಾಡುವುದರಿಂದ ಪಡೆಯಬಹುದು.

**ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯ ಕಾರ್ಯಗಳು**

* ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ, ಭೂಸ್ವಾಧೀನಕ್ಕಾಗಿ ಹಾಗೂ ಪ್ರಾಂಗಣಗಳ ಅಭಿವೃದ್ಧಿಗೆ ಸಾಲ ನೀಡುವುದು.
* ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ತೂಕದ ಯಂತ್ರ, ಸಾರಿಗೆ ವಾಹನ ಖರೀದಿಗಾಗಿ ಅನುದಾನ ನೀಡುವುದು.
* ಕೃಷಿ ಮಾರಾಟ ಕುರಿತು ಸಾಹಿತ್ಯ ಪ್ರಕಟಿಸುವುದು.
* ಕೃಷಿ ಮಾರಾಟ ಸಮಸ್ಯೆಗಳ ಕುರಿತು ಸಂಶೋಧನೆ ನಡೆಸುವುದು.
* ಕೃಷಿ ಮಾರಾಟ ಕುರಿತು ತರಬೇತಿ ನೀಡುವುದು.
* ಕೃಷಿ ಉತ್ಪನ್ನ ಮಾರುಕಟ್ಟೆಗಳ ಮಾಹಿತಿ ಸಂಗ್ರಹಿಸಿ ಪ್ರಸಾರ ಮಾಡುವುದು.
* ಕೃಷಿ ಮಾರಾಟಕ್ಕೆ ಸಂಬಂಧಿಸಿದಂತೆ ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ವಿಚಾರ ಸಂಕಿರಣ ಏರ್ಪಡಿಸುವುದು.

* ಕೃಷಿ ಉತ್ಪನ್ನ ಮಾರುಕಟ್ಟೆಗಳ ಸರ್ವತೋಮುಖ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರಕ್ಕೆ ಆಡಳಿತಾತ್ಮಕ ಹಾಗೂ ಅವಶ್ಯಕ ಸಲಹೆ ನೀಡುವುದು.
* ರೈತರು ಹಮಾಲರು ಹಾಗೂ ತೂಕದವರಿಗೆ ವಿಮಾ ಯೋಜನೆಯಂತಹ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು.

**ಅಡಮಾನ ಸಾಲ ಯೋಜನೆ:** ರೈತರಿಗೆ ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆಯು ಕರ್ನಾಟಕ ರಾಜ್ಯ ಕೃಷಿ ಮಂಡಳಿಯಿಂದ ದೊರೆಯುತ್ತದೆ. ಈ ಯೋಜನೆಯು ತುಂಬಾ ಅನುಕೂಲವಾಗಿದ್ದು, ಬೆಳೆಗಳು ಕುಸಿದ ಸಂದರ್ಭದಲ್ಲಿ ರೈತರು ಪ್ರಾಯೋಜನೆಯನ್ನು ಪಡೆಯ ಬಹುದಾಗಿದೆ. ಈ ಯೋಜನೆಯು ಈ ಕೆಳಕಂಡ ಅಂಶಗಳನ್ನು ಒಳಗೊಂಡಿದೆ.

**ಅಡಮಾನ ಸಾಲ ಯೋಜನೆಯ ಉದ್ದೇಶ:** ರೈತರ ಉತ್ಪನ್ನಗಳಿಗೆ ಸ್ಪರ್ಧಾತ್ಮಕ ಬೆಲೆ ದೊರೆಯುವಂತೆ ಪ್ರಯತ್ನಿಸುವುದು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮುಖ್ಯ ಉದ್ದೇಶವಾಗಿರುತ್ತದೆ. ಮಾರುಕಟ್ಟೆ ಸಮಿತಿಗಳ ಅವಿರತ ಪ್ರಯತ್ನಗಳ ಹೊರತಾಗಿಯೂ ಅನೇಕ ಸಂದರ್ಭಗಳಲ್ಲಿ ರೈತರ ಉತ್ಪನ್ನಗಳಿಗೆ ಅವುಗಳಿಗೆ ನಿಜಕ್ಕೂ ಸಿಗಬೇಕಾದ ಬೆಲೆಗಳು ದೊರೆಯದಿರುವ ಸಾಧ್ಯತೆಗಳು ಇವೆ. ಇದಕ್ಕೆ ಬಹು ಮುಖ್ಯ ಕಾರಣಗಳಲ್ಲಿ ಒಂದು, ರೈತರು ಸುಗ್ಗಿಯ ಸಮಯದಲ್ಲಿ ಅವರ ಸಣ್ಣ ಪುಟ್ಟ ಸಾಲಗಳು ಹಾಗೂ ಇತರೆ ಹಣಕಾಸಿನ ತೊಂದರೆಯನ್ನು ಆದಷ್ಟು ಬೇಗನೆ ಪರಿಹರಿಸಿಕೊಳ್ಳಲು ತೀರಾ ಆತುರದಿಂದ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವುದು. ಇದರಿಂದಾಗಿ ಮಾರುಕಟ್ಟೆಯಲ್ಲಿ ಉತ್ಪನ್ನದ ಸರಬರಾಜು ಅತಿಯಾಗಿ ಬೆಲೆಗಳು ಕುಸಿಯುತ್ತವೆ.

ರೈತರು ತಮ್ಮ ಉತ್ಪನ್ನವನ್ನು ಈ ರೀತಿ ಹತಾಶ ಸ್ಥಿತಿಯಲ್ಲಿ ಮಾರಾಟ ಮಾಡುವುದನ್ನು ತಪ್ಪಿಸಲು, ರೈತರಿಗೆ ಸುಗ್ಗಿಯ ಕಾಲದಲ್ಲಿ ಆರ್ಥಿಕ ಸೌಲಭ್ಯವನ್ನು ಒದಗಿಸುವುದು ತೀರಾ ಅಗತ್ಯ ಆದುದರಿಂದ ಮಾರುಕಟ್ಟೆ ಸಮಿತಿಗಳಲ್ಲಿ ರೈತರಿಗೆ "ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆ" ಯನ್ನು ರೂಪಿಸಲಾಗಿದೆ. ಈ ಯೋಜನೆಯ ಅನ್ವಯ ಕೃಷಿ ಉತ್ಪನ್ನಗಳಿಗೆ ಉತ್ತಮ ಧಾರಣೆ ದೊರೆಯದೇ ಬೆಲೆ ಕುಸಿದಾಗ ರೈತರನ್ನು ಆರ್ಥಿಕ ಸಂಕಷ್ಟದಿಂದ ತಪ್ಪಿಸಲು ಮಾರುಕಟ್ಟೆ ಸಮಿತಿಗಳಲ್ಲಿ ಪ್ರತ್ಯೇಕ ಆವರ್ತ ನಿಧಿಯನ್ನು ಕ್ರೋಡೀಕರಿಸಿ, ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆ ಸಮಿತಿಗಳಲ್ಲಿ ಅಡವಿಟ್ಟು ಅಲ್ಪಾವಧಿ ಮುಂಗಡ ಸಾಲ ನೀಡುವ ಯೋಜನೆಯನ್ನು ರೂಪಿಸಲಾಗಿದೆ. ಇದರ ಸದುಪಯೋಗ ಪಡೆದು ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಸಮಿತಿಗಳಲ್ಲಿ ಅಡವಿಟ್ಟು ಸಾಲ ಪಡೆದು ಕಡಿಮೆ ಬೆಲೆಗೆ ಮಾರುವ ಪರಿಸ್ಥಿತಿಯಿಂದ ಪಾರಾಗಬಹುದಾಗಿದೆ.

**ಯೋಜನೆಯ ವ್ಯಾಪ್ತಿ:** ಈ ಯೋಜನೆಯನ್ನು ರಾಜ್ಯದಲ್ಲಿರುವ ಮಾರುಕಟ್ಟೆ ಸಮಿತಿಗಳಲ್ಲಿ ಆರ್ಥಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಜಾರಿಗೊಳಿಸಿದೆ. ಮಾರುಕಟ್ಟೆ ಸಮಿತಿಗಳ ಆರ್ಥಿಕ ಸಂಪನ್ಮೂಲ ಗಳ ಕ್ರೋಢೀಕರಣವಾದಂತೆಲ್ಲ ಹಂತ ಹಂತವಾಗಿ ಇತರೆ ಸಮಿತಿಗಳಲ್ಲಿಯೂ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲಾಗುವುದು. ವಾರ್ಷಿಕ ಆದಾಯದ ಶೇಕಡ 10ರಷ್ಟು ಹಣವನ್ನು ಮಾರುಕಟ್ಟೆ ಸಮಿತಿಗಳು ಈ ಉದ್ದೇಶಕ್ಕಾಗಿಯೆ ಕಾಯ್ದಿರಿಸುತ್ತವೆ.

**ಯೋಜನೆಯ ಮುಖ್ಯಾಂಶಗಳು**

ಉತ್ಪನ್ನಗಳ ಮೌಲ್ಯದ ಶೇಕಡ 60ರಷ್ಟನ್ನು ಅಡಮಾನ ಸಾಲವಾಗಿ ನೀಡಲಾಗುವುದು.

ರೂ. 200,000–00ಗಳವರೆಗೆ ಗರಿಷ್ಠ ಸಾಲ.

ಸಾಲದ ಅವಧಿ 180 ದಿನಗಳು.

ಮೊದಲ 90 ದಿನಗಳಿಗೆ ಬಡ್ಡಿರಹಿತ, ತದನಂತರದ ದಿನಗಳಿಗೆ ಸಾಲದ ಮೊತ್ತಕ್ಕೆ ಅನುಗುಣವಾಗಿ ಬಡ್ಡಿಯ ದರ:

**ಕೋಷ್ಟಕ–20**

**ರೈತರಿಗೆ ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆಯ ವಿವರಗಳು**

| ಕ್ರಸಂ. | ಹಣದ ವಿವರ | ಬಡ್ಡಿ ಶೇ. |
|---|---|---|
| 1. | ರೂ. 25,000=00ದವರೆಗೆ | 4% |
| 2. | ರೂ. 25,000=00ದಿಂದ 50,000=00ದವರೆಗೆ | 6% |
| 3. | ರೂ. 50,000=00ದಿಂದ 100,000=00 | 8% |
| 4. | ರೂ. 100,000=00ದಿಂದ 200,000=00 | 10% |

**ಮಾಹಿತಿ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ, ಬಳ್ಳಾರಿ, 2012–13.

ಮೇಲಿನ ಕೋಷ್ಟಕ: 20ರಲ್ಲಿ ರೈತರಿಗೆ ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆಯನ್ನು ನೀಡುತ್ತಿದ್ದು ಅವುಗಳ ವಿವರ ಈ ಕೆಳಗಿನಂತಿದೆ. ರೂ. 25,000=00ದ ವರೆಗೆ ಶೇ.4ರ ಬಡ್ಡಿದರದಲ್ಲಿ, ರೂ. 25,000=00ದಿಂದ 50,000=00ದವರೆಗೆ ಶೇ.6ರ ಬಡ್ಡಿದರದಲ್ಲಿ, ರೂ. 50,000=00ದಿಂದ 100,000=00, ಶೇ.8ರ ಬಡ್ಡಿದರದಲ್ಲಿ ಮತ್ತು ರೂ. 100,000=00 ದಿಂದ 200,000=00, ಶೇ.10ರ ಬಡ್ಡಿದರದಲ್ಲಿ ರೈತರರಿಗೆ ಹಣಕಾಸಿನ ನೆರವನ್ನು ಕೃಷಿ

ಉತ್ಪನ್ನ ಮಾರುಕಟ್ಟೆಯು ನೀಡುತ್ತದೆ. ಸಾಲದ ಮರು ಪಾವತಿಯನ್ನು 180 ದಿನಗಳೊಳಗೆ ಮಾಡಬೇಕು. ರೈತರು ಈ ಕೆಳಗಿನಂತೆ ತಾವು ಅಡವಿಟ್ಟ ಉತ್ಪನ್ನಗಳನ್ನು ಹಣವನ್ನು ಮರುಪಾವತಿಸಿ ಬಿಡಿಸಿಕೊಳ್ಳಬೇಕು.

- ಅಡವಿಟ್ಟ ಉತ್ಪನ್ನಗಳನ್ನು 180 ದಿನಗಳೊಳಗೆ ಬಿಡಿಸಿಕೊಳ್ಳದಿದ್ದಲ್ಲಿ ಮಾರುಕಟ್ಟೆ ಸಮಿತಿಯ ವತಿಯಿಂದ ಅದನ್ನು ಹರಾಜು ಅಥವಾ ಟೆಂಡರ್ ಮೂಲಕ ಮಾರಾಟ ಮಾಡಿ ಸಾಲ, ಬಡ್ಡಿ ಮತ್ತು ಇತರೆ ವೆಚ್ಚಗಳನ್ನು ಮುರಿದುಕೊಂಡು ಉಳಿದ ಹಣವನ್ನು ವಾಪಸ್ಸು ಮಾಡಲಾಗುವುದು.
- ಒಮ್ಮೆ ಪಡೆದ ಸಾಲವನ್ನು ಬಡ್ಡಿ ಸಮೇತ ಮರುಪಾವತಿ ಮಾಡದ ಹೊರತು 2ನೇ ಸಾಲ ಪಡೆಯಲು ಅರ್ಹತೆ ಇರುವುದಿಲ್ಲ.
- ಸಾಲ ಪಡೆಯಲು ಮಾರುಕಟ್ಟೆ ಸಮಿತಿಯಿಂದ ನಿಗದಿತ ನಮೂನೆಯನ್ನು ಮತ್ತು ಒಪ್ಪಂದ ಪತ್ರವನ್ನು ಪಡೆದು ಸಲ್ಲಿಸಬೇಕು.
- ಅಡಮಾನ ಸಾಲ ಪಡೆಯಲು ಉದ್ದೇಶಿಸಿರುವ ಕೃಷಿ ಉತ್ಪನ್ನಗಳು ಸಾಲ ಪಡೆಯುವ ರೈತನಿಗೆ ಸೇರಿದ್ದು ಎಂಬ ಬಗ್ಗೆ ಕೃಷಿ ಪಾಸ್ ಪುಸ್ತಕ ಮುಂತಾದ ದಾಖಲೆಗಳನ್ನು ಒದಗಿಸಬೇಕು.
- ರೈತರ ಉತ್ಪನ್ನಗಳನ್ನು ಅಡವಿಟ್ಟುಕೊಂಡ ಸಂಸ್ಥೆಗಳು, ಆ ಉತ್ಪನ್ನಗಳ ರಕ್ಷಣೆಯ ಪೂರ್ಣ ಹೊಣೆಗಾರಿಕೆಯನ್ನು ಹೊರುತ್ತವೆ.
- ಕೇಂದ್ರ ಅಥವಾ ರಾಜ್ಯ ಉಗ್ರಾಣ ನಿಗಮಗಳಲ್ಲಿ ಹಾಗೂ ತಾಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ ಗೋದಾಮುಗಳಲ್ಲಿ ಉತ್ಪನ್ನಗಳನ್ನು ದಾಸ್ತಾನು ಮಾಡಿದ ರಶೀದಿಯ ಆಧಾರದ ಮೇಲೆ ಸಹ ಮಾರುಕಟ್ಟೆ ಸಮಿತಿಗಳು ಮುಂಗಡ ಸಾಲ ನೀಡಲು ಅವಕಾಶ ಕಲ್ಪಿಸಲಾಗಿದೆ.
- ಮಾರುಕಟ್ಟೆ ಸಮಿತಿ ಮತ್ತು ಮುಂಗಡ ಸಾಲ ಪಡೆದ ರೈತರ ಮಧ್ಯೆ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ವ್ಯಾಜ್ಯ ಅಥವಾ ತಂಟೆ ತಕರಾರು ಉದ್ಭವಿಸಿದಲ್ಲಿ ಕೃಷಿ ಮಾರಾಟ ನಿರ್ದೇಶಕರು ಅಥವಾ ಅವರಿಂದ ಅಧಿಕಾರ ಪಡೆದ ಅಧಿಕಾರಿಯು ಇತ್ಯರ್ಥಪಡಿಸಲು ಅವಕಾಶವಿದೆ.

ಮುಂಗಡ ಸಾಲ ಪಡೆಯಲು ರೈತರು ಅನುಸರಿಸಬೇಕಾದ ಕ್ರಮಗಳು ತ್ವರಿತವಾಗಿ ಈ ಯೋಜನೆಯ ಪ್ರಯೋಜನ ಪಡೆಯಲು ರೈತರು ಈ ಕೆಳಗಿನ ವಿಷಯಗಳನ್ನು ಗಮನದಲ್ಲಿಟ್ಟು ಕೊಳ್ಳಬೇಕು.

* ಅಡಮಾನಕ್ಕಾಗಿ ತರುವ ಉತ್ಪನ್ನಗಳನ್ನು ಸ್ವಚ್ಛಗೊಳಿಸಿ, ಕಸಕಡ್ಡಿಗಳನ್ನು ಬೇರ್ಪಡಿಸಿ, ಒಣಗಿಸಿ, ಸಂಗ್ರಹಣಾ ಯೋಗ್ಯ ರೂಪದಲ್ಲಿ ತರಬೇಕು.
* ಸೂಕ್ತ ರೀತಿಯಲ್ಲಿ ಭರ್ತಿ ಮಾಡಲಾದ ನಿಗದಿತ ಅರ್ಜಿ ನಮೂನೆಯನ್ನು ಮಾರುಕಟ್ಟೆ ಸಮಿತಿಗಳಿಗೆ ಸಲ್ಲಿಸುವಾಗ ಛಾಪಾಕಾಗದದ ಮೇಲೆ ಒಪ್ಪಂದ ಪತ್ರ ನೀಡಬೇಕು.
* ಅಡಮಾನ ಇಡುವ ಮುನ್ನ ಉತ್ಪನ್ನದ ಗುಣ ಹಾಗೂ ಇದರ ಪ್ರಮಾಣಕ್ಕೆ ಸಂಬಂಧಿಸಿದಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯವರು ನೀಡುವ ದಾಖಲಾತಿಗಳನ್ನು ಸೂಕ್ತ ರೀತಿಯಲ್ಲಿ ಇಟ್ಟುಕೊಂಡು ಉತ್ಪನ್ನವನ್ನು ಬಿಡುಗಡೆ ಮಾಡಿಕೊಳ್ಳುವ ಸಂದರ್ಭದಲ್ಲಿ ಹಾಜರುಪಡಿಸಬೇಕು.
* ಸಾಲ ತೆಗೆದುಕೊಂಡ ಆರು ತಿಂಗಳೊಳಗಾಗಿ ಉತ್ಪನ್ನವನ್ನು ಬಿಡಿಸಿಕೊಳ್ಳಬೇಕು.
* ಸಂಬಂಧಿಸಿದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ನಿಗದಿಪಡಿಸಿದ ಎಲ್ಲ ನಿಯಮಗಳನ್ನು ಸಂಪೂರ್ಣವಾಗಿ ಪಾಲಿಸಬೇಕು.

ಆಗ್‌ಮಾರ್ಕ್‌ನೆಟ್ ವೆಬ್‌ಸೈಟ್‌ನಿಂದ ರೈತರು ಈ ಕೆಳಗಿನ ಅನುಕೂಲಗಳನ್ನು ಪಡೆಯಬಹುದು

1. ರಾಜ್ಯವಾರು ಅಗ್‌ಮಾರ್ಕ್‌ನೆಟ್ ಯೋಜನೆಯಡಿ ಗುರುತಿಸಲ್ಪಟ್ಟಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಹುಟ್ಟುವಳಿಗಳ ದೈನಂದಿನ ಆವಕ, ಕನಿಷ್ಠ, ಗರಿಷ್ಠ ಮತ್ತು ಮಾದರಿ ಧಾರಣೆಗಳನ್ನು ಪಡೆಯಬಹುದಾಗಿದೆ.
2. ಆಗ್‌ಮಾರ್ಕ್‌ನೆಟ್ ವೆಬ್‌ಸೈಟಿನ ಮೊದಲನೇ ಪುಟದಲ್ಲಿ ಯೋಜನೆಯಡಿ ಗುರುತಿಸಲ್ಪಟ್ಟಿರುವ ರಾಷ್ಟ್ರದ ವಿವಿಧ ರಾಜ್ಯದ ಮಾರುಕಟ್ಟೆ ಸಮಿತಿಗಳ ಕೃಷಿ ಹುಟ್ಟುವಳಿಗಳ ದೈನಂದಿನ ಆವಕ, ಸರಾಸರಿ ಕನಿಷ್ಠ ಬೆಂಬಲ ಬೆಲೆಗಳ ಮಾಹಿತಿಗಳನ್ನು ಪಡೆಯಬಹುದಾಗಿದೆ.
3. ಹಾಗೆಯೇ ವಿವಿಧ ರಾಜ್ಯಗಳ ಮಾರುಕಟ್ಟೆಗಳಿಗೆ ಸಮಿತಿವಾರು ಕೃಷಿ ಹುಟ್ಟುಗಳ ವರದಿಯನ್ನು ಪಡೆಯಲು ಅವಕಾಶವಿದೆ.
4. ಕೃಷಿ ಹುಟ್ಟುವಳಿಗಳ ಪ್ರಭೇದವಾರು ಆವಕ, ಕನಿಷ್ಠ, ಗರಿಷ್ಠ ಮತ್ತು ಮಾದರಿ ಧಾರಣೆ ವಿವರಗಳನ್ನು ಪಡೆಯಬಹುದು ಮತ್ತು ವಾರಾಂತ್ಯದ ವರದಿಯನ್ನು ಪಡೆಯಬಹುದು.
5. ಇದಲ್ಲದೆ ಇತರೆ ರಾಜ್ಯಗಳ ಕೃಷಿ ಮಾರುಕಟ್ಟೆಗಳಿಗೆ ಸಂಬಂಧಿಸಿದ ವೆಬ್‌ಸೈಟ್‌ಗಳನ್ನು ಸಹ ನೋಡಿ, ವರದಿಯನ್ನು ಮುದ್ರಿಸಲು ಅನುಕೂಲವಿದೆ.

6. ಈ ವೆಬ್‌ಸೈಟ್ ಮೂಲಕ ಕೃಷಿಕನು ತನ್ನ ಸಾಮಾನ್ಯ ಜ್ಞಾನವನ್ನು ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿಪಡಿಸಿಕೊಂಡು, ತಾನು ಬೆಳೆಯುವ ಕೃಷಿ ಹುಟ್ಟುವಳಿಗಳನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಸರಿಯಾದ ಬೆಲೆಗೆ ಮಾರಾಟ ಮಾಡಲು ಸಾಧ್ಯ.

7. ಸಾಮಾನ್ಯ ರೈತನು ಈ ವೆಬ್‌ಸೈಟ್ ಮೂಲಕ ಯಾವುದೇ ಒಂದು ಇಂಟರ್‌ನೆಟ್ ಕೆಫೆ/ ರೈತ ಸಂಪರ್ಕ ಕೇಂದ್ರದಲ್ಲಾಗಲಿ ಅಥವಾ ಇಂಟರ್‌ನೆಟ್ ಸೌಲಭ್ಯವಿರುವ ಜಾಗದಲ್ಲಿ ಮಾಹಿತಿಯನ್ನು ಪಡೆಯಬಹುದಾಗಿದೆ.

8. ಈ ವೆಬ್‌ಸೈಟ್ ನೋಡುವ ಮೂಲಕ ಕೃಷಿಕನು ತಾನು ಬೆಳೆದ ಹುಟ್ಟುವಳಿಗಳನ್ನು ತನ್ನ ಊರಿಗೆ ಹತ್ತಿರವಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಾಗಲಿ ಅಥವಾ ಇತರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಾಗಲಿ ಸರಿಯಾದ ಬೆಲೆಗೆ ಮಾರುವ ನಿರ್ಧಾರವನ್ನು ತೆಗೆದುಕೊಳ್ಳಲು ಅನುಕೂಲವಾಗುತ್ತದೆ.

9. ಸಾಮಾನ್ಯ ರೈತನಿಗೆ ಈ ವೆಬ್‌ಸೈಟ್ ನೋಡುವುದರ ಮೂಲಕ ತಾನು ಯಾವ ಬೆಳೆಯನ್ನು ಯಾವಾಗ ಬೆಳೆಯಬೇಕು, ಹೇಗೆ ಬೆಳೆಯಬೇಕು ಎಷ್ಟು ಬೆಳೆಯಬೇಕು ಮತ್ತು ಯಾವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಮಾರಾಟ ಮಾಡಬೇಕೆಂಬ ಅರಿವು ಮೂಡುತ್ತದೆ.

10. ವಿವರಗಳನ್ನು ತಿಳಿಯಲು ಈ ವಿಳಾಸವನ್ನು ಕೊಡಬೇಕಾಗುತ್ತದೆ. www.agmarknet.nic.in

ಹಾಗೆಯೇ "ಕೃಷಿ ಮಾರಾಟವಾಹಿನಿ" ವೆಬ್‌ಸೈಟ್‌ನಿಂದ ಸಾಮಾನ್ಯ ರೈತನು ಈ ಕೆಳಕಂಡ ಮಾಹಿತಿಗಳನ್ನು ಪಡೆಯಬಹುದಾಗಿದೆ ರಾಜ್ಯವಾರು ಕೃಷಿ ಮಾರಾಟವಾಹಿನಿ ಯೋಜನೆಯಡಿ ಗುರುತಿಸಲ್ಪಟ್ಟಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಕೃಷಿ ಹುಟ್ಟುವಳಿಗಳ ದೈನಂದಿನ ಆವಕ, ಕನಿಷ್ಠ, ಗರಿಷ್ಠ ಮತ್ತು ಮಾದರಿ ಧಾರಣೆಗಳನ್ನು ಪಡೆಯಬಹುದಾಗಿದೆ.

1. ಕೃಷಿ ಮಾರಾಟವಾಹಿನಿ ವೆಬ್‌ಸಟ್‌ನ ಮೊದಲನೇ ಪುಟದಲ್ಲಿ ಯೋಜನೆಯಡಿ ಗುರುತಿಸಲ್ಪಟ್ಟಿರುವ ರಾಜ್ಯದ ವಿವಿಧ ಮಾರುಕಟ್ಟೆ ಸಮಿತಿಗಳ ಕೃಷಿ ಹುಟ್ಟುವಳಿಗಳ ದೈನಂದಿನ ಆವಕ, ಸರಾಸರಿ ಕನಿಷ್ಠ, ಗರಿಷ್ಠ ಮತ್ತು ಮಾದರಿ ಧಾರಣೆಗಳ ಮಾಹಿತಿಯನ್ನು ಪಡೆಯಬಹುದಾಗಿದೆ.

2. ಹಾಗೆಯೇ ರಾಜ್ಯದ ಎಲ್ಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಕೃಷಿ ಹುಟ್ಟುವಳಿಗಳ ವರದಿಯನ್ನು ಪಡೆಯಲು ಅವಕಾಶವಿದೆ.

3. ಕೃಷಿ ಹುಟ್ಟುವಳಿಗಳ ಪ್ರಭೇದವಾರು ಆವಕ, ಕನಿಷ್ಠ, ಗರಿಷ್ಠ ಮತ್ತು ಮಾದರಿ ಧಾರಣೆ ವಿವರಗಳನ್ನು ಪಡೆಯಬಹುದು ಮತ್ತು ವಾರಾಂತ್ಯದ ವರದಿಯನ್ನು ಪಡೆಯಬಹುದು.

4. ಇದಲ್ಲದೆ ಇತರೆ ರಾಜ್ಯಗಳ ಕೃಷಿ ಮಾರುಕಟ್ಟೆಗಳಿಗೆ ಸಂಬಂಧಿಸಿದ ವೆಬ್‌ಸೈಟ್‌ಗಳನ್ನು ಸಹ ನೋಡಿ, ವರದಿಯನ್ನು ಮುದ್ರಿಸಲು ಅನುಕೂಲವಿದೆ ಮತ್ತು ಆಗ್‌ಮಾರ್ಕ್‌ನೆಟ್ ಹಾಗೂ ರೈತ ಮಿತ್ರ ವೆಬ್‌ಸೈಟ್‌ಗಳನ್ನು ಸಹ ವೀಕ್ಷಿಸಬಹುದು. ಈ ವೆಬ್‌ಸೈಟ್‌ಗಳ ವಿಳಾಸ www.agmarknet.nic.in ಮತ್ತು http://raitamitra.kar.nic.in
5. ಈ ವೆಬ್‌ಸೈಟ್ ವೀಕ್ಷಿಸಲು ಇಂಟರ್‌ನೆಟ್ ಇರುವ ಜಾಗದಲ್ಲಿ ಈ ಕೆಳಗಿನ ವಿಳಾಸವನ್ನು ಕೊಡಬೇಕಾಗುತ್ತದೆ. http://maratavahini.kar.nic.in

## ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆ

ಈ ಉದ್ದೇಶವು ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯು ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ 1966ರ ಕಲಂ 100 ರ ಅಡಿಯಲ್ಲಿ ಸ್ಥಾಪಿತವಾಗಿದೆ. ಸದರಿ ಶಾಸನದ ಪ್ರಕರಣ 112 (ಜೆ) ಪ್ರಕಾರ ರೈತರಿಗೆ ವಿಮೆಯನ್ನು ಒದಗಿಸುವುದು ಕೃಷಿ ಮಾರಾಟ ಮಂಡಳಿಯ ಮುಖ್ಯ ಕರ್ತವ್ಯಗಳಲ್ಲೊಂದಾಗಿರುತ್ತದೆ. ಕರ್ನಾಟಕ ರಾಜ್ಯದಾದ್ಯಂತ ಸ್ಥಾಪಿತವಾಗಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಕ್ಷೇತ್ರಗಳಲ್ಲಿ ವಾಸವಾಗಿರುವ ರೈತರು ಕೃಷಿ ಜಮೀನಿನಲ್ಲಿ, ಕೃಷಿ ಚಟುವಟಿಕೆಗಳಲ್ಲಿ ಹಾಗೂ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮುಖ್ಯ ಮಾರುಕಟ್ಟೆ ಪ್ರಾಂಗಣ, ಉಪಮಾರುಕಟ್ಟೆ ಪ್ರಾಂಗಣ ಹಾಗೂ ಮಾರುಕಟ್ಟೆ ಉಪ ಪ್ರಾಂಗಣಗಳಲ್ಲಿ ಕೃಷಿ ಉತ್ಪನ್ನ ಮಾರಾಟ ಚಟುವಟಿಕೆಗಳಲ್ಲಿ ತೊಡಗಿರುವಾಗ ಅಪಘಾತ ಸಂಭವಿಸಿ ಸಾವು ಅಥವಾ ಅಂಗವಿಲಕತೆ ಉಂಟಾದಲ್ಲಿ ಅಂತವರ ಕುಟುಂಬಕ್ಕೆ ಆರ್ಥಿಕ ಸಹಾಯ ನೀಡುವುದರ ಮೂಲಕ ಸಾಮಾಜಿಕ ಭದ್ರತೆ ಒದಗಿಸುವುದು ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಉದ್ದೇಶವಾಗಿರುತ್ತದೆ.

ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ವ್ಯಾಪ್ತಿಯು ಈ ಕೆಳಗಿನ ಸಂದರ್ಭಗಳಲ್ಲಿ ಸಾವು ಅಥವಾ ಅಂಗವಿಕಲತೆ ಉಂಟಾದಲ್ಲಿ ರಾಜ್ಯದಲ್ಲಿನ 15ರಿಂದ 80 ವರ್ಷದವರಿಗೆ ವಯೋಮಿತಿಯಲ್ಲಿರುವ ರೈತರು ಮತ್ತು ಸಹಕುಟುಂಬದ ಸದಸ್ಯರು ಈ ಯೋಜನೆಯ ವ್ಯಾಪ್ತಿಗೆ ಒಳಪಡುತ್ತಾರೆ.

1. ಕೃಷಿ ಜಮೀನಿನಲ್ಲಿ ಉಳುಮೆ ಮಾಡುವಾಗ, ಬಿತ್ತನೆ ಮಾಡುವಾಗ, ಕಳೆ ತೆಗೆಯುವಾಗ, ಬೆಳೆಗಳಿಗೆ ಗೊಬ್ಬರ, ಔಷಧಿ ಹಾಕುವಾಗ, ಕಟಾವು ಮಾಡುವಾಗ, ಬಣವೆ ಹಾಕುವಾಗ, ಕಣದಲ್ಲಿ ಉತ್ಪನ್ನಗಳನ್ನು ಒಕ್ಕಣೆ ಮಾಡುವಾಗ, ಗಾಡಿಗೆ, ಲಾರಿಗೆ, ಟ್ರ್ಯಾಕ್ಟರ್ ಇತ್ಯಾದಿ ವಾಹನಗಳಿಗೆ ಉತ್ಪನ್ನಗಳನ್ನು ಹೇರುವಾಗ.

2. ಕೃಷಿ ಕಾರ್ಯದಲ್ಲಿ ನಿರತರಾಗಿದ್ದಾಗ ಭೂಸಾರವನ್ನು ಕಾಪಾಡಿಕೊಳ್ಳಲು ಕೆರೆಗೊಬ್ಬರ, ಕೊಟ್ಟಿಗೆ, ಹಸಿರು ಎಲೆ ಗೊಬ್ಬರ, ಮಣ್ಣು-ಮರಳು, ಕಾಡುಸೊಪ್ಪುಗಳು ಅಲ್ಲದೇ ಉಳುಮೆಗೆ ಬೇಕಾಗುವ ಸಲಕರಣೆಗಳನ್ನು ಮತ್ತು ಬೀಜ ರಸಗೊಬ್ಬರ ಇತ್ಯಾದಿಗಳನ್ನು ಮನೆಯಿಂದ ಹೊಲಕ್ಕೆ ಅಥವಾ ಹೊಲದಿಂದ ಮನೆಗೆ ಸಾಮಾಗ್ರಿಗಳನ್ನು ಸಾಗಿಸುವಾಗ ಯಾವುದೇ ರೀತಿ ಅಪಘಾತ ಸಂಭವಿಸಿದ್ದಲ್ಲಿ, ದಾರಿಯಲ್ಲಾಗಲಿ ಜಲ ಮಾರ್ಗದಲ್ಲಾಗಲಿ ಆದಂತಹ ಅಪಘಾತಗಳು.

3. ಮುಖ್ಯ ಮಾರುಕಟ್ಟೆ ಪ್ರಾಂಗಣ, ಉಪ ಮಾರುಕಟ್ಟೆ ಪ್ರಾಂಗಣ ಹಾಗೂ ಮಾರುಕಟ್ಟೆ ಉಪ ಪ್ರಾಂಗಣಗಳಲ್ಲಿ ಕೃಷಿ ಉತ್ಪನ್ನಗಳ ಮಾರಾಟ ಚಟುವಟಿಕೆಗಳಲ್ಲಿ ತೊಡಗಿದ್ದಾಗ.

4. ಕೃಷಿ ಉತ್ಪನ್ನಗಳನ್ನು ಮಾರಾಟಕ್ಕಾಗಿ ಮಾರುಕಟ್ಟೆಗಳಿಗೆ ಅಥವಾ ಸಂತೆಗಳಿಗೆ ಸಾಗಿಸುವಾಗ ಮತ್ತು ಮಾರುಕಟ್ಟೆಗಳಿಂದ ಅಥವಾ ಸಂತೆಗಳಿಂದ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಿ ಹಿಂತಿರುಗುವಾಗ ಸಂಭವಿಸಿದ ಅಪಘಾತಗಳು.

5. ಕೃಷಿಗಾಗಿ ಬಾವಿ, ಕೊಳವೆಬಾವಿ ತೋಡುವಾಗ ಅಥವಾ ಸಂಬಂಧಿಸಿದಂತೆ ವಿದ್ಯುತ್ ಅಥವಾ ಇತರೆ ಸಲಹಕರಣೆಗಳನ್ನು ಜೋಡಣೆ ಮಾಡುವಾಗ.

6. ಕೃಷಿ ಜಮೀನಿನಲ್ಲಿ ಕಾರ್ಯಪ್ರವೃತ್ತರಾಗಿದ್ದಾಗ ಹಾವು ಇತರೆ ವಿಷ ಜಂತು ಹಾಗೂ ಇತರೆ ಪ್ರಾಣಿಗಳಿಂದ ಕಡಿತ, ತುಳಿತ, ವದೆತೆ, ಹಾಗೂ ಆಕ್ರಮಣದಿಂದ.

7. ಜಾನುವಾರುಗಳನ್ನು ಕಾಯುವಾಗ ಅಥವಾ ಅವುಗಳನ್ನು ಮಾರುಕಟ್ಟೆಗಳಿಗೆ ಮಾರಾಟ ಮಾಡುವಾಗ.

8. ಜಾನುವಾರುಗಳನ್ನು ಮಾರಾಟಕ್ಕಾಗಿ ಮಾರುಕಟ್ಟೆಗೆ ಅಥವಾ ಸಂತೆಗಳಿಗೆ ಸಾಗಿಸುವಾಗ ಹಾಗೂ ಜಾನುವಾರುಗಳನ್ನು ಮಾರಾಟ ಮಾಡಿ ಅಥವಾ ಖರೀದಿಸಿ ವಾಪಸ್ಸು ಮನೆಗೆ ಹಿಂತಿರುಗುವಾಗ ಆದಂತಹ ಅಪಘಾತಗಳು ಮತ್ತು ಜಾನುವಾರುಗಳಿಗೆ ಆಹಾರ ಮತ್ತು ನೀರು ಪೂರೈಸುವಾಗ ಅಲ್ಲದೇ ಮೈ ತೊಳೆಯುವಾಗ ಆದಂತಹ ಘಟನೆಗಳು.

9. ಕೃಷಿ ಚಟುವಟಿಕೆಗಳಲ್ಲಿ ತೊಡಗಿದ್ದಾಗ ಅಥವಾ ಮಣ್ಣು ಫಲವತ್ತತೆಗೆ ವಿವಿಧ ಸಾಮಗ್ರಿಗಳನ್ನು ಕಲೆ ಹಾಕುವಾಗ ಅಥವಾ ಸಾಗಿಸುವಾಗ ಮರಗಳಿಂದ ಬಿದ್ದು ಸಂಭವಿಸಿದ ಅಪಘಾತಗಳು.

**ಕೋಷ್ಟಕ–21**

**ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯಲ್ಲಿ ನೀಡಲಾದ ಗರಿಷ್ಠ ವಿಮಾ ಮೊತ್ತದ ವಿವರಗಳು**

| ಕ್ರ ಸಂ. | ಅಪಘಾತ ವಿಮಾ ಯೋಜನೆಯ ವಿವರ | ಗರಿಷ್ಠ ವಿಮಾ ಮೊತ್ತ ರೂ.ಗಳಲ್ಲಿ |
|---|---|---|
| 1 | ಸಾವು ಉಂಟಾದಾಗ 01-03-2007ರಿಂದ ಅನ್ವಯ | 50,000=00 |
| 2 | 2 ಕೈಗಳು ಅಥವಾ 2 ಕಾಲುಗಳನ್ನು ಕಳೆದುಕೊಂಡಾಗ | 15,000=00 |
| 3 | 2 ಕಣ್ಣುಗಳನ್ನು ಕಳೆದುಕೊಂಡಾಗ | 12,000=00 |
| 4 | 1 ಕೈ ಅಥವಾ 1 ಕಾಲು ಕಳೆದುಕೊಂಡಾಗ | 7,500=00 |
| 5 | 1 ಕಣ್ಣು ಕಳೆದುಕೊಂಡಾಗ | 6,000=00 |
| 6 | ಕಾಲು ಅಥವಾ ಕೈ ಬೆರಳುಗಳನ್ನು ಕಳೆದುಕೊಂಡಾಗ ಪ್ರತಿ ಬೆರಳಿಗೆ | 1,500=00 |
| 7 | ಸೊಂಟ ಮುರಿದಾಗ | 15,000=00 |

**ಮಾಹಿತಿಯ ಮೂಲ:** ಕೃಷಿ ಉತ್ಪನ್ನ ಮಾರುಕಟ್ಟೆ, ಬಳ್ಳಾರಿ, 2012–13

ಮೇಲಿನ ಕೋಷ್ಟಕ–21ರಲ್ಲಿ, ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯಡಿಯಲ್ಲಿ, ರೈತರು ಅಪಘಾತಕ್ಕೊಳಗಾದಾಗ, ದೊರೆಯುವ ಗರಿಷ್ಠ ಧನಸಹಾಯದ ಕುರಿತು ವಿವರಿಸಲಾಗಿದೆ. ರೈತರಿಗೆ ಸಾವು ಉಂಟಾದಾಗ 01–03–2007ರಿಂದ ಅನ್ವಯವಾಗುವಂತೆ ರೂ.50000/–ಗಳನ್ನು ಮೃತ ಕುಟುಂಬಕ್ಕೆ ಇಲಾಖೆಯು ನೀಡುತ್ತದೆ, ರೈತರು 2 ಕೈಗಳು ಅಥವಾ 2 ಕಾಲುಗಳನ್ನು ಕಳೆದುಕೊಂಡಾಗ, ಗರಿಷ್ಠ ರೂ. 15,000=00ಗಳನ್ನು, ರೈತರು 2 ಕಣ್ಣುಗಳನ್ನು ಕಳೆದುಕೊಂಡಾಗ ರೂ. 12,000=00ಗಳನ್ನು, ರೈತರು 1 ಕೈ ಅಥವಾ 1 ಕಾಲು ಕಳೆದು ಕೊಂಡಾಗ ರೂ. 7,500=00ಗಳನ್ನು, ರೈತರು 1 ಕಣ್ಣು ಕಳೆದುಕೊಂಡಾಗ ರೂ. 6,000=00 ಗಳನ್ನು, ರೈತರಿಗೆ ಕಾಲು ಅಥವಾ ಕೈ ಬೆರಳುಗಳನ್ನು ಕಳೆದುಕೊಂಡಾಗ ಪ್ರತಿ ಬೆರಳಿಗೆ ರೂ. 1500–00ಗಳಂತೆ ಹಾಗೂ ರೈತರಿಗೆ ಸೊಂಟ ಮುರಿದಾಗ ರೂ.15000–00ಗಳಂತೆ ಇಲಾಖೆಯು ವಿಮೆಯ ರೂಪದಲ್ಲಿ ರೈತರಿಗೆ ನೀಡುತ್ತದೆ, ಈ ಗರಿಷ್ಠ ಮೊತ್ತವೂ ವೈದ್ಯಾಧಿಕಾರಿಗಳು ಮತ್ತು ಸಮಿತಿಯ ಸದಸ್ಯರ ಆಧಾರದ ಮೇಲೆ ನಿಗದಿಯಾಗುತ್ತದೆ.

ರೈತರು ಅರ್ಜಿ ಸಲ್ಲಿಸುವ ವಿಧಾನವು ಅಂಗವಿಕಲತೆ ಉಂಟಾದ ಸಂದರ್ಭದಲ್ಲಿ ಅಂಗವಿಕಲತೆ ಉಂಟಾದ ವ್ಯಕ್ತಿ ಸಾವು ಉಂಟಾದ ಸಂದರ್ಭದಲ್ಲಿ ಆ ವ್ಯಕ್ತಿ ಕುಟುಂಬದ

ವಾರಸುದಾರರು ಅರ್ಜಿ ಸಲ್ಲಿಸಲು ಅರ್ಹತೆ ಇರುತ್ತದೆ. ಅಪಘಾತ ಸಂಭವಿಸಿದ 60 ದಿನಗಳ ಒಳಗಾಗಿ ಸೂಕ್ತ ದಾಖಲೆಗಳೊಂದಿಗೆ ಸಾವು ಅಥವಾ ಅಂಗವಿಕಲತೆ ಉಂಟಾದ ವ್ಯಕ್ತಿಯು ವಾಸವಾಗಿರುವ ಕ್ಷೇತ್ರದಲ್ಲಿ ಬರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಅರ್ಜಿದಾರರ ಭಾವ ಚಿತ್ರದೊಂದಿಗೆ ಅರ್ಜಿ ಸಲ್ಲಿಸಬೇಕು.

ಅನುಷ್ಠಾನ–ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಈ ಯೋಜನೆಯ ಪರಿಶೀಲನಾ ಸಮಿತಿಯಿದ್ದು ಸಮಿತಿಯ ಅಧ್ಯಕ್ಷರು ಹಾಗೂ ಸ್ಥಳೀಯ ಸರ್ಕಾರಿ ವೈದ್ಯಾಧಿಕಾರಿಯು ಮತ್ತು ಸಮಿತಿಯ ಕಾರ್ಯದರ್ಶಿಯವರು ಈ ಪರಿಶೀಲನಾ ಸಮಿತಿಯ ಸದಸ್ಯರುಗಳಾಗಿದ್ದಾರೆ. ಸಮಿತಿಯ ಅಧ್ಯಕ್ಷರು ಈ ಪರಿಶೀಲನಾ ಸಮಿತಿಯ ಅಧ್ಯಕ್ಷರು ಹಾಗೂ ಸಮಿತಿಯ ಕಾರ್ಯದರ್ಶಿಯವರು ಈ ಪರಿಶೀಲನಾ ಸಮಿತಿ ಸದಸ್ಯ ಕಾರ್ಯದರ್ಶಿಯವರಾಗಿರುತ್ತಾರೆ. ಪ್ರತಿ ತಿಂಗಳು 15ನೇ ತಾರೀಕಿನೊಳಗಾಗಿ ಪರಿಶೀಲನಾ ಸಮಿತಿಯು ಸಭೆ ಸೇರಿ ಮಾರುಕಟ್ಟೆ ಸಮಿತಿಗೆ ಬಂದಿರುವ ಅರ್ಜಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಯೋಜನೆಯ ವ್ಯಾಪ್ತಿಗೆ ಒಳಪಡುವುದನ್ನು ಖಾತ್ರಿ ಪಡಿಸಿಕೊಂಡು ವಿಮಾ ಮೊತ್ತವನ್ನು ಮಂಜೂರು ಮಾಡುವ ಸೂಕ್ತ ಪ್ರಸ್ತಾವನೆಯನ್ನು ಕೃಷಿ ಮಾರಾಟ ಮಂಡಳಿಯ ವಿಭಾಗೀಯ ಪ್ರಧಾನ ವ್ಯವಸ್ಥಾಪಕರ ಕಾರ್ಯಾಲಯಕ್ಕೆ ಕಳುಹಿಸಬೇಕು. ವಿಭಾಗಿಯ ಕಾರ್ಯಾಲಯಗಳು ಪ್ರಸ್ತಾವನೆ ಸ್ವೀಕರಿಸಿದ 30 ದಿನಗಳೊಳಗಾಗಿ ನಿರ್ಧಾರವನ್ನು ಕೈಗೊಂಡು ಪ್ರಸ್ತಾವನೆಗಳನ್ನು ಮಂಜೂರು ಮಾಡಬೇಕು. ಅದರಂತೆ ಮಂಜೂರು ಮಾಡಿ ಮಂಜೂರಾತಿ ಪತ್ರದೊಂದಿಗೆ ಅರ್ಜಿದಾರರ ಹೆಸರಿನಲ್ಲಿ ಬರೆದ ಚೆಕ್ಕನ್ನು ಸಂಬಂಧಪಟ್ಟ ಮಾರುಕಟ್ಟೆಗೆ ಸಲ್ಲಿಸುವುದು ಹಾಗೂ ಪತ್ರದ ಪ್ರತಿಯನ್ನು ಅರ್ಜಿದಾರರ ವಿಳಾಸಕ್ಕೆ ಕಳುಹಿಸುವುದು. ರೈತ ಸಂಜೀವಿನಿ ವಿಮಾ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಉಂಟಾದ ವಿವಾದಗಳಿಗೆ ಮಂಡಳಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

ಮುಂದಿನ ಭಾಗದಲ್ಲಿ ರೈತರಿಗೆ ದೊರೆಯುವ ಬ್ಯಾಂಕ್ ಸಾಲಗಳ ಕುರಿತಾಗಿದೆ. ಅವುಗಳ ವಿವರ ಈ ಕೆಳಗಿನಂತಿದೆ: ರೈತರಿಗೆ ದೊರೆಯುವ ಬ್ಯಾಂಕುಗಳ ಸಾಲಸೌಲಭ್ಯಗಳು ದೇಶದ ಆರ್ಥಿಕ ರಂಗದ ಎಲ್ಲ ಕ್ಷೇತ್ರಗಳಿಗೂ ಬ್ಯಾಂಕುಗಳು ಸಾಲ ನೀಡುತ್ತೇವೆ. ಅದರಲ್ಲೂ ಬ್ಯಾಂಕುಗಳು ಕೃಷಿ, ನೀರಾವರಿ, ತೋಟಗಾರಿಕೆ, ಕೃಷಿಗೆ ಸಂಬಂಧಿಸಿದ ಉಪಕಸಬುಗಳಿಗೂ ಸಾಲ ನೀಡುತ್ತವೆ. ಸಾಲ ಮತ್ತು ಬಡ್ಡಿಯನ್ನು ನಿಗದಿತ ಕಂತುಗಳ ಮೂಲಕ ಸರಿಯಾದ ಸಮಯದಲ್ಲಿ ಹಿಂತಿರುಗಿಸುವ ಸಾಲಗಾರನ ಕ್ಷಮತೆಯನ್ನು ಆಧರಿಸಿ ಬ್ಯಾಂಕುಗಳು ಸಾಲ ನೀಡುತ್ತವೆ. ಕೃಷಿಕ್ಷೇತ್ರಕ್ಕೆ ಲಭ್ಯವಿರುವ ಸಾಲಸೌಲಭ್ಯಗಳು ಈ ಕೆಳಗಿನಂತಿವೆ.

ವ್ಯಕ್ತಿಗಳು, ಸ್ವಸಹಾಯ ಗುಂಪುಗಳು ಮತ್ತು ಜಂಟಿ/ಸಂಯುಕ್ತ ಜವಾಬ್ದಾರಿ ಗುಂಪುಗಳಿಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳು ಲಭ್ಯವಿವೆ. ಕೃಷಿ ಮತ್ತು ಕೃಷಿ ಸಂಬಂಧಿ ಚಟುವಟಿಕೆಗಳಾದ ಹೈನುಗಾರಿಕೆ, ಮೀನುಗಾರಿಕೆ, ಹಂದಿ ಸಾಕಣೆ, ಕೋಳಿ ಸಾಕಣೆ, ಜೇನು ಸಾಕಣೆ ಇತ್ಯಾದಿಗಳಿಗೆ ಬ್ಯಾಂಕುಗಳು ಸಾಲ ನೀಡುತ್ತವೆ. ಕೃಷಿ ಆಧಾರಿತ ಸಂಸ್ಕರಣ ಘಟಕಗಳ ಸ್ಥಾಪನೆಗೂ ಹಾಗೂ ಅವುಗಳ ನಿರ್ವಹಣೆಗೂ ಸಾಲವನ್ನು ಪಡೆಯಬಹುದು. ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳು ಹಾಗೂ ರೈತ ಸೇವಾ ಸಂಘಗಳಂತಹ ಸರ್ಕಾರಿ ಸಂಸ್ಥೆಗಳಿಂದ ರೈತರು ಗೊಬ್ಬರ ಮತ್ತು ಕೀಟನಾಶಕಗಳ ಖರೀದಿ ಮತ್ತು ನಿರ್ವಹಣೆಗಾಗಿ ಸಾಲವನ್ನು ಪಡೆದುಕೊಳ್ಳಬಹುದು. ಈಗ ಬಾಡಿಗೆ ಕೃಷಿಕರು, ಬೆಳೆ ಪಾಲುದಾರರು, ಭೋಗ್ಯ ಕೃಷಿಕರು ಹಾಗೂ ಇತರ ಕೃಷಿಕರು ಸುಲಭ ನಿಯಮದಲ್ಲಿ ಕೃಷಿ ಸಾಲ ಪಡೆಯಬಹುದು.

1. ರೂ. 1 ಲಕ್ಷದವರೆಗಿನ ಕೃಷಿ ಸಾಲವನ್ನು ಸಾಲಗಾರನ ವಂತಿಗೆ(ಮಾರ್ಜಿನ್ ಮನಿ) ಭದ್ರತೆ ಇಲ್ಲದೆ ಬ್ಯಾಂಕುಗಳು ನೀಡುತ್ತವೆ.
2. ರೂ. 50000/–ದವರೆಗಿನ ಸಾಲಗಳಿಗೆ ಬೇರೆ ಬ್ಯಾಂಕುಗಳಿಂದ ಬಾಕಿ ಪತ್ರ ತರಬೇಕಾಗಿಲ್ಲ ಸಾಲಗಾರನ ದೃಢೀಕರಣವೇ ಸಾಕು.
3. ರೂ. 3ಲಕ್ಷದವರೆಗಿನ ಬೆಳೆ ಸಾಲಗಳಿಗೆ ಶೇ.7ರ ಬಡ್ಡಿ ಅನ್ವಯವಾಗುತ್ತದೆ. ಕರಾರುವಕ್ಕಾಗಿ ಸಾಲ ಮರುಪಾವತಿ ಮಾಡುವವರಿಗೆ ಭಾರತ ಸರಕಾರದಿಂದ ಶೇ. 3ರ ಬಡ್ಡಿ ರಿಯಾಯಿತಿ ಇದೆ. ರೂ.50000/–ದವರೆಗಿನ ಅಲ್ಪಾವಧಿ ಸಾಲಗಳನ್ನು ಕರಾರುವಕ್ಕಾಗಿ ಮರುಪಾವತಿ ಮಾಡಿದಲ್ಲಿ ಕರ್ನಾಟಕ ಸರಕಾರದಿಂದಲೂ ಶೇ.1 ಬಡ್ಡಿ ರಿಯಾಯಿತಿ ಇದೆ.

**ಕ್ರೆಡಿಟ್ ಕಾರ್ಡುಗಳು:** ಕೃಷಿ ಹಾಗೂ ಸಣ್ಣ ವ್ಯಾಪಾರ ಕ್ಷೇತ್ರಗಳಲ್ಲಿ ಸಾಲಗಳನ್ನು ಪಡೆದುಕೊಂಡ ಜನರಿಗೆ ಸಾಲಗಳನ್ನು ಬಳಸಿಕೊಳ್ಳಲು ಸುಲಭವಾಗುವಂತೆ ಹಾಗೂ ವೃತ್ತಿ ವ್ಯವಹಾರಕ್ಕೆ ಪೂರಕವಾಗಿ ಕ್ರೆಡಿಟ್ ಕಾರ್ಡ್ ಸೌಲಭ್ಯವನ್ನು ಬ್ಯಾಂಕುಗಳು ನೀಡುತ್ತವೆ. ಬಡ್ಡಿ ದರಗಳು ಬ್ಯಾಂಕುಗಳು ನಿಯಮಗಳಿಗೊಳಪಟ್ಟಿರುತ್ತವೆ.

**ಕಿಸಾನ್ ಕ್ರೆಡಿಟ್ ಕಾರ್ಡ್:** ಇದು ಕೃಷಿಕರಿಗೆ ನೀಡುವ ಕಾರ್ಡ್ ಆಗಿದ್ದು, ಕೃಷಿಕರ ವರ್ಷದುದ್ದದ ಹಣಕಾಸಿನ ಒಟ್ಟು ಅಗತ್ಯವನ್ನು ಪರಿಗಣಿಸಿ, ಸಣ್ಣ ಅವಧಿ ಮತ್ತು ಮಧ್ಯಮ ಅವಧಿ ಅವಶ್ಯಕತೆಗಳನ್ನು ಪೂರೈಸಲು ಕಿಸಾನ್ ಕಾರ್ಡ್ ಸಾಲದ ಮಿತಿಯನ್ನು ಕೃಷಿಕರಿಗೆ ನೀಡಲಾಗುತ್ತದೆ. ಬೀಜ ಗೊಬ್ಬರ, ಔಷಧಗಳು ಮತ್ತಿತರ ಕೃಷಿ ಸಲಕರಣೆಗಳನ್ನು ಖರೀದಿಸಲು ರೈತರು ಪ್ರತ್ಯೇಕವಾಗಿ ಬರುವ ಪರಿಶ್ರಮವಿಲ್ಲ. ಈ ಓವರ್ ಡ್ರಾಫ್ಟ್ ಸೌಲಭ್ಯವನ್ನು ಮೂರು ವರ್ಷಗಳ ಅವಧಿಗೆ

ನೀಡಲಾಗುತ್ತಿದ್ದು, ಬೆಲೆಗಳಲ್ಲಿ ಆಗುವ ಹೆಚ್ಚಳ ಇತ್ಯಾದಿಗಳನ್ನು ಪರಿಗಣಿಸಿ ಮಿತಿಯನ್ನು ವರ್ಷದಿಂದ ವರ್ಷಕ್ಕೆ ಮರು ಪರಿಶೀಲಿಸುವ ಅವಕಾಶವಿದೆ. ವರ್ಷದ ಖಾರಿಫ್, ಸುಗ್ಗಿ ಇತ್ಯಾದಿ ಅಥವ ಮಧ್ಯಮಾವಧಿ ಬೆಳೆಗಳಿಗೆ ಪ್ರತ್ಯೇಕವಾಗಿ ಸಾಲ ಪಡೆಯುವ ಪರಿಶ್ರಮವಿಲ್ಲ. ತಮಗೆ ನೀಡಿದ ಕಾರ್ಡ್ ಬಳಿಸಿ ಉತ್ತಮ ತಳಿಯ ಬೀಜ, ಗೊಬ್ಬರ ಲಭ್ಯವಿದ್ದಾಗ ಪಡೆದುಕೊಳ್ಳಬಹುದು. ನೇರ ಪಾವತಿ ಮಾಡುವ ಸೌಲಭ್ಯದಿಂದ ಸಿಗುವ ಡಿಸ್ಕೌಂಟ್‌ನ ಲಾಭವನ್ನು ಪಡೆದುಕೊಳ್ಳಬಹುದು. ಬ್ಯಾಂಕುಗಳು ಇತ್ತೀಚಿನ ದಿನಗಳಲ್ಲಿ ಬೆಳೆ ಸಾಲದ ಜೊತೆಗೆ, ಭೂ ಅಭಿವೃದ್ಧಿ, ಕೃಷಿ ಉಪಕಸುಬುಬ ಇತ್ಯಾದಿಗಳ ಬಂಡವಾಳ ವಿನಿಯೋಗಕ್ಕೂ ಕಿಸಾನ್ ಕ್ರೆಡಿಟ್ ಕಾರ್ಡಿನಲ್ಲಿ ಅವಕಾಶ ನೀಡಲಾಗುತ್ತದೆ. ಹೆಚ್ಚಿನ ಮಾಹಿತಿಯನ್ನು ಸಮೀಪದ ಬ್ಯಾಂಕ್‌ಗಳ ಶಾಖೆಗಳಲ್ಲಿ ರೈತರು ಪಡೆಯಬಹುದಾಗಿದೆ.

ಕಿಸಾನ್ ಕ್ರೆಡಿಟ್ ಕಾರ್ಡ್ ಅವಧಿ ಐದು ವರ್ಷವಾಗಿದ್ದು, ಬೇಸಾಯದಿಂದ ಬರುವ ಒಟ್ಟು ಆದಾಯದ ಮೇಲೆ ಗರಿಷ್ಠ ಸಾಲದ ಮಿತಿ ಹೊಂದಿಕೊಂಡಿರುತ್ತದೆ. ಮಂಜೂರಾತಿ ಮಿತಿಯೊಳಗೆ ನಗದು ಹಿಂಪಡೆತದ ಸಂಖ್ಯೆಗೆ ಮಿತಿ ಇರುವುದಿಲ್ಲ. ಬೆಳೆ ಕೊಯ್ಲಿನ ನಂತರ ಮರುಪಾವತಿ ಆರಂಭ. ಮಧ್ಯಾಮವಧಿಯಲ್ಲಿ ರೈತರ ಕೈಯಲ್ಲಿ ಹಣ ಇದ್ದಾಗ ಖಾತೆಗೆ ಜಮೆ ಮಾಡಿದರೆ ಬಡ್ಡಿ ವಿನಾಯಿತಿಯನ್ನು ಪಡೆಯಬಹುದಾಗಿದೆ. ಕಿಸಾನ್ ಕ್ರೆಡಿಟ್ ಕಾರ್ಡಿನ ಮೇಲಿನ ಬಡ್ಡಿ ಕೃಷಿ ಸಾಲದ ಮೇಲಿನ ಬಡ್ಡಿಗೆ ಸಮವಾಗಿರುತ್ತದೆ. ಭದ್ರತೆ ಹಾಗೂ ಸಾಲ ಪತ್ರದ ತಯಾರಿ ವಿಧಾನಗಳು ಕೃಷಿ ಸಾಲಕ್ಕೆ ಸಮನಾಗಿರುತ್ತದೆ. ದೇಶದೊಳಗಿನ ಎಲ್ಲ ಕಿಸಾನ್ ಕ್ರೆಡಿಟ್ ಕಾರ್ಡ್ ಹೋಲ್ಡರ್‌ಗಳಿಗೆ ಅನ್ವಯವಾಗುವ ವೈಯಕ್ತಿಕ ಅಪಘಾತ ಜೀವವಿಮಾ ಸೌಲಭ್ಯವಿದ್ದು ಕಾರ್ಡುದಾರರು ಮೃತರಾದಲ್ಲಿ ಅಥವಾ ಶಾಶ್ವತ ವೈಫಲ್ಯ ಉಂಟಾದಲ್ಲಿ ರೂ.50,000 ದವರೆಗೆ ಪರಿಹಾರ ಸಿಗುತ್ತದೆ. ಪ್ರತಿ ವರ್ಷದ ವಂತಿಗೆ(ಪ್ರೀಮಿಯಂ) ರೂ.15/–ರಲ್ಲಿ ರೂ.10ನ್ನು ಬ್ಯಾಂಕು, ರೂ.5/–ನ್ನು ಕಾರ್ಡ್‌ದಾರ ಪಾವತಿಸಬೇಕು.

**ಸಾಲ ನೀಡಿಕೆ ಮತ್ತು ವಿತರಣೆ**

ಒಂದು ವರ್ಷದ ಅವಧಿಗೆ ಮಂಜೂರಾದ ಕಾರ್ಡ್‌ನ ಅಲ್ಪಾವಧಿ ಸಾಲದ ಭಾಗವು ನಗದು ಮುಂಗಡದ ರೂಪದಲ್ಲಿದ್ದು, ತನಗೆ ಅಗತ್ಯ ಬೀಳುವ ಸಂದರ್ಭದಲ್ಲಿ ಕಾರ್ಡ್‌ದಾರನು ಬೇಕಾದಷ್ಟು ತನ್ನ ಖಾತೆಯಿಂದ ಪಡೆಯಬಹುದು. ತೆಗೆಯಬಹುದಾದ ಕಂತುಗಳ ಲೆಕ್ಕಕ್ಕೆ ಮಿತಿ ಇರುವುದಿಲ್ಲ. ಆದರೆ ಖಾತೆಯಿಂದ ಪಡೆದ ಪ್ರತಿ ಕಂತಿನ ಮೊತ್ತ ಒಂದು ವರ್ಷ ಅವಧಿಯ ಒಳಗಾಗಿ ಮರುಪಾವತಿಸಬೇಕು. ಮಂಜೂರಾದಷ್ಟು ಮೊತ್ತದ ಸಾಲವನ್ನು ಈ ಕೆಳಗಿನ ಯಾವುದೇ ವಿಧದಿಂದ ಪಾವತಿ ಪಡೆಯಬಹುದು.

1. ಬ್ಯಾಂಕ್ ಶಾಖೆಯಲ್ಲಿ ಪ್ರತ್ಯಕ್ಷವಾಗಿ ಹಿಂಪಡೆತ ಮಾಡಿಕೊಳ್ಳಬಹುದು.

2. ಚೆಕ್ಕು ಹಾಳೆಗಳ ಮೂಲಕ.

3. ATM/DEBIT CARD ಮೂಲಕ.

ಗ್ರಾಹಕರು ಅರ್ಜಿ ಸಲ್ಲಿಸಿ ಸಾಲ ಮಂಜೂರು ಆದರೆ ಅವರಿಗೆ ಒಂದು ಪಾಸ್ ಬುಕ್ ಹಾಗೂ ಕ್ರೆಡಿಟ್ ಕಾರ್ಡ್ ನೀಡಲಾಗುತ್ತದೆ.ಕಾರ್ಡಿನಲ್ಲಿ ಸಾಲಗಾರನ ಭಾವಚಿತ್ರ, ಹೆಸರು, ವಿಳಾಸ, ಜಮೀನಿನ ವಿಸ್ತಾರ, ಸಾಲದ ಮಿತಿ, ಅವಧಿ ಇತ್ಯಾದಿ ವಿವರಗಳಿರುತ್ತವೆ. ಇದರಲ್ಲಿ ರೈತರ ಜಮ ಹಾಗೂ ಹಿಂಪಡೆತದ ವಿವರಗಳು ದಾಖಲೆಯಾಗಿರುತ್ತವೆ. ಖಾತೆಯಲ್ಲಿ ವ್ಯವಹರಿಸುವಾಗ ಕ್ರೆಡಿಟ್ ಕಾರ್ಡ್ ಹಾಗೂ ಪಾಸ್‌ಬುಕ್ ರೈತರ ಕೈಯಲ್ಲಿರಬೇಕು. ಹೀಗೆ ರೈತರು ಬ್ಯಾಂಕ್‌ಗಳ ಮೂಲಕ ವ್ಯವಹರಿಸಿ ತಮಗೆ ಒದಗುವ ಹಣಕಾಸಿನ ಅಭಾವವನ್ನು ನೀಗಿಸಿಕೊಳ್ಳಬಹುದು.

**ಉಪಸಂಹಾರ**

ಪ್ರಸ್ತುತ ಅಧ್ಯಾಯದಲ್ಲಿ ಕೃಷಿಗೆ ಮತ್ತು ತೋಟಗಾರಿಕೆ ಕೃಷಿಗೆ ಸಂಬಂಧಿಸಿದ ಯೋಜನೆಗಳನ್ನು ಪ್ರಸ್ತಾಪಿಸಲಾಗಿದೆ. ಸರ್ಕಾರದಿಂದ ಪ್ರತಿ ಬಜೆಟ್ ಮಂಡನೆಯ ಸಮಯದಲ್ಲೂ ರೈತರಿಗೆ ರೈತರ ಉದ್ಧಾರಕ್ಕಾಗಿ ಅನೇಕ ರೀತಿಯ ಯೋಜನೆಗಳನ್ನು ಜಾರಿಗೊಳಿಸಲಾಗುತ್ತದೆ. ಹೀಗೆ ರೂಪಿಸಿದ ಯೋಜನೆಗಳು ಕೇವಲ ಕೆಲವೇ ರಾಜ್ಯಗಳಲ್ಲಿ, ಕೆಲವೇ ಜಿಲ್ಲೆಗಳಲ್ಲಿ, ಕೆಲವೇ ತಾಲೂಕುಗಳಲ್ಲಿ, ಮತ್ತು ಕೆಲವೇ ಕೆಲವು ಗ್ರಾಮಗಳಲ್ಲಿ ಬೆರಳೆಣಿಕೆಯಷ್ಟು ರೈತರು ಮಾತ್ರವೇ ಪ್ರಯೋಜನ ಪಡೆಯುತ್ತಿದ್ಧಾರೆ. ಅಲ್ಲದೆ ರೈತರಿಗೆ ಸರ್ಕಾರವು ಯೋಜನೆಗಳನ್ನು ರೂಪಿಸುವುದು ಹೊಸತೇನಲ್ಲ, ಹಿಂದಿನ ಕಾಲದಿಂದಲೂ ಭಾರತದ ಇತಿಹಾಸದಲ್ಲಿ ರೈತರ ಏಳಿಗೆಗಾಗಿ ಶ್ರಮಿಸಿದ ಕುರುಹುಗಳನ್ನು ನೋಡಬಹುದು, ಉದಾ. ರೈತ ಚಳುವಳಿ ಎಂಬ ಪುಸ್ತಕದಲ್ಲಿ ರೈತರು ಬ್ರಿಟಿಷರ ವಿರುದ್ದ ಹೇಗೆ ಸಿಡಿದೆದ್ದರು ಹಾಗೂ ಅ ದಿನಗಳಲ್ಲಿ ಚಳುವಳಿಗಳು ರೈತರಪರ ನಡೆದು ಎಷ್ಟೋ ಬದಲಾವಣೆಗಳನ್ನು ಕಂಡಿವೆ ಎಂಬುದನ್ನು ನಮೂದಿಸಿದ್ದೇನೆ, ಇಲ್ಲಿ ನಾನು ಹೇಳ ಹೊರಟಿರುವುದೇನೆಂದರೆ ಆನಾದಿ ಕಾಲದಿಂದಲೂ ರೈತರ ಕುರಿತು ಯೋಜನೆಗಳನ್ನು ರೂಪಿಸುತ್ತಿದ್ದೇವೆ. ಆದರೆ ಅವುಗಳ ಸಮರ್ಪಕ ಪ್ರಯೋಗದಲ್ಲಿ ನಾವು ಸೋಲುತ್ತಿದ್ದೇವೆ ಅನ್ನಿಸುತ್ತದೆ. ಹಾಗಾಗಿ ಯೋಜನೆಗಳ ಪ್ರಯೋಗವನ್ನು ಮಾಡುವಲ್ಲಿ ಇನ್ನೂ ಹೆಚ್ಚಿನ ಶ್ರಮವನ್ನು ರೈತರು, ಅಧಿಕಾರಿಗಳು, ಸರ್ಕಾರ ವಹಿಸಬೇಕು ಎನ್ನುವುದು ನನ್ನ ವಾದ ಮಂಡನೆಯಾಗಿದೆ.

## ಕೊನೆಟಿಪ್ಪಣಿಗಳು


1. ಡಿ.ಎಸ್.ನಾಗಭೂಷಣ, "ರೈತಭಾರತ: ಅವಸಾನದ ಅಂಚಿನಲ್ಲಿ" ಲೋಹಿಯ ಪ್ರಕಾಶನ ಬಳ್ಳಾರಿ 2008, ಪು.ಸಂ.24.
2. ಕೆ.ವಿ.ಮಹಾಬಲಗಿರಿ ಭಟ್, "ಮಾರುಕಟ್ಟೆಗಳ ಸ್ಥಾಪನೆ", ಕೃಷಿಪೇಟೆ ಕರ್ನಾಟಕ ಸರ್ಕಾರ, ಡಿ.2013, ಪು.ಸಂ.6–8.
3. ಚಿದಾನಂದ ಎಸ್. ನವಲಗುಂದ, "ಅಂತಾರಾಷ್ಟ್ರೀಯ ಕೃಷಿಮೇಳ ಕೃಷಿ ಮಾರಾಟ ಮಂಡಳಿಯ ವಸ್ತುಪ್ರದರ್ಶನ ಮಳಿಗೆ: ಒಂದು–ನೋಟ" 2013, ಪು.ಸಂ.12–16.
4. ಶರಣಬಸಪ್ಪ ಎನ್. ಕರ್ನಾಟಕ ಕೃಷಿ ಮಾರಾಟ ನೀತಿ, ಕೃಷಿಪೇಟೆ ಕರ್ನಾಟಕ ಸರ್ಕಾರ, 2013, ಪು.ಸಂ.22–27.
5. ಕರ್ನಾಟಕ ಮಾರಾಟ ಇಲಾಖೆ, ಕೃಷಿ ಮಾರಾಟ ಇಲಾಖೆ ಹಾಗೂ ಮಂಡಳಿಯ ಮಹತ್ವದ ಸುತ್ತೋಲೆಗಳು, ಕರ್ನಾಟಕ ಸರ್ಕಾರ, ಜೂನ್ 2011, ಪು.ಸಂ.1–10.
6. ರಮೇಶ ಎಸ್., ನ್ಯೂ ಅಗ್ರಿಕಲ್ಚರ್ ಪಾಲಿಸಿ: 2000, EPW, ಸಂಚಿಕೆ 90, 2012, ಪು.ಸಂ.24–29.
7. ನಾರಾಯಣ ಬಿ., ಥರ್ಡ್ ನ್ಯಾಶನಲ್ ಅಗ್ರಿಕಲ್ಚರ್ ಪಾಲಿಸಿ: 1998–2010, EPW, ಸಂಚಿಕೆ.78 2000, ಪು.ಸಂ.24–29.
8. ವಿನಯ್ ಸಿ., ಗೈಡ್‌ಲೈನ್ಸ್ ಫಾರ್ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ 2014–2015, ಕೃಷಿಪೇಟೆ, ಸಂಚಿಕೆ–12, 2016, ಪು.ಸಂ.16–19.
9. ಲಾವಂಡ್, *ಲೋ ಪ್ರೊಡಕ್ಟ್‌ವಿಟಿ ಆಫ್ ಆನಿಯನ್ ಇನ್ ಇಂಡಿಯಾ ಆ್ಯಸ್ ಕಂಪೇರ್ಡ್ ಟು* ಚೈನಾ ಯು.ಎಸ್.ಎ. ಮತ್ತು ನೆದರ್‌ಲ್ಯಾಂಡ್, ಅಪ್ರಕಟಿತ ಮಹಾಪ್ರಬಂಧ, 2004, ಪು.ಸಂ.10–15–38.
10. ಸಂದೀಪ್ ರೈ., *ಬಿಲ್ಡಿಂಗ್ ಅಪ್ ಎಫಿಸಿಯಂಟ್ ಮಾರ್ಕೆಟಿಂಗ್ ಸಿಸ್ಟಮ್ ಟು ಒಬಿವೆಟ್ ದಿ ನೀಡ್ ಫಾರ್ ಲಾರ್ಜ್ ಸ್ಟೇಟ್ ಇಂಟರ್‌ವೆನ್ಷನ್ ಇನ್ ಮಹಾರಾಷ್ಟ್ರ ಜರ್ನಲ್ ಆಫ್* ಅಪ್ರಕಟಿತ ಪ್ರಬಂಧ ಐಯುಪಿ, 2009, ಪು.ಸಂ.24.
11. ಜನಗಣತಿಯ ಮಾಹಿತಿ, 2011–12, ತಾಲೂಕು ಕಛೇರಿಯ ಅಧಿಕಾರಿಗಳಿಂದ ಪಡೆದ ಅಂಕಿ–ಅಂಶಗಳು, ಸಂಡೂರು, 2013.

12. ಬಳ್ಳಾರಿ ಜಿಲ್ಲೆಯ 2013–14ನೇ ವರ್ಷದ ವರದಿ, ತಾಲೂಕುವಾರು ಕಛೇರಿಗಳಿಂದ ಪಡೆದ ಅಂಕಿ ಅಂಶಗಳು, 2015.

13. ಸಂಡೂರು ತಾಲೂಕು ಕಛೇರಿ, ರೈತರಿಗೆ ಪಾಣಿ ಮತ್ತು ಬರ ಪರಿಹಾರ ವಿತರಿಸುವುದರ ಕುರಿತು, ಕಛೇರಿಯಲ್ಲಿ ಅಧಿಕಾರಿಗಳಿಂದ ಪಡೆದ ಮಾಹಿತಿ, 2013.

14. ಹಗರಿಬೊಮ್ಮನಹಳ್ಳಿ ಕೃಷಿ ಮಾರುಕಟ್ಟೆ ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು, ತೋಟಗಾರಿಕೆ ಇಲಾಖೆಯಲ್ಲಿ ಅಧಿಕಾರಿಗಳು ಕೊಟ್ಟ ಮಾಹಿತಿ, 2013.

15. ಹಗರಿಬೊಮ್ಮನಹಳ್ಳಿ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು, 2013.

16. ಸಂಡೂರಿನ ಕೃಷಿ ಇಲಾಖೆ ಕೃಷಿ ಬೀಜ ವಿತರಣೆ, ಗೊಬ್ಬರ ವಿತರಣೆಯ ವಿವರಣೆಯನ್ನು ಇಲಾಖೆಯ ಅಧಿಕಾರಿಗಳಿಂದ ಪಡೆದಕೊಂಡಿದ್ದು, 2013.

17. ಬಳ್ಳಾರಿ ಜಿಲ್ಲಾ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು ಮಾಹಿತಿಯನ್ನು ಅಧಿಕಾರಿಗಳಿಂದ ಪಡೆದಿರುತ್ತೇನೆ, 2013.

18. ಬಳ್ಳಾರಿ ಜಿಲ್ಲೆಯ ಕೃಷಿ ಇಲಾಖೆ ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು ಮಾಹಿತಿಯನ್ನು ಅಧಿಕಾರಿಗಳಿಂದ ಪಡೆದಿರುತ್ತೇನೆ, 2013.

19. ಬಳ್ಳಾರಿಯ ಕೃಷಿ ಮಾರುಕಟ್ಟೆ, ಮಾರುಕಟ್ಟೆಯಲ್ಲಿರುವ ರೈತರಿಗಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಮಾರಾಟ ಮಾಡಲಿಕ್ಕಿರುವ ಅನುಕೂಲಗಳು, 2013.

20. ಕೂಡ್ಲಿಗಿ ತೋಟಗಾರಿಕೆ ಇಲಾಖೆ, ವಿವಿಧ ತೋಟಗಾರಿಕೆ ಯೋಜನೆಗಳ ಮಾಹಿತಿಯನ್ನು ಕಛೇರಿಯ ಅಧಿಕಾರಿಗಳಿಂದ ಪಡೆದಿರುತ್ತೇನೆ, 2012.

21. ಎಸ್‌ಬಿ.ಐ. ಮತ್ತು ಕೋ ಆಪರೇಟಿವ್ ಸೊಸೈಟಿ, ಗ್ರಾಮೀಣ ಬ್ಯಾಂಕ್ ಸಂಡೂರು ಮತ್ತು ಬಳ್ಳಾರಿಯಲ್ಲಿ ರೈತರಿಗಿರುವ ಸಾಲಸೌಲಭ್ಯಗಳ ಮಾಹಿತಿಯನ್ನು ಬ್ಯಾಂಕ್ ಅಧಿಕಾರಿಗಳಿಂದ ಪಡೆದಿರುತ್ತೇನೆ, 2013

22. ಜಿಲ್ಲಾ ಪಂಚಾಯತ್, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳಿಂದ ಪಡೆದ ಮಾಹಿತಿ, ಬಳ್ಳಾರಿ, 2012–13.

# ಅಧ್ಯಾಯ–ನಾಲ್ಕು

# ಗ್ರಾಮೀಣ ಕೃಷಿ ಮಾರುಕಟ್ಟೆಯ ನೀತಿ ನಿಯಮಗಳು

ಪೀಠಿಕೆ

ರೈತರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಹಿನ್ನೆಲೆ

ರೈತರ ಕುಟುಂಬದ ವಿವರಗಳು

ಕೃಷಿ ಉತ್ಪನ್ನ ಮಾರುಕಟ್ಟೆ ಶಾಸನ 1966

ಮಾರುಕಟ್ಟೆಯ ಪ್ರಾಂಗಣದಲ್ಲಿ ರೈತರಿಗೆ ಒದಗಿಸಿರುವ ಸೌಲಭ್ಯಗಳು

ಮಾರುಕಟ್ಟೆಯಲ್ಲಿ ರೈತರಿಗಾಗಿರುವ ಮೂಲಭೂತ ಸೌಲಭ್ಯಗಳು

ಮಾರುಕಟ್ಟೆಯಲ್ಲಿ ರೈತರಿಗಾಗಿ ಸೇವೆ ಸೌಲಭ್ಯಗಳು ಮತ್ತು ಮಾರಾಟ ಮಾಡುವ ವಿಧಾನಗಳು

ಮಾರುಕಟ್ಟೆಯಲ್ಲಿ ರೈತರ ಹುಟ್ಟುವಳಿಗಳ ತೂಕದ ವಿವರಗಳು

ರೈತರು ಕೃಷಿಗಾಗಿ ಬಳಸಿಕೊಂಡ ಹಣದ(ಕೊಡು–ಕೊಳ್ಳುವಿಕೆಯ) ವಿವರಗಳು

ರೈತರ ವಿಮೆ ಯೋಜನೆಗಳು

# ಅಧ್ಯಾಯ-ನಾಲ್ಕು

# ಆಚರಣೆಯಲ್ಲಿರುವ ಗ್ರಾಮೀಣ ಮಾರುಕಟ್ಟೆ

ಹಿಂದಿನ ಅಧ್ಯಾಯದಲ್ಲಿ ಗ್ರಾಮೀಣ ಕೃಷಿ ಮಾರುಕಟ್ಟೆಯ ಪರಿಕಲ್ಪನೆ ಮತ್ತು ಗ್ರಾಮೀಣ ಮಾರುಕಟ್ಟೆಯ ಐತಿಹಾಸಿಕ ಹಿನ್ನೆಲೆಯನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ಗ್ರಾಮೀಣ ಮಾರುಕಟ್ಟೆಯ ಮತ್ತು ರೈತವರ್ಗದ ಪರಿಕಲ್ಪನೆಯನ್ನು ಆಧುನಿಕ ಕಾಲದಲ್ಲಿ ಹೇಗೆ ಬದಲಾಗುತ್ತಿದೆ ಎಂಬುದನ್ನು ಚರ್ಚಿಸಲಾಗಿದೆ. ಹಿಂದಿನ ಅಧ್ಯಯನವು ಸಂಪೂರ್ಣವಾಗಿ ಕೇಂದ್ರದ ಮತ್ತು ರಾಜ್ಯದ ಕೃಷಿ ನೀತಿ ನಿಯಮಗಳನ್ನು ಅಧ್ಯಯನ ಮಾಡುವುದಾಗಿದೆ. ಪ್ರಸ್ತುತ ಅಧ್ಯಾಯವು ಅಧ್ಯಯನಕ್ಕೆ ಸಂಬಂಧಿಸಿದಂತೆ ಸಿದ್ಧಪಡಿಸಿದ ಪ್ರಶ್ನಾವಳಿಯ ಮೂಲಕ ಕ್ಷೇತ್ರಕಾರ್ಯವನ್ನು ಕೈಗೊಂಡ ವಿವರಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಾಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೇ ಭಾಗದಲ್ಲಿ ರೈತರ ಸಾಮಾಜಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಶಾಸನ 1966ರ, ಕೃಷಿ ಮಾರುಕಟ್ಟೆಯ ಪ್ರಾಂಗಣದಲ್ಲಿ ಒದಗಿಸಿರುವ ಸೌಲಭ್ಯಗಳ ಕುರಿತು, ಮಾರುಕಟ್ಟೆಯಲ್ಲಿ ಮೂಲಭೂತ ಸೌಲಭ್ಯಗಳಾದ ನೀರಿನ ವ್ಯವಸ್ಥೆ, ಕೊಠಡಿ ವ್ಯವಸ್ಥೆ, ಬ್ಯಾಂಕ್ ಮತ್ತು ಅಂಚೆ ತಂತಿಯ ಹಾಗೂ ಇತರೆ ಸೇವೆ ಸೌಲಭ್ಯಗಳನ್ನು ಚರ್ಚಿಸಲಾಗಿದೆ. ಮೂರನೇ ಭಾಗದಲ್ಲಿ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ವಿಧಾನಗಳನ್ನು ಹಾಗೂ ರೈತರು ಕೃಷಿಗಾಗಿ ಬಳಸಿಕೊಳ್ಳುವ ಸಾಲದ ಮೂಲಗಳ ಕುರಿತು ವಿವರಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಕೃಷಿ ಉತ್ಪನ್ನ ಅಡಮಾನದ ಸಾಲ ಯೋಜನೆಗಳನ್ನು ಮತ್ತು ರೈತರ ವಿಮೆ ಯೋಜನೆಗಳ ಕುರಿತು ಚರ್ಚಿಸಲಾಗಿದೆ.

## ಭಾಗ-ಒಂದು

## ರೈತರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪರಿಕಲ್ಪನೆ

ವ್ಯವಸಾಯದಲ್ಲಿ ತೊಡಗಿಕೊಂಡಿರುವವರೆಲ್ಲರನ್ನು ರೈತರೆಂದು ಸಾಮಾನ್ಯವಾಗಿ ಹೇಳುತ್ತೇವೆ ಆದರೂ ರೈತವರ್ಗವನ್ನು ಹೀಗೆ ಎಂದೂ ವ್ಯಾಖ್ಯಾನಿಸುವುದು ಸುಲಭವಲ್ಲ. ಎರಿಕ್ ವೂಲ್ಫ್

ಪ್ರಕಾರ ರೈತರೆಂದರೆ "ಬದುಕಿಗಾಗಿ ಬೆಳೆಗಳನ್ನು ಬೆಳೆಯುತ್ತಿರುವ, ಆದರೆ ಸ್ವಾತಂತ್ರ್ಯ ಅಥವಾ ಸ್ವಾಯತ್ತತೆ ಇರುವ ವರ್ಗ." ಥಿಯೋಡರ್ ಹೇಳುವಂತೆ ರೈತರೆಂದರೆ 'ಸಣ್ಣ ಕೃಷಿಕರು'. ಇರ್ಫಾನ್ ಹಬೀಬ್ ಇನ್ನೂ ಮುಂದಕ್ಕೆ ಹೋಗಿ "ರೈತಾಪಿಗಳೆಂದರೆ ಕೃಷಿಯನ್ನು ತನ್ನ ಕುಟುಂಬ ಮತ್ತು ಯಂತ್ರಗಳಿಂದ ಬಳಸುವವರು." ಹೀಗೆ ಮೇಲೆ ವಿದ್ವಾಂಸರು ತಿಳಿಸಿದಂತೆ ಸ್ವತಃ ಒಕ್ಕಲುತನ ಮಾಡುವ, ಹೊಲ ಉತ್ತಿ ಬಿತ್ತಿ ಬೆಳೆಯುವವರನ್ನು ರೈತರೆಂದರು. ಕೃಷಿಯನ್ನೇ ಜೀವನಕ್ಕೆ ನಂಬಿರುವವರನ್ನೆಲ್ಲ ರೈತರೆಂದು ಹೇಳಲಾಗದು. ಪ್ರನಾಭ ಬಾರ್ಧಾನ್ ಅವರ ಅಗ್ರೈರಿಯನ್ ಕ್ಲಾಸ್ ಫಾರ್ಮೇಶನ್ ಇನ್ ಇಂಡಿಯಾ(1982) ಎಂಬ ಕೃತಿಯಲ್ಲಿ ಆರ್ಥಿಕ ಸ್ಥಿತಿ ಮತ್ತು ಭೂಮಿಯ ಮೇಲಿನ ಹಕ್ಕುಗಳ ಆಧಾರದ ಮೇಲೆ ವಿವಿಧ ಹಂತಗಳನ್ನು ಗುರುತಿಸಿದ್ದಾರೆ. ಭೂ ಮಾಲೀಕರು, ಶ್ರೀಮಂತ ವರ್ಗದ ರೈತರು, ಸಣ್ಣ ಹಿಡುವಳಿಗಾರರು, ಕೃಷಿ ಕೂಲಿ ಕಾರ್ಮಿಕರು ಹೀಗೆ ರೈತ ಎಂಬ ಮಾತಿನಲ್ಲಿ ವಿವಿಧ ಆರ್ಥಿಕ ಮಟ್ಟಗಳ ಹಿತಾಸಕ್ತಿಗಳ ಜನ ಸೇರಿದ್ದಾರೆ. ಡಿ.ಎಸ್.ನಾಗಭೂಷಣ ಅವರು, ಭಾರತ ರೈತರ ಸರಣಿ ಆತ್ಮಹತ್ಯೆ ಕುರಿತು ಬರೆದಿರುವ ಲೇಖನದಲ್ಲಿ, ಹೇಗೆ ಅಮೆರಿಕನ್ನರು ರೈತರಿಗೆ ಯೋಜನೆಗಳನ್ನು[1] ರೂಪಿಸುತ್ತಾರೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಅಮೆರಿಕ ಜನಸಂಖ್ಯೆಯ ಶೇಕಡ 2 ರಷ್ಟಿರುವ ಅಲ್ಲಿನ ರೈತರ ಭೂಮಿಯು 200 ಹೆಕ್ಟೇರ್‌ಗಳಾದರೆ, ಭಾರತದ ಜನಸಂಖ್ಯೆಯ ಶೇಕಡ 65ರಷ್ಟಿರುವ ರೈತರ ಸರಾಸರಿ ಭೂಮಿಯು ಒಂದೂವರೆ ಹೆಕ್ಟೇರ್. ಆದರೆ ರಾಷ್ಟ್ರೀಯ ನಿವ್ವಳ ಲಾಭವು ಅಮೆರಿಕನ್ನರದು ಶೇ.4ರಷ್ಟಾದರೆ, ಭಾರತಿಯ ರೈತರ ಪಾಲು ಶೇ.18ರಷ್ಟಿದೆ. ಅಮೆರಿಕನ್ನರು ಪ್ರತಿ ಹೆಕ್ಟೇರ್ 70–80 ಕ್ವಿಂಟಾಲು ಭತ್ತ ಬೆಳೆದರೆ, ಭಾರತದಲ್ಲಿ 20–30 ಕ್ವಿಂಟಾಲ್ ಮಾತ್ರವೇ ಬೆಳೆಯುತ್ತಾರೆ. ಈ ಉತ್ಪಾದನೆಯ ಹಿಂದೆ ಎರಡು ದೇಶಗಳ ಕೃಷಿನೀತಿಗಳ ವ್ಯತ್ಯಾಸಗಳನ್ನು ಕಾಣಬಹುದು, ಅದು ಹಿಡುವಳಿಯ ಗಾತ್ರ, ಕೃಷಿ ವಿಧಾನ, ಬಂಡವಾಳೀಕರಣ, ವ್ಯಾಪಾರ ಪದ್ಧತಿ ಇತ್ಯಾದಿಗಳಲ್ಲಿ. ಇವುಗಳಿಗೆ ಸರ್ಕಾರದ ಪಾತ್ರವೇ ಅತಿ ಹೆಚ್ಚು. ಹೀಗಿರುವಾಗ ಭಾರತದ ರೈತರಾದರೆ ಏನು ಮಾಡಿಯಾರು? ಜಾಗತಿಕ ಮಾರುಕಟ್ಟೆಯಲ್ಲಿ ಇವರಿಬ್ಬರೂ ಸಮಾನವಾಗಿ ಸ್ಪರ್ಧಿಸುವುದಾದರೂ ಹೇಗೆ? ಎನ್ನುವ ಪ್ರಶ್ನೆಗಳು ಕೃಷಿನೀತಿಯನ್ನು ಅಧ್ಯಯನಕ್ಕೆ ಒಳಪಡಿಸಿರುವ ನನಗೆ ಹೆಚ್ಚು ಕಾಡುತ್ತಿವೆ.

ಮೊದಲನೆಯದಾಗಿ ರೈತರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಕೆಳಗಿನ ಕೋಷ್ಟಕಗಳಲ್ಲಿ ವಿವರಿಸಲಾಗಿದೆ. ಕೋಷ್ಟಕ 22ರಲ್ಲಿ ಗ್ರಾಮದ ಕುಟುಂಬದಲ್ಲಿಯ ಧರ್ಮದ ವಿವರಗಳನ್ನು ತೋರಿಸಲಾಗಿದೆ. 2011ರ ಜನಗಣತಿಯ ಪ್ರಕಾರ ಸಂಡೂರು ತಾಲೂಕಿನಲ್ಲಿ ಒಟ್ಟು 2,60,213 ಇದ್ದು, ಪುರುಷರು 126179 ಮತ್ತು ಮಹಿಳೆಯರು 52,067ರಷ್ಟಿದ್ದಾರೆ. ಧರ್ಮವನ್ನು ನೋಡುವುದಾದರೆ, ಒಟ್ಟು ಹಿಂದು ಧರ್ಮದವರು

ಶೇ.87.77%, ಮುಸ್ಲಿಂ ಜನಾಂಗ 11.42%, ಕ್ರೈಸ್ತರು 0.56%, ಸಿಕ್ಕರು 0.07%, ಬೌದ್ಧರು 0.01%, ಜೈನರು 0.08%, ಇತರರು 00%, ಯಾವುದೇ ಜಾತಿಯಲ್ಲಿ ಗೊತ್ತಿಲ್ಲ ಎನ್ನುವವರು ಶೇ.0.166 ಜನರು ತಾಲೂಕಿನಲ್ಲಿ ಇದ್ದಾರೆ. ಅಧ್ಯಯನದ ಸಮೀಕ್ಷೆಯಲ್ಲಿ ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮದಲ್ಲಿ ಧರ್ಮವನ್ನು ನೋಡುವುದಾದರೆ ಹಿಂದೂ ಜನಾಂಗಕ್ಕೆ ಸೇರಿದ ರೈತ ಕುಟುಂಬಗಳು ಶೇ.80ರಷ್ಟಿದ್ದು, ಮುಸ್ಲಿಂ ಜನಾಂಗಕ್ಕೆ ಸೇರಿದ ರೈತ ಕುಟುಂಬಗಳು ಶೇ.20ರಷ್ಟು ಮತ್ತು ಕ್ರಿಶ್ಚಿಯನ್ ಜನಾಂಗಕ್ಕೆ ಸೇರಿದ ರೈತರ ಕುಟುಂಬಗಳು ಹೊಸಳ್ಳಿ ಗ್ರಾಮದಲ್ಲಿ ಕಂಡುಬಂದಿರುವುದಿಲ್ಲ ಮತ್ತು ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಹಿಂದೂಧರ್ಮಕ್ಕೆ ಸೇರಿದ ರೈತರ ಕುಟುಂಬಗಳು ಶೇ.88.33ರಷ್ಟಿದ್ದು, ಮುಸ್ಲಿಂ ಜನಾಂಗಕ್ಕೆ ಸೇರಿದ ರೈತ ಕುಟುಂಬಗಳು ಶೇ.10ರಷ್ಟು ಇದೆ. ಕ್ರಿಶ್ಚಿಯನ್ ಕುಟುಂಬಕ್ಕೆ ಸೇರಿದ ರೈತರ ಕುಟುಂಬವು ಗ್ರಾಮದಲ್ಲಿ ಕೇವಲ ಒಂದು ಮಾತ್ರವೇ ಇದೆ ಎನ್ನುವ ಅಂಕಿ– ಅಂಶಗಳು ದೊರೆತಿರುತ್ತವೆ.

**ಕೋಷ್ಟಕ–22**

**ಗ್ರಾಮಗಳಲ್ಲಿಯ ಕುಟುಂಬಗಳ ಧರ್ಮದ ವಿವರಗಳು**

| ಕ್ರ.ಸಂ. | ಧರ್ಮ | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಹಿಂದು | 48 | 80.00 | 53 | 88.33 |
| 2. | ಮುಸ್ಲಿಂ | 12 | 20.00 | 06 | 10.00 |
| 3. | ಕ್ರಿಶ್ಚಿಯನ್ | 00 | 00 | 01 | 1.67 |
| | ಒಟ್ಟು | 60 | 100 | 60 | 100 |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೆಳಗಿನ ಕೋಷ್ಟಕ–23ರಲ್ಲಿ ರೈತರ ಕುಟುಂಬದ ಸ್ಥಿತಿಯನ್ನು ಎರಡು ಗ್ರಾಮಗಳಲ್ಲಿ ತೌಲನಿಕವಾಗಿ ನೋಡುವುದಾದರೆ ವಿಭಕ್ತ ರೈತ ಕುಟುಂಬಗಳೇ ಎರಡು ಗ್ರಾಮಗಳಲ್ಲಿ ಹೆಚ್ಚಾಗಿವೆ. ಅವಿಭಕ್ತ ರೈತ ಕುಟುಂಬವು ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮದಲ್ಲಿ ನೋಡುವುದಾದರೆ ಕೇವಲ ಶೇ.5ರಷ್ಟಿದ್ದು, ವಿಭಕ್ತ ಕುಟುಂಬವು ಶೇ.95ರಷ್ಟು ಕುಟುಂಬಗಳಿವೆ. ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಅವಿಭಕ್ತ ರೈತರ ಕುಟುಂಬಗಳು ಶೇ.5ರಷ್ಟಿದ್ದು, ವಿಭಕ್ತ ಕುಟುಂಬಕ್ಕೆ ಸೇರಿದ ರೈತ ಕುಟುಂಬಗಳು ಶೇ.95ರಷ್ಟಿವೆ ಎನ್ನುವ ಅಂಕಿ ಅಂಶಗಳು ಕಂಡುಬರುತ್ತವೆ.

ಇದೇ ತೆರನಾದ ಫಲಿತಗಳು ಪ್ರೈಮ್ ಸ್ಟಡಿ ಮಾಡುವಾಗಲೂ ತಾರಾನಗರ ಮತ್ತು ಹಲಕುಂದಿಯಲ್ಲೂ ಕಂಡುಬಂದಿದೆ.

**ಕೋಷ್ಟಕ–23**

**ಕುಟುಂಬಗಳ ಬಿಡಿ ಮತ್ತು ಕೂಡು ಕುಟುಂಬಗಳ ವಿವರಗಳು**

| ಕ್ರ.ಸಂ. | ಕುಟುಂಬದ ಸ್ಥಿತಿ | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಅವಿಭಕ್ತ ಕುಟುಂಬ | 3 | 5.00 | 3 | 5.00 |
| 2 | ವಿಭಕ್ತ ಕುಟುಂಬ | 57 | 95.00 | 57 | 95.00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ

ಕೆಳಗಿನ ಕೋಷ್ಟಕ–24ರಲ್ಲಿ ಗ್ರಾಮದಲ್ಲಿ ಕುಟುಂಬ ಪಡಿತರ ಚೀಟಿ ವಿವರವನ್ನು ನೀಡಲಾಗಿದೆ. ಪಡಿತರ ಚೀಟಿಯ ವಿವರವು ಹೊಸಳ್ಳಿ ಗ್ರಾಮದಲ್ಲಿ ಶೇ.96.67 ಕುಟುಂಬಗಳು ಸರ್ಕಾರದಿಂದ ದೊರೆಯುವ ಪಡಿತರ ಚೀಟಿಯನ್ನು ಹೊಂದಿದ್ದು, ಶೇ.3.33 ಕುಟುಂಬಗಳು ಇನ್ನೂ ಪಡಿತರ ಚೀಟಿಯನ್ನು ಪಡೆದಿಲ್ಲ. ಉಳಿದ ರೈತರು ಹೇಳವ ಪ್ರಕಾರ ತಮಗೆ ಬರುವ ಪಡಿತರ ಚೀಟಿಯು, ತಾಲೂಕು ಕಛೇರಿಯಲ್ಲಿ ಪ್ರಗತಿಯಲ್ಲಿದೆ ಎನ್ನುವುದಾಗಿತ್ತು. ಹೊನ್ನಳ್ಳಿ ಗ್ರಾಮದಲ್ಲಿ ಎಲ್ಲ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿವೆ.

**ಕೋಷ್ಟಕ–24**

**ಗ್ರಾಮಗಳಲ್ಲಿ ಕುಟುಂಬವು ಹೊಂದಿರುವ ಪಡಿತರ ಚೀಟಿ ವಿವರಗಳು**

| ಕ್ರ.ಸಂ. | ಪಡಿತರ ಚೀಟಿ | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 58 | 96.67 | 60 | 100 |
| 2. | ಇಲ್ಲ | 2 | 3.33 | 00 | 00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಬಂದ ಮಾಹಿತಿ

ಹೊನ್ನಳ್ಳಿ ಗ್ರಾಮದಲ್ಲಿ ಎಲ್ಲ ರೈತರ ಕುಟುಂಬಗಳು ಪಡಿತರ ಚೀಟಿಯನ್ನು ಪಡೆದು ಕೊಂಡಿದ್ದಾರೆ. ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಅಂಕಿ–ಅಂಶಗಳ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಬಿಪಿಎಲ್ ಪಡಿತರ ಚೀಟಿ ಪಡೆದವರ ಗ್ರಾಮೀಣ ಮತ್ತು ನಗರದ ಸಂಖ್ಯೆಯನ್ನು ನೋಡುವುದಾದರೆ ಒಟ್ಟು 76705 ಮತ್ತು ಸಂಡೂರು ತಾಲೂಕಿನಲ್ಲಿ ಗ್ರಾಮೀಣ ಮತ್ತು ನಗರ ನೋಡುವುದಾದರೆ 27,521 ಇರುತ್ತದೆ. ರೈತರನ್ನು ಕೆಳಗಿನ ಕೋಷ್ಟಕ–25ರಲ್ಲಿ ಯಾವ ರೀತಿಯ ಪಡಿತರ ಚೀಟಿ ಪಡೆದುಕೊಂಡಿದ್ದೀರಿ ಎಂದಾಗ, ಹೊಸಳ್ಳಿ ಗ್ರಾಮದಲ್ಲಿ ಆಯ್ಕೆ ಮಾಡಿಕೊಂಡ ಕುಟುಂಬಗಳಲ್ಲಿ ಯಾವೊಬ್ಬ ರೈತರಲ್ಲಿಯೂ ಅಂತ್ಯೋದಯ ಪಡಿತರ ಚೀಟಿ ಇರುವುದಿಲ್ಲ. ಶೇ.95ರಷ್ಟು ಕುಟುಂಬಗಳು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿವೆ. ಶೇ.5ರಷ್ಟು ಕುಟುಂಬಗಳು ಎ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಯಾವ ರೀತಿಯ ಪಡಿತರ ಚೀಟಿ ರೈತರು ಹೊಂದಿದ್ದಾರೆ ಎಂದು ನೋಡುವುದಾದರೆ ಶೇ.5ರಷ್ಟು ಕುಟುಂಬಗಳ ರೈತರಲ್ಲಿ ಅಂತ್ಯೋದಯ ಪಡಿತರ ಚೀಟಿ ಇದ್ದು, ಶೇ.90ರಷ್ಟು ಕುಟುಂಬಗಳು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿವೆ. ಶೇ.5ರಷ್ಟು ಕುಟುಂಬಗಳು ಎ.ಪಿ.ಎಲ್.ಪಡಿತರ ಚೀಟಿಯನ್ನು ಹೊಂದಿದ್ದಾರೆ.

**ಕೋಷ್ಟಕ–25**

**ಗ್ರಾಮಗಳಲ್ಲಿ ಕುಟುಂಬವು ಹೊಂದಿರುವ ವಿವಿಧ ರೀತಿಯ ಪಡಿತರ ಚೀಟಿ ವಿವರಗಳು**

| ಕ್ರ.ಸಂ. | ಪಡಿತರ ಚೀಟಿಗಳು | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಅಂತ್ಯೋದಯ | 00 | 00 | 6 | 5.00 |
| 2. | ಬಿ.ಪಿ.ಎಲ್. | 57 | 95.00 | 48 | 90.00 |
| 3. | ಎ.ಪಿ.ಎಲ್. | 3 | 5.00 | 6 | 5.00 |
| 4. | ಯಾವುದೂ ಇಲ್ಲ | 00 | 00 | 00 | 00 |
| ಒಟ್ಟು | | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಬಂದ ಮಾಹಿತಿ

2011–2012ನೇ ಸಾಲಿನ ಎ.ಎಸ್.ಸಿ.ಆರ್(ಆನುವಲ್ ಸೀಸನ್ ಮತ್ತು ಕ್ರಾಪ್ ರಿಪೋರ್ಟ್) ವರದಿಯ ಪ್ರಕಾರ ಜಿಲ್ಲೆಯಲ್ಲಿ ವ್ಯವಸಾಯ ಮತ್ತು ತೋಟಗಾರಿಕೆಗೆ ಬಳಕೆಯಾದ ಭೂಮಿಯ

ವಿವರವು, ನಿವ್ವಳ 135891ರಷ್ಟಿದ್ದು, ಸಂಡೂರು ತಾಲೂಕಿನಲ್ಲಿ 31599ರಷ್ಟು ಭೂಮಿಯು 2011–12ರಲ್ಲಿ ಬಿತ್ತನೆಗೆ ಒಳಪಟ್ಟಿದೆ. ಕೆಳಗಿನ ಕೋಷ್ಟಕ: 26ರಲ್ಲಿ ಕುಟುಂಬದ ವಿವರಗಳನ್ನು ನೀಡಲಾಗಿದೆ. ಸ್ವಂತ ಕೃಷಿಭೂಮಿಯನ್ನು ಹೊಂದಿರುವ ರೈತ ಕುಟುಂಬಗಳು ಸಂಡೂರಿನ ಹೊಸಳ್ಳಿಯಲ್ಲಿ ಶೇ.91.67ರಷ್ಟಿವೆ. ಕೃಷಿ ಭೂಮಿಯನ್ನು ಹೊಂದಿರದ ರೈತ ಕುಟುಂಬಗಳು ಶೇ.8.33ರಷ್ಟಿವೆ. ಹಾಗೆಯೇ ಹೊನ್ನಳ್ಳಿ ಗ್ರಾಮದಲ್ಲಿ ಎಲ್ಲ ರೈತ ಕುಟುಂಬಗಳು ಸ್ವಂತ ಕೃಷಿ ಭೂಮಿಯನ್ನು ಹೊಂದಿವೆ. ಗ್ರಾಮದಲ್ಲಿ ಕೃಷಿ ಭೂಮಿಯನ್ನು ಹೊಂದಿರುವ ವಿವರವನ್ನು ನೋಡುವುದಾದರೆ, ಹೊಸಳ್ಳಿ ಗ್ರಾಮದಲ್ಲಿ 1–2.5 ಎಕರೆ ಭೂಮಿಯನ್ನು ಹೊಂದಿರುವ ರೈತರು ಶೇ.60ರಷ್ಟಿದ್ದು, 2–2.5 ಎಕರೆ ಭೂಮಿಯನ್ನು ಹೋಂದಿರುವ ರೈತ ಕುಟುಂಬಗಳು ಶೇ.30ರಷ್ಟಿದ್ದು, 5 ಎಕರೆ ಗಿಂತ ಹೆಚ್ಚಿರುವ ಕೃಷಿ ಭೂಮಿಯನ್ನು ಹೊಂದಿರುವ ರೈತ ಕುಟುಂಬಗಳು ಶೇ.10ರಷ್ಟಿವೆ.

ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಸ್ವಂತ ಕೃಷಿ ಭೂಮಿಯನ್ನು ಹೊಂದಿರುವ ರೈತರ ಕುಟುಂಬಗಳಲ್ಲಿ, ಶೇ.45ರಷ್ಟು ರೈತರು 1ರಿಂದ 2.5 ಎಕರೆ ಕೃಷಿ ಭೂಮಿಯನ್ನು ಹೊಂದಿವೆ. ಕ್ರಮವಾಗಿ 2.5ರಿಂದ 5 ಎಕರೆ, 5 ಎಕರೆಗಿಂತ ಜಾಸ್ತಿ ಭೂಮಿಯನ್ನು ಹೊಂದಿರುವ ರೈತ ಕುಟುಂಬಗಳು ಸಮನಾಗಿ ಶೇ.45ರಷ್ಟಿವೆ. ಈ ಸಂದರ್ಭದಲ್ಲಿ ರೈತರು ಹಂಚಿಕೊಂಡ ಮತ್ತೊಂದು ಸಂಗತಿ ಎಂದರೆ, ಹಿಂದಿನ ಕಾಲದಲ್ಲೆಲ್ಲಾ ಕೂಡುಕುಟುಂಬಗಳು ಇರುತ್ತಿದ್ದವು. ಹಾಗಾಗಿ ಪ್ರತಿ ಮನೆಯಲ್ಲೂ 5 ಎಕರೆಗಿಂತ ಹೆಚ್ಚಿನ ಕೃಷಿ ಭೂಮಿಯನ್ನು ಕಾಣುತ್ತಿದ್ದೆವು. ಆದರೆ ಇತ್ತೀಚಿನ ದಿನಮಾನಗಳಲ್ಲಿ ಹೆಚ್ಚಾಗಿ ವಿಭಕ್ತ ಕುಟುಂಬಗಳೇ ಇರುವುದರಿಂದ ಸಣ್ಣ ಹಿಡುವಳಿದಾರರು ಹೆಚ್ಚಾಗಿ ಕಾಣಿಸುತ್ತಾರೆ. ಇಂದು ಕೃಷಿ ಭೂಮಿಯು ಕುಟುಂಬಗಳಲ್ಲೇ ಹಂಚಿಹೋಗಿದೆ. ಹೀಗಾಗಿ ಗ್ರಾಮಗಳಲ್ಲಿ ದೊಡ್ಡ ಹಿಡುವಳಿದಾರರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರವೇ ಇವೆ. ಕೃಷಿ ಭೂಮಿಯನ್ನು ಭಾಗ ಮಾಡಲು ಸರ್ಕಾರವು ಕಾರಣವಾಗಿದೆ. ಸರ್ಕಾರದ ಅನೇಕ ಕೃಷಿ ಯೋಜನೆಗಳ ಪ್ರಯೋಜನವನ್ನು ಪಡೆಯಬೇಕಾದರೆ, ಮೊದಲ ಆದ್ಯತೆಯು ಸಣ್ಣ ಮತ್ತು ಅತಿ ಸಣ್ಣ ಭೂ ಹಿಡುವಳಿದಾರರಿಗೆ ಮಾತ್ರವೇ ಎನ್ನುವ ಕಾರಣಕ್ಕೂ ಇಂದು ಗ್ರಾಮಗಳಲ್ಲಿ ಭೂಮಿಯನ್ನು ಆಯಾ ರೈತ ಕುಟುಂಬಗಳು ವಿಭಾಗ ಮಾಡಿಕೊಳ್ಳುತ್ತಿವೆ.

### ಕೋಷ್ಟಕ–26

### ಗ್ರಾಮಗಳಲ್ಲಿಯ ಕುಟುಂಬಗಳ ಭೂಮಿಯ ವಿವರಗಳು

| ಕ್ರ.ಸಂ. | ಸ್ವಂತ ಕೃಷಿ ಭೂಮಿ | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 55 | 91.67 | 60 | 100 |
| 2. | ಇಲ್ಲಾ | 5 | 8.33 | 00 | 00 |
| ಒಟ್ಟು | | 60 | 100 | 60 | 100 |
| ಕೃಷಿ ಭೂಮಿ ಎಕರೆಗಳಲ್ಲಿ | | | | | |
| 1. | 1-2.5 | 36 | 60.00 | 27 | 45.00 |
| 2. | 2.5-5 | 18 | 30.00 | 27 | 45.00 |
| 3. | 5ಕ್ಕಿಂತ ಜಾಸ್ತಿ | 6 | 10.00 | 6 | 10.00 |
| ಒಟ್ಟು | | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಬಂದ ಮಾಹಿತಿ

ರೈತರು ಜಿಲ್ಲೆಯಲ್ಲಿ ಕೃಷಿಗಾಗಿ ಅವಲಂಬಿಸಿರುವ ಒಟ್ಟು ನೀರಾವರಿಯ ಮೂಲಗಳನ್ನು ನೋಡುವುದಾರೆ, ಕಾಲುವೆಗಳಿಂದ ನಿವ್ವಳ ವಿಸ್ತೀರ್ಣ 58612, ಕೆರೆಗಳಿಂದ ನಿವ್ವಳ ನೀರಾವರಿ ವಿಸ್ತೀರ್ಣ 00, ಬಾವಿಗಳಿಂದ ನಿವ್ವಳ ನೀರಾವರಿ ವಿಸ್ತೀರ್ಣ 1602, ಕೊಳವೆಬಾವಿಗಳಿಂದ ನಿವ್ವಳ ನೀರಾವರಿ ವಿಸ್ತೀರ್ಣ 7853, ಏತ ನೀರಾವರಿಯಿಂದ ನಿವ್ವಳ ನೀರಾವರಿ ವಿಸ್ತೀರ್ಣ 8115 ಆಗಿದ್ದು, ಒಟ್ಟು 76182ರಷ್ಟು ನಿವ್ವಳ ನೀರಾವರಿ ವಿಸ್ತೀರ್ಣವನ್ನು ಬಳ್ಳಾರಿ ತಾಲೂಕು ಹೊಂದಿದೆ. ಸಂಡೂರು ತಾಲೂಕಿನಲ್ಲಿ ಕಾಲುವೆಗಳಿಂದ ನಿವ್ವಳ ವಿಸ್ತೀರ್ಣ 645, ಕೆರೆಗಳಿಂದ, ನಿವ್ವಳ ನೀರಾವರಿ ವಿಸ್ತೀರ್ಣ 579, ಬಾವಿಗಳಿಂದ ನಿವ್ವಳ ನೀರಾವರಿ ವಿಸ್ತೀರ್ಣ 310, ಕೊಳವೆ ಬಾವಿಗಳಿಂದ ನಿವ್ವಳ ನೀರಾವರಿ ವಿಸ್ತೀರ್ಣ 4365, ಏತ ನೀರಾವರಿಯಿಂದ ನಿವ್ವಳ ನೀರಾವರಿ ವಿಸ್ತೀರ್ಣ 00 ಆಗಿದ್ದು, ಒಟ್ಟು ತಾಲೂಕಿನಲ್ಲಿ 5929ರಷ್ಟು ನಿವ್ವಳ ನೀರಾವರಿಯ ಕೃಷಿಯನ್ನು ಹೊಂದಿರುತ್ತದೆ.

ಕೆಳಗಿನ ಕೋಷ್ಟಕ–27ರಲ್ಲಿ ರೈತರು ಕೃಷಿಗಾಗಿ ಅವಲಂಬಿಸಿರುವ ನೀರಾವರಿಯ ಮೂಲಗಳ ಕುರಿತು ಚರ್ಚಿಸಲಾಗಿದೆ. ಹೊಸಳ್ಳಿ ಗ್ರಾಮದಲ್ಲಿ ನೀರಾವರಿಯೇ ಒಣ ಬೇಸಾಯವೆ ಎಂದು ರೈತರನ್ನು ಕೇಳಿದಾಗ. ಶೇ.28.33ರಷ್ಟು ರೈತರು ನೀರಾವರಿಯ ಭೂಮಿಯನ್ನು ಹೊಂದಿದ್ದು, ಶೇ.30ರಷ್ಟು ರೈತರು ಮಳೆಯಾಶ್ರಿತ ವ್ಯವಸಾಯವನ್ನು ಮಾಡುತ್ತಿದ್ದಾರೆ. ಉಳಿದ ಶೇ.41.67

ರಷ್ಟು ರೈತರು ನೀರಾವರಿಯ ಮತ್ತು ಮಳೆಯಾಶ್ರಿತ ಭೂಮಿಯನ್ನು ಹೊಂದಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ನೋಡುವುದಾದರೆ, ಕ್ರಮವಾಗಿ ಶೇ.33.33 ರಷ್ಟು ರೈತರು ನೀರಾವರಿ ಭೂಮಿಯನ್ನು ಹೊಂದಿದ್ದಾರೆ, ಶೇ.25.00ರಷ್ಟು ರೈತರು ಮಳೆಯಾಶ್ರಿತ ಬೇಸಾಯವನ್ನು ಮತ್ತು ಶೇ.41.67ರಷ್ಟು ರೈತರು ಮಳೆಯಾಶ್ರಿತ ವ್ಯವಸಾಯವನ್ನು ಹಾಗೂ ನೀರಾವರಿಯನ್ನು ಹೊಂದಿದ್ದಾರೆ. ಎರಡು ಗ್ರಾಮಗಳಲ್ಲಿ ನೋಡುವುದಾದರೆ ಮಳೆಯಾಶ್ರಿತ ಕೃಷಿಯನ್ನು ಹೆಚ್ಚಾಗಿ ಮಾಡುತ್ತಿದ್ದು ಗ್ರಾಮಗಳಲ್ಲಿ ಕ್ಷೇತ್ರಕಾರ್ಯದ ಸಮಯದಲ್ಲಿ ರೈತರು ನೀರಿನ ಅಭಾವ ಹೆಚ್ಚಾಗಿದ್ದು ರೈತರು ಕೃಷಿಗಾಗಿ ಕೇವಲ ಮಳೆಯನ್ನೇ ಕಾಯಬೇಕಾಗಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು.

**ಕೋಷ್ಟಕ–27**

**ರೈತರು ಕೃಷಿಗಾಗಿ ಅವಲಂಬಿಸಿರುವ ನೀರಿನ ಮೂಲಗಳ ವಿವರಗಳು**

| ಕ್ರ.ಸಂ. | ನೀರಿನ ಮೂಲ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| 1. | ನೀರಾವರಿ | 17 | 28.33 | 20 | 33.33 |
| 2. | ಮಳೆಯಾಶ್ರಿತ ಬೇಸಾಯ | 18 | 30.00 | 15 | 25.00 |
| 3. | ಎರಡು | 25 | 41.67 | 25 | 41.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಬಂದ ಅಂಕಿ–ಅಂಶಗಳು

ಕರ್ನಾಟಕ ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ಬೆಳೆಯುತ್ತಿರುವ ತೋಟಗಾರಿಕೆ ಬೆಳೆಗಳು ಬಾಳೆ 1.42.613 ವಿಸ್ತೀರ್ಣದಲ್ಲಿ, ಮಾವು 6115 ಭೂಮಿ ವಿಸ್ತೀರ್ಣದಲ್ಲಿ, ದ್ರಾಕ್ಷಿ 3961 ವಿಸ್ತೀರ್ಣ, ದಾಳಿಂಬೆ 11835 ವಿಸ್ತೀರ್ಣದಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಕೆಳಗಿನ ಕೋಷ್ಟಕ–28ರಲ್ಲಿ ಸಂದರ್ಶನದ ಸಮಯದಲ್ಲಿ ರೈತರಿಗೆ ಕೃಷಿ ಭೂಮಿಯನ್ನು ಬೇರೆಯವರಿಗೆ ಗೇಣಿಗೆ ಕೊಟ್ಟಿದ್ದೀರಾ ಅಥವಾ ಬೇರೆಯವರ ಭೂಮಿಯನ್ನು ಗೇಣಿಗೆ ಮಾಡಲಾಗುತ್ತಿದೆಯೇ ಎಂದು ಪ್ರಶ್ನಿಸಿದಾಗ, ಹೊಸಳ್ಳಿ ಗ್ರಾಮದಲ್ಲಿ ಕ್ರಮವಾಗಿ ಶೇ.8.33, ಶೇ.8.33ರಷ್ಟು ರೈತರು ಸ್ವಂತ ಜಮೀನನ್ನು ಬೇರೆಯವರಿಗೆ ಗೇಣಿಗೆ ಕೊಟ್ಟಿದೆ ಮತ್ತು ಬೇರೆಯವರ ಭೂಮಿಯನ್ನು ಗೇಣಿಗೆ ಮಾಡಲಾಗುತ್ತಿದೆ ಎನ್ನುವ ಮಾಹಿತಿ ದೊರೆತರೆ, ಹೊನ್ನಳ್ಳಿ ಗ್ರಾಮದಲ್ಲಿ ಯಾವೊಬ್ಬ ರೈತರೂ ತಮ್ಮ ಕೃಷಿ ಭೂಮಿಯನ್ನು ಗೇಣಿಗೆ ಬೇರೆಯವರಿಗೆ ನೀಡಿರುವುದಿಲ್ಲ ಎನ್ನುವ ಅಂಶ ತಿಳಿದುಬಂದಿದೆ. ಬೇರೆಯವರ ಭೂಮಿಯನ್ನು ಕೇವಲ ಶೇ.5.0ರಷ್ಟು ರೈತರು ಮಾತ್ರವೇ ಗೇಣಿಗೆ ಮಾಡಲಾಗುತ್ತಿದೆ ಎನ್ನುವ ಅಂಕಿ ಅಂಶವನ್ನು ರೈತರಿಂದ ಪಡೆದಿರುತ್ತೇನೆ. ಈ ಮೇಲಿನ ಅಂಶಗಳಿಂದ ತಿಳಿದು ಬರುವುದೇನೆಂದರೆ ಎರಡು ಗ್ರಾಮಗಳಲ್ಲಿ ಹೆಚ್ಚಿನ ರೈತರು

ಕೃಷಿ ಭೂಮಿಯನ್ನು ತಾವೇ ಸ್ವಂತ ಉಳುಮೆ ಮಾಡುತ್ತಿದ್ದಾರೆ, ಅಂದರೆ ಹೊಸಳ್ಳಿ ಗ್ರಾಮದಲ್ಲಿ ಶೇ.91.67ರಷ್ಟು ರೈತರು ತಾವೇ ಕೃಷಿ ಭೂಮಿಯನ್ನು ಉಳುತ್ತಿದ್ದು, ಹೊನ್ನಳ್ಳಿ ಗ್ರಾಮದಲ್ಲಿ ಯಾವೊಬ್ಬ ರೈತರು ಗೇಣಿಗೆ ಭೂಮಿಯನ್ನು ಬೇರೆಯವರಿಗೆ ನೀಡಿರುವುದಿಲ್ಲ. ಅಂದರೆ ಶೇ.100ರಷ್ಟು ತಾವೇ ಕೃಷಿಗಾಗಿ ತಮ್ಮ ಭೂಮಿಯನ್ನು ಬಳಸಿಕೊಳ್ಳುತ್ತಿದ್ದಾರೆ.

ಗ್ರಾಮಗಳಲ್ಲಿ ಬೆಳೆಯುವ ಬೆಳೆಗಳ ಕುರಿತು ಕೇಳಿದ ಪ್ರಶ್ನೆಗಳಿಗೆ ಉತ್ತರಿಸುತ್ತಾ ಹೊಸಳ್ಳಿ ಗ್ರಾಮದಲ್ಲಿ ರೈತರೊಬ್ಬರು ವಾಣಿಜ್ಯ ಮತ್ತು ವಾಣಿಜ್ಯೇತರ ಬೆಳೆಗಳನ್ನು ಹಿಂದಿನಿಂದಲೂ ಬೆಳೆಯುತ್ತಿದ್ದು, ಮೊದಲೆಲ್ಲ ಹೆಚ್ಚಾಗಿ ವಾಣಿಜ್ಯೇತರ ಬೆಳೆಗಳಾಗಿ ಜೋಳ, ರಾಗಿ, ಸಜ್ಜೆ, ನವಣೆ ತರಕಾರಿಯನ್ನು ಬೆಳೆಯುತ್ತಿದ್ದರು. ವಾಣಿಜ್ಯ ಬೆಳೆಗಳಾಗಿ ಈರುಳ್ಳಿ, ಹತ್ತಿ, ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈ ಅಧ್ಯಯನದಲ್ಲಿ ಹೊಸಳ್ಳಿ ಗ್ರಾಮದಲ್ಲಿ ವಾಣಿಜ್ಯೇತರ ಬೆಳೆಗಳಾಗಿ ಜೋಳ ಶೇ.3.33ರಷ್ಟು ಮಾತ್ರವೇ ವಾಣಿಜ್ಯ ಬೆಳೆಗಳಾಗಿ ಹಣ್ಣು–ತರಕಾರಿ ಶೇ.8.33ರಷ್ಟು, ಮೆಕ್ಕೆಜೋಳವನ್ನು ಶೇ.21.67ರಷ್ಟು ಮತ್ತು ಈರುಳ್ಳಿಯು ಶೇ.66.67 ಪ್ರಮಾಣದಲ್ಲಿ ಹೊಸಳ್ಳಿ ಗ್ರಾಮದಲ್ಲಿ ಉತ್ಪಾದಿಸುತ್ತಾರೆ. ಹೊನ್ನಳ್ಳಿ ಗ್ರಾಮದಲ್ಲಿ ವಾಣಿಜ್ಯೇತರ ಬೆಳೆಗಳಾಗಿ ಜೋಳವನ್ನು ಶೇ.16.67ರಷ್ಟು ಬೆಳೆದರೆ, ವಾಣಿಜ್ಯ ಬೆಳೆಗಳಾಗಿ ಕ್ರಮವಾಗಿ ಈರುಳ್ಳಿ, ಹಣ್ಣು–ತರಕಾರಿ, ಮೆಕ್ಕೆಜೋಳ ಶೇ.3.33, ಶೇ.66.67, ಮತ್ತು ಶೇ.8.33ರಷ್ಟು ಉತ್ಪನ್ನಗಳನ್ನು ಬೆಳೆಯುತ್ತಾರೆ ಎಂದು ತಿಳಿದುಬರುತ್ತದೆ.

**ಕೋಷ್ಟಕ–28**

**ರೈತರು ಗೇಣಿಗೆ ಮಾಡುತ್ತಿರುವ ಭೂಮಿ ಮತ್ತು ಬೆಳೆಗಳ ವಿವರಗಳು**

| ಕ್ರ.ಸಂ. | ಭೂಮಿಯನ್ನು ಗೇಣಿಗೆ ನೀಡಿರುವುದು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಕೊಟ್ಟಿದೆ | 5 | 8.33 | 00 | 00 |
| 2 | ಇಲ್ಲಾ | 55 | 91.67 | 60 | 100 |
| | ಒಟ್ಟು | 60 | 100 | 60 | 100 |
| | ಭೂಮಿಯನ್ನು ಗೇಣಿಗೆ ಉಳುಮೆ ಮಾಡಲಾಗಿದೆ | | | | |
| 1. | ಹೌದು | 5 | 8.33 | 3 | 5.00 |
| 2. | ಇಲ್ಲ | 55 | 91.67 | 57 | 95.00 |
| | ಒಟ್ಟು | 60 | 100 | 60 | 100 |

| | | | | | |
|---|---|---|---|---|---|
| | ವಾಣಿಜ್ಯ ಮತ್ತು ವಾಣಿಜ್ಯೇತರ ಬೆಳೆಗಳು | | | | |
| 1. | ಈರುಳ್ಳಿ | 40 | 66.67 | 2 | 3.33 |
| 2. | ಮೆಕ್ಕೆಜೋಳ | 13 | 21.67 | 8 | 8.33 |
| 3. | ಹಣ್ಣು/ತರಕಾರಿ | 5 | 8.33 | 40 | 66.67 |
| 4. | ಜೋಳ | 2 | 3.33 | 10 | 16.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಬಂದ ಅಂಕಿ-ಅಂಶಗಳು

ಕುಟುಂಬದ ಆದಾಯದ ಮುಖ್ಯ ಮೂಲ ಯಾವುದು ಎಂದು ಕೇಳಿದ ಪ್ರಶ್ನೆಗೆ, ಕೆಳಗಿನ ಕೋಷ್ಟಕ-29ರಲ್ಲಿ ಹೊಸಳ್ಳಿಯಲ್ಲಿ, ಶೇ.96.67ರಷ್ಟು ಕುಟುಂಬಗಳು ಕೃಷಿಯೇ ತಮ್ಮ ಮೂಲ ಮತ್ತು ಕೃಷಿಯನ್ನೇ ನಾವು ನಂಬಿದ್ದೇವೆ ಎನ್ನುವ ಮಾಹಿತಿ ದೊರೆತರೆ, ಕೇವಲ ಬೆರಳೆಣಿಕೆಯಷ್ಟು ಅಂದರೆ ಶೇ.3.33ರಷ್ಟು ಕುಟುಂಬಗಳು ತಮ್ಮ ಕುಟುಂಬದ ಆದಾಯಕ್ಕಾಗಿ ಇತರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಅಂಕಿ-ಅಂಶಗಳು ಪ್ರಶ್ನಾವಳಿಗೆ ರೈತರ ನೇರ ಉತ್ತರವಾದರೂ, ಪರೋಕ್ಷವಾಗಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೊಸಳ್ಳಿಯಲ್ಲಿ ಮಾಡಿದ ಗುಂಪುಚರ್ಚೆಯಲ್ಲಿ ಮತ್ತು ವೀಕ್ಷಣೆಯ ಮೂಲಕ ರೈತರ ಕುಟುಂಬಗಳನ್ನು ನೋಡುವುದಾದರೆ, ಹೆಚ್ಚು ಕಡಿಮೆ ಐದು ಕುಟುಂಬಗಳಲ್ಲಿ ಒಂದು ಕುಟುಂಬದ ಸದಸ್ಯರ ಮನೆಯಲ್ಲಿ ಸ್ಥಳೀಯ ಕೈಗಾರಿಕೆಗಳಲ್ಲಿ ಕೂಲಿ ಕಾರ್ಮಿಕರಾಗಿದ್ದಾರೆ ಎನ್ನುವ ಸಂಗತಿಯನ್ನು ಕಾಣಬಹುದು. ಆದರೂ ಗ್ರಾಮಗಳಲ್ಲಿ ಕುಟುಂಬದ ಸದಸ್ಯರು ಹೆಚ್ಚಾಗಿ ಕೃಷಿಯಲ್ಲಿಯೇ ನಿರತರಾಗಿದ್ದಾರೆ ಎನ್ನುವ ಮಾಹಿತಿ ದೊರೆತಿದೆ. ಹೊನ್ನಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳಲ್ಲಿ ಶೇ.91.67 ಕುಟುಂಬಗಳು ತಮ್ಮನ್ನು ಕೃಷಿಯಲ್ಲೇ ಹೆಚ್ಚಾಗಿ ತೊಡಗಿಸಿಕೊಂಡಿದ್ದು ಕೃಷಿಯ ಕುಟುಂಬಗಳ ಮೂಲ ಜೀವನಾಧಾರವಾಗಿದೆ. ಶೇ.8.33ರಷ್ಟು ಕುಟುಂಬಗಳು ಎರಡರಲ್ಲಿಯೂ ಅಂದರೆ ಕೃಷಿ ಮತ್ತು ಇತರೆ ಕೆಲಸಗಳಲ್ಲಿಯು ತಮ್ಮ ಜೀವನಕ್ಕೆ ಬೇಕಾದ ಹಣವನ್ನು ಸಂಪಾದಿಸುತ್ತಿರುವುದಾಗಿ ಅಧ್ಯಯನದಲ್ಲಿ ತಿಳಿದುಬಂದಿದೆ.

**ಕೋಷ್ಟಕ–29**

**ಗ್ರಾಮಗಳಲ್ಲಿ ರೈತರ ಆದಾಯದ ಮೂಲದ ವಿವರಗಳು**

| ಕ್ರಸಂ. | ಆದಾಯದ ಮೂಲ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಕೃಷಿ ಆದಾಯ | 58 | 96.67 | 55 | 91.67 |
| 2. | ಕೃಷಿಯೇತರ ಆದಾಯ | 2 | 3.33 | 5 | 8.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಬಂದ ಅಂಕಿ ಅಂಶಗಳು

**ಭಾಗ–ಎರಡು**

ಎರಡನೆಯ ಭಾಗದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಶಾಸನ 1966ರ ಕೃಷಿ ಮಾರುಕಟ್ಟೆಯ ಪ್ರಾಂಗಣದಲ್ಲಿ ಒದಗಿಸಿರುವ ಸೌಲಭ್ಯಗಳ ಕುರಿತು, ಮಾರುಕಟ್ಟೆಯಲ್ಲಿ ಮೂಲಭೂತ ಸೌಲಭ್ಯಗಳಾದ ನೀರಿನ ವ್ಯವಸ್ಥೆ, ಕೊಠಡಿ ವ್ಯವಸ್ಥೆ, ಬ್ಯಾಂಕ್ ಮತ್ತು ಅಂಚೆ ತಂತಿಯ ಹಾಗೂ ಇತರೆ ಸೇವೆ ಸೌಲಭ್ಯಗಳನ್ನು ಚರ್ಚಿಸಲಾಗಿದೆ. ಪ್ರಸ್ತುತ ಭಾಗದಲ್ಲಿ ಕೃಷಿ ಮಾರುಕಟ್ಟೆಯ ಉಗಮ ಮತ್ತು ಕೃಷಿ ಮಾರುಕಟ್ಟೆಯ ಕಾರ್ಯಕ್ರಮಗಳು ಹಾಗೂ ಮಾರುಕಟ್ಟೆಯ ಮೂಲಭೂತ ಸೌಕರ್ಯಗಳ ಕುರಿತು ವಿಶ್ಲೇಷಿಸಲಾಗಿದೆ.

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಭಿವೃದ್ಧಿ ಅಧ್ಯಯನ, ಮಹದೇವ ಎಂ. ಸಿಂಧಗಿ, 1996, ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆ ಎಂದರೆ ರೈತರಿಂದ ಬೇಸಾಯ ಹಿಡುವಳಿಗಳ ಸಂಗ್ರಹಣೆ ಮತ್ತು ಹೊಲಗದ್ದೆಗಳಿಂದ ಗ್ರಾಹಕರಿಗೆ ಕೃಷಿ ಉತ್ಪನ್ನಗಳನ್ನು ಸಾಗಾಟದ ಸಂಬಂಧಿತ ಚಟುವಟಿಕೆಗಳ ಸಂಸ್ಥೆಗಳ ಮತ್ತು ನೀತಿಗಳ ಅಧ್ಯಯನವಾಗಿದೆ. ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸ ಮತ್ತು ಕೃಷಿ ಮಾರುಕಟ್ಟೆಯ ನಿಯಂತ್ರಣ, ಅಲ್ಲಿಯ ಸೌಲಭ್ಯ, ಅದರ ರಚನೆ, ಅದರ ಕರ್ತವ್ಯ ಅಧಿಕಾರಿಗಳ ಬಗ್ಗೆ ತಿಳಿದುಕೊಳ್ಳುವುದು, ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸದ ಬಗ್ಗೆ ಹಾಗೂ ಪ್ರಗತಿಯ ಬಗ್ಗೆ ತಿಳಿಯುವುದಾಗಿದೆ. ಈ ಅಧ್ಯಾಯದಲ್ಲಿ ಕೃಷಿ ಮಾರುಕಟ್ಟೆಯ ಕುರಿತು ವಿಶ್ಲೇಷಿಸಲಾಗಿದೆ. ಕೆಳಗಿನ ಕೋಷ್ಟಕ–30ರಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ 1966 ಕಾರ್ಯಗಳು ಮತ್ತು ಸಮಿತಿಯು ರೈತರಿಗೆ ಎಷ್ಟರ ಮಟ್ಟಿಗೆ ತಲುಪಿದೆ ಎನ್ನುವುದನ್ನು ಮುಖ್ಯವಾಗಿ ಸಿದ್ಧಪಡಿಸಿದ ಪ್ರಶ್ನಾವಳಿಯ ಮೂಲಕ ಕಲೆಹಾಕಿದ ಮಾಹಿತಿಯ

ವಿಶ್ಲೇಷಣೆಯನ್ನು ಮೊದಲನೆಯದಾಗಿ ಚರ್ಚಿಸಲಾಗಿದೆ. ಕೋಷ್ಟಕ: 30ರಲ್ಲಿ ಸಮಿತಿಯ ರಚನೆಯಲ್ಲಿ ರೈತರಿಗೆ ಪ್ರಾತಿನಿಧ್ಯವಿದೆಯೇ ಎಂದು ಕೇಳಿದ ಪ್ರಶ್ನೆಗೆ ಹೊಸಳ್ಳಿ ಗ್ರಾಮದಲ್ಲಿ ಹೆಚ್ಚಿನ ರೈತರು ಅಂದರೆ ಶೇ.81.67ರಷ್ಟು ರೈತರು ಸಮಿತಿಯ ರಚನೆಯಲ್ಲಿ ರೈತರಿಗೆ ಪ್ರಾತಿನಿಧ್ಯವಿದೆ ಎಂದು ತಿಳಿಸಿದರು. ಶೇ. 6.67ರಷ್ಟು ರೈತರು ರೈತರಿಗೆ ಸಮಿತಿಯ ರಚನೆಯಲ್ಲಿ ಪ್ರಾತಿನಿಧ್ಯವಿರುವುದಿಲ್ಲ ಎಂದು ಹೇಳಿದರೆ, ಶೇ.11.67ರಷ್ಟು ರೈತರು ತಮಗೆ ಸಮಿತಿಯ ಕುರಿತು ಅಷ್ಟಾಗಿ ಏನೂ ತಿಳಿದಿಲ್ಲ ಎನ್ನುವ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಹೊನ್ನಳ್ಳಿ ಗ್ರಾಮದಲ್ಲಿ ನೋಡುವುದಾದರೆ ಶೇ.80.00ರಷ್ಟು ರೈತರು ಸಮಿತಿ ರಚನೆಯಲ್ಲಿ ತಮಗೆ ಪ್ರಾತಿನಿಧ್ಯವಿದೆ ಎನ್ನುವ ಮಾಹಿತಿಯನ್ನು ನೀಡಿದ ಶೇ.15.00ರಷ್ಟು ರೈತರು ಸಮಿತಿ ರಚನೆಯಲ್ಲಿ  ತಮಗೆ ಪ್ರಾತಿನಿಧ್ಯವಿಲ್ಲ ಎಂದು ತಿಳಿಸಿದರೆ, ಕೇವಲ ಶೇ.5.00ರಷ್ಟು ರೈತರು ಮಾತ್ರವೇ ತಮಗೆ ಸಮಿತಿಯ ಕುರಿತು ಮಾಹಿತಿ ಗೊತ್ತಿರುವುದಿಲ್ಲ ಎಂದು ತಿಳಿಸಿದರು. ಎರಡು ಗ್ರಾಮಗಳನ್ನು ನೋಡುವುದಾದರೆ ಹೊನ್ನಳ್ಳಿ ಗ್ರಾಮದಲ್ಲಿ ಹೆಚ್ಚಿನ ರೈತರು ಸಮಿತಿಯ ರಚನೆಯಲ್ಲಿ ಪ್ರಾತಿನಿಧ್ಯವಿದೆ ಎನ್ನುವ ಮಾಹಿತಿ ಕೊಟ್ಟಿದ್ದಾರೆ. ಕೋಷ್ಟಕ–30ರಲ್ಲಿ ಸಮಿತಿಯ ರಚನೆಯಲ್ಲಿ ರೈತರಿಗೆ ಪ್ರಾತಿನಿಧ್ಯವಿದ್ದರೆ ಯಾರು ಯಾರಿಗೆ ಎನ್ನುವ ಪ್ರಶ್ನೆಗೆ ಹೊಸಳ್ಳಿ ಗ್ರಾಮದಲ್ಲಿ ಕ್ರಮವಾಗಿ, ಪ.ಜಾ., ಪ.ಪ., ಮಹಿಳೆ, ಸಾಮನ್ಯ, ಎಲ್ಲರಿಗೂ ಶೇ.11.67, ಶೇ.5, ಶೇ.3.33, ಶೇ.1.67, ಶೇ.78.33 ಎನ್ನುವ ಮಾಹಿತಿ ದೊರೆತರೆ, ಹೊನ್ನಳ್ಳಿ ಗ್ರಾಮದಲ್ಲಿ ಪ.ಜಾ. ಶೇ.1.67, ಪ.ಪಂ. ಶೇ.6.67, ಮಹಿಳೆ ಶೇ.3.33, ಸಾಮಾನ್ಯ ಶೇ1.67, ಎಲ್ಲರಿಗೂ ಶೇ.86.67 ಎನ್ನುವ ಮಾಹಿತಿಯು ಕಂಡುಬರುತ್ತದೆ. ಸಮಿತಿಯ ಅಧ್ಯಕ್ಷರಾಗಲು ಮತ್ತು ಉಪಾಧ್ಯಕ್ಷರಾಗಲು ರೈತರಿಗೆ ಅರ್ಹತೆ ಇದೆಯೇ, ಇಲ್ಲವೇ ಎನ್ನುವ ಪ್ರಶ್ನೆಗೆ ಕ್ರಮವಾಗಿ ಇದೆ, ಇಲ್ಲ ಮತ್ತು ಗೊತ್ತಿಲ್ಲ ಎನ್ನುವ ಉತ್ತರಗಳು ಈ ರೀತಿಯಾಗಿವೆ. ಶೇ.88.33, ಶೇ.8.33, ಮತ್ತು ಶೇ.3.33ರಷ್ಟು ಎನ್ನುವ ಅಂಕಿ– ಅಂಶಗಳು ಹೊಸಳ್ಳಿ ಗ್ರಾಮದಲ್ಲಿ ದೊರೆತಿದೆ. ಇನ್ನು ಹೊನ್ನಳ್ಳಿ ಗ್ರಾಮದಲ್ಲಿ ಇದೆ ಎಂದು ಶೇ.78.33ರಷ್ಟು ಇಲ್ಲ ಎಂದು ಶೇ.8.33ರಷ್ಟು ಮತ್ತು ಶೇ.13.33ರಷ್ಟು ರೈತರು ತಮಗೆ ಇದರ ಕುರಿತು ಮಾಹಿತಿ ಇರುವುದಿಲ್ಲ ಎನ್ನುವ ಅಂಶಗಳನ್ನು ಕೊಷ್ಟಕ–30ರಲ್ಲಿ ಕಾಣಬಹುದು.

**ಕೋಷ್ಟಕ–30**

**1966 ಸಮಿತಿಯ ರಚನೆಯಲ್ಲಿ ರೈತರಿಗೆ ಪ್ರಾತಿನಿಧ್ಯವಿರುವುದರ ವಿವರಗಳು**

| ಕ್ರ.ಸಂ. | ಸಮಿತಿಯ ರಚನೆಯಲ್ಲಿ ರೈತರ ಪ್ರಾತಿನಿಧ್ಯ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 49 | 81.67 | 48 | 80.00 |
| 2. | ಇಲ್ಲ | 4 | 6.67 | 9 | 15.00 |
| 3. | ಗೊತ್ತಿಲ್ಲ | 7 | 11.67 | 3 | 5.00 |
| | ಒಟ್ಟು | 60 | 100 | 60 | 100 |
| | ಸಮಿತಿಯಲ್ಲಿ ಮೀಸಲಾತಿ | | | | |
| 1. | ಪ. ಜಾ. | 7 | 11.67 | 1 | 1.67 |
| 2. | ಪ.ಪಂ. | 3 | 5.00 | 4 | 6.67 |
| 3. | ಮಹಿಳೆ | 2 | 3.33 | 2 | 3.33 |
| 4. | ಸಾಮಾನ್ಯ | 1 | 1.67 | 1 | 1.67 |
| 5. | ಎಲ್ಲರಿಗೂ | 47 | 78.33 | 52 | 86.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೋಷ್ಟಕ–31ರಲ್ಲಿ ರೈತರನ್ನು ಉದ್ದೇಶಿಸಿ ಸಮಿತಿಯು ಶಾಸನದ ನಿಯಮಾವಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸುತ್ತದೆಯೇ ಎನ್ನುವ ಪ್ರಶ್ನೆಯನ್ನು ಕೇಳಿದಾಗ, ಹೊಸಳ್ಳಿ ಗ್ರಾಮದಲ್ಲಿ ರೈತರೊಬ್ಬರು ಅದು ಹೇಗೆ ಹೇಳಬೇಕಮ್ಮ, ಸಮಿತಿ ರಚನೆಯಾದ ಮೇಲೆ ನಡೆಯಲೇ ಬೇಕಲ್ಲವೆ ಎನ್ನುತ್ತಾ ರೈತರು ಸಂಪೂರ್ಣವಾಗಿ ಸಮಿತಿ ಕಾರ್ಯ ನಿರ್ವಹಿಸುವುದಿಲ್ಲ ಎಂದು ಹೇಳಲಾಗದು, ತಕ್ಕ ಮಟ್ಟಿಗೆ ಕಾರ್ಯ ನಿರ್ವಹಿಸುತ್ತಿರಬಹುದು. ಆದರೂ ಎಷ್ಟೊ ರೈತರಿಗೆ ಸಮಿತಿಯ ರಚನೆ ಅದರ ಕಾರ್ಯಗಳ ಕುರಿತು ಮಾಹಿತಿ ಇರುವುದಿಲ್ಲ. ಹಾಗಾಗಿ ಸ್ಪಷ್ಟವಾಗಿ ಇಲ್ಲ ಎಂದು ಹೇಳಲಾಗದು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಒಟ್ಟಾರೆ ಹೊಸಳ್ಳಿ ಗ್ರಾಮದಲ್ಲಿ ಸಮಿತಿಯೂ ಸರಿಯಾಗಿ ಕಾರ್ಯನಿರ್ವಹಿಸುತ್ತದೆ ಎಂದು ಶೇ.76.67ರಷ್ಟು ರೈತರು ಅಭಿಪ್ರಾಯ ವ್ಯಕ್ತಪಡಿಸಿದರೆ, ಮೇಲಿನ ರೈತರು ಅಭಿಪ್ರಾಯಪಟ್ಟಂತೆ ಸಮಿತಿಯ ಕುರಿತು ಅಷ್ಟಾಗಿ ಮಾಹಿತಿ ಇಲ್ಲದ ರೈತರು ಹಾಗೂ ಕೆಲವರು ಸಮಿತಿಯ ಕುರಿತು ತಿಳಿದಿರುವ ರೈತರು ಸೇರಿ ಒಟ್ಟು ಶೇ.23.33ರಷ್ಟು ರೈತರು ಸಮಿತಿ ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲ

ಎನ್ನುವ ಅಂಕಿ-ಅಂಶಗಳನ್ನು ನಾವು ಕಾಣಬಹುದು. ಹೊನ್ನಳ್ಳಿ ಗ್ರಾಮದಲ್ಲಿ ಶೇ.51.67ರಷ್ಟು ರೈತರು ಸಮಿತಿ ಸರಿಯಾಗಿ ಕಾರ್ಯ ನಿರ್ವಹಿಸುತ್ತದೆ ಎಂದು ಮತ್ತು ಶೇ.48.33ರಷ್ಟು ರೈತರು ಸಮಿತಿ ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲ ಎನ್ನುವ ಮಾಹಿತಿಯು ದೊರೆತಿದೆ.

**ಕೋಷ್ಟಕ-31**

**ಕೃಷಿ ಮಾರುಕಟ್ಟೆಯಲ್ಲಿ ಸಮಿತಿಯು ಕಾರ್ಯನಿರ್ವಹಿಸುವುದರ ವಿವರಗಳು**

| ಕ್ರಸಂ. | ಸಮಿತಿಯ ಕಾರ್ಯ ನಿರ್ವಹಣೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ನಿರ್ವಹಿಸುತ್ತದೆ | 46 | 76.67 | 31 | 51.67 |
| 2. | ಇಲ್ಲ | 14 | 23.33 | 29 | 48.33 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಮಾರ್ಕೆಟಿಂಗ್ ಆಫ್ ಅಗ್ರಿಕಲ್ಚರಲ್ ಪ್ರೊಡ್ಯೂಸಸ್ ಇನ್ ಗುಲ್ಬರ್ಗ ಡಿವಿಜನ್ ಆಫ್ ಕರ್ನಾಟಕ್ ಬೈ ಭೋಗಪ್ಪ(1988) ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆಯ ಆಚರಣೆಯ ದೇಶದ ಮಾರುಕಟ್ಟೆಗಳಲ್ಲಿ ಒಂದೇ ರೀತಿಯಾಗಿರಬೇಕು, ಇದರಿಂದ ಮಾರುಕಟ್ಟೆಯು ಬೇಳೆಯುತ್ತದೆ ಮತ್ತು ದರಗಳಲ್ಲಿಯು ಕೂಡ ಒಂದೇ ತೆರನಾಗಿರರುವುದರಿಂದ ರೈತರಿಗಾಗುವ ಬೆಲೆ ನಷ್ಟವನ್ನು ತಪ್ಪಿಸಬಹುದು ಎಂದಿದ್ದಾರೆ. ಈ ರೀತಿಯಾದ ಹಲವು ಯೋಜನೆಗಳನ್ನು ಎಲ್ಲ ರಾಜ್ಯಗಳಲ್ಲಿ ಕೃಷಿ ಮಾರುಕಟ್ಟೆಯಲ್ಲಿ, ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಜಾರಿಗೆ ತರಬೇಕು. ಇದರಿಂದ ರೈತರಿಗೆ ಆಗುವ ನಷ್ಟವನ್ನು ತಪ್ಪಿಸಬಹುದು ಎಂದು ಹೇಳಿದ್ದಾರೆ. ಈ ಅಧ್ಯಯನದಲ್ಲಿ ಕೃಷಿ ಮಾರುಕಟ್ಟೆ ಕೆಲಸ ಕಾರ್ಯಗಳು ಸಮರ್ಪಕವಾಗಿ, ಅಂದರೆ ಯೋಜನೆಗಳನ್ನು ಸರಿಯಾಗಿ ನಿಭಾಯಿಸಬೇಕು ಎನ್ನುವುದಾಗಿದೆ. ಮುಂದಿನ ಕೋಷ್ಟಕ-32ರಲ್ಲಿ ಮೇಲಿನ ಪ್ರಶ್ನೆಗೆ ಪೂರಕವಾಗಿ ಸಮಿತಿ ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಎನ್ನುವುದಾದರೆ, ದೂರನ್ನು ಯಾರಿಗೆ ನೀಡಬೇಕು ಎನ್ನುವ ಪ್ರಶ್ನೆಗೆ ಹೊಸಳ್ಳಿ ಗ್ರಾಮದ ರೈತರಲ್ಲಿ, ಶೇ. 8.33ರಷ್ಟು ಮಂಡಲ ಪಂಚಾಯಿತಿಗೆ. ಶೇ.3.33ರಷ್ಟು ಸಮಿತಿಯ ಇತರೆ ಸದಸ್ಯರಿಗೆಂದು ಮತ್ತು ಶೇ.88.33ರಷ್ಟು ರೈತರು ಇಬ್ಬರಿಗೂ ಎಂದು, ಅಂದರೆ ಮಂಡಲ ಪಂಚಾಯಿತಿಗೆ ಮತ್ತು ಸಮಿತಿಯ ಇತರೆ ಸದಸ್ಯರಿಗೆಂದು ಉತ್ತರವನ್ನು ನೀಡಿದರು. ಇನ್ನು ಹೊನ್ನಳ್ಳಿ ಗ್ರಾಮದಲ್ಲಿ ಶೇ.46.67ರಷ್ಟು ರೈತರು ಮಂಡಲ

ಪಂಚಾಯಿತಿಗೆಂದು, ಶೇ.6.67ರಷ್ಟು ರೈತರು ಸಮಿತಿಯ ಇತರ ಸದಸ್ಯರಿಗೆಂದು ಹಾಗೂ ಶೇ.46.67ರಷ್ಟು ರೈತರು ಇಬ್ಬರಿಗೂ ಎನ್ನುವ ಉತ್ತರವನ್ನು ಕೊಟ್ಟಿದ್ದಾರೆ. ಮೇಲಿನ ಅಂಶಗಳನ್ನು ವಿಶ್ಲೇಷಿಸುವುದಾದರೆ, ಹೊನ್ನಳ್ಳಿ ಗ್ರಾಮದಲ್ಲಿ ಹೆಚ್ಚಿನ ರೈತರು ಇಬ್ಬರಿಗೂ ಎನ್ನುವ ಸರಿಯಾದ ಮಾಹಿತಿಯನ್ನು ನೀಡಿದ್ದಾರೆ. ಇದಕ್ಕೆ ಕಾರಣವನ್ನು ನೋಡುವುದಾದರೆ ಗ್ರಾಮದಲ್ಲಿ ಹೆಚ್ಚಿನ ರೈತರು ವಿದ್ಯಾವಂತರಾಗಿದ್ದಾರೆ ಎನ್ನುವುದನ್ನು ಗಮನಿಸಬಹುದು.

ಹಾಗೆಯೇ ಮುಂದಿನ ಪ್ರಶ್ನೆ, ಸಮಿತಿಯ ಕಾರ್ಯಗಳು ಯಾವುವು ಎಂದು ರೈತರನ್ನು ಕೇಳಿದರೆ, ಅದರಲ್ಲಿ ಹೆಚ್ಚಿನ ರೈತರು ಹಾಗೆಂದರೆ ಏನು ಎಂದು ನಮ್ಮನ್ನೇ ಮರುಪ್ರಶ್ನೆ ಮಾಡಿದರು. ಕಾರ್ಯಗಳ ಪಟ್ಟಿಯನ್ನು ಬಿಡಿಸಿ ಒಂದೊಂದಾಗಿ ಹೇಳಿದಾಗ, ಅವುಗಳಲ್ಲಿ ಕೆಲವು ಕಾರ್ಯಗಳು ಸಮಿತಿಯ ಮುಖ್ಯವಾದ ಕಾರ್ಯಗಳೆಂದು ಹೇಳಿದರು. ಅದರಲ್ಲಿ ಶೇ.25.00ರಷ್ಟು ರೈತರು ಮಾರಾಟ ಮಾಡಲು ಅನುಕೂಲ ಮಾಡಿಕೊಡುವುದು ಮತ್ತು ರೈತರ ವ್ಯಾಜ್ಯಗಳನ್ನು ಬಗೆಹರಿಸುವುದು ಎನ್ನುವುದಾಗಿತ್ತು. ಶೇ. 16.67ರಷ್ಟು ರೈತರು ಸ್ಪರ್ಧಾತ್ಮಕ ಬೆಲೆಗಳನ್ನು ಕೊಡುವುದು/ ಬಹಿರಂಗ ಹರಾಜು ಮತ್ತು ಟೆಂಡರ್‌ಗಳನ್ನು ಅಳವಡಿಸುವುದು ಎನ್ನುವ ಮಾಹಿತಿಯನ್ನು ನೀಡಿದರು. ಮತ್ತು ಶೇ.58.33ರಷ್ಟು ಮೇಲಿನ ಎರಡು ಪದ್ಧತಿಗಳೆಂದು ತಮಗೆ ಗೊತ್ತಿರುವ ಮಾಹಿತಿಯನ್ನು ಹೊಸಳ್ಳಿ ಗ್ರಾಮದಲ್ಲಿ ರೈತರು ತಿಳಿಸಿದರು. ಹೊನ್ನಳ್ಳಿ ಗ್ರಾಮದಲ್ಲಿ ಶೇ.11.67ರಷ್ಟು ರೈತರು ಮಾರಾಟ ಮಾಡಲು ಅನೂಕೂಲ ಮಾಡಿಕೊಡುವುದು ಮತ್ತು ರೈತರ ವ್ಯಾಜ್ಯಗಳನ್ನು ಬಗೆಹರಿಸುವುದಾದರೆ, ಶೇ.16.67ರಷ್ಟು ರೈತರು ಸ್ಪರ್ಧಾತ್ಮಕ ಬೆಲೆಗಳನ್ನು ಕೊಡುವುದು/ಬಹಿರಂಗ ಹರಾಜು ಮತ್ತು ಟೆಂಡರ್‌ಗಳನ್ನು ಅಳವಡಿಸುವುದು ಎಂದು ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.71.67ರಷ್ಟು ರೈತರು ಮೇಲಿನ ಎರಡು ಅಂಶಗಳು ಸಮಿತಿಯ ಕಾರ್ಯಗಳು ಎನ್ನುವ ಮಾಹಿತಿಯನ್ನು ವ್ಯಕ್ತಪಡಿಸಿದರು. ಒಟ್ಟಾರೆ ನೋಡುವುದಾದರೆ ಎರಡು ಗ್ರಾಮಗಳಲ್ಲಿ ಹೊನ್ನಳ್ಳಿ ಗ್ರಾಮದ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಸರಿಯಾದ ಉತ್ತರವನ್ನು ನೀಡಿದ್ದಾರೆ.

ಕೋಷ್ಟಕ–32

ಸಮಿತಿಯ ಕಾರ್ಯ ನಿರ್ವಹಣೆಯ ವಿವರಗಳು

| ಕ್ರ ಸಂ. | ದೂರನ್ನು ನೀಡುವುದು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಮಂಡಲ ಪಂಚಾಯ್ತಿಗೆ | 5 | 8.33 | 28 | 46.67 |
| 2. | ಸಮಿತಿಯ ಇತರ ಸದಸ್ಯರಿಗೆ | 2 | 3.33 | 4 | 6.67 |
| 3. | ಇಬ್ಬರಿಗೆ | 53 | 88.33 | 28 | 46.67 |
| | ಒಟ್ಟು | 60 | 100 | 60 | 100 |
| | ಸಮಿತಿಯು ಕಾರ್ಯಗಳು<br>ರೈತರಿಗೆ ಮಾರಾಟ ಮಾಡಲು ಅನುಕೂಲ | | | | |
| 1. | ಮಾಡಿಕೊಡುವುದು/ರೈತರಿಗೆ ಸ್ಪಂದಿಸುವುದು, ವ್ಯಾಜ್ಯಗಳನ್ನು ಬಗೆಹರಿಸುವುದು. | 15 | 25.00 | 7 | 11.67 |
| 2. | ಸ್ಪರ್ಧಾತ್ಮಕ ಬೆಲೆಗಳನ್ನು ಕೊಡುವುದು, ಬಹಿರಂಗ ಹಾರಾಜು ಮತ್ತು ಟೆಂಡರ್ ಗಳನ್ನು ಅಳವಡಿಸುವುದು | 10 | 16.67 | 10 | 16.67 |
| 3. | ಮೇಲಿನ ಎರಡು | 35 | 58.33 | 43 | 58.33 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

ಮೇಲಿನ ಭಾಗದಲ್ಲಿ ಸಂಕ್ಷಿಪ್ತವಾಗಿ ಕೃಷಿ ಉತ್ಪನ್ನ ಮಾರುಕಟ್ಟೆಯ ಶಾಸನ 1966ರ ಕಾರ್ಯಗಳನ್ನು ಕ್ಷೇತ್ರಕಾರ್ಯದಿಂದ ಕಲೆ ಹಾಕಿದ ಮಾಹಿತಿಯಾಧಾರದ ಮೇಲೆ ವಿಶ್ಲೇಷಿಸಲಾಗಿದೆ. ಕೃಷಿ ಉತ್ಪನ್ನ ಮಾರುಕಟ್ಟೆಯ ಕುರಿತು, ಸಮಿತಿಯ ರಚನೆಯ ಕುರಿತು, ಸಮಿತಿಯ ಪ್ರಾಂಗಣದಲ್ಲಿ ಮಾಡಲಾಗುತ್ತಿರುವ ಕಾರ್ಯಗಳ ಕುರಿತು ಹೊಸಳ್ಳಿ ಮತ್ತು ಹೊನ್ನಳ್ಳಿ ಗ್ರಾಮಗಳಲ್ಲಿ ನೋಡುವುದಾದರೆ, ಹೊನ್ನಳ್ಳಿ ಗ್ರಾಮದ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಮಾರುಕಟ್ಟೆಯ ಸಂಬಂಧಪಟ್ಟ ಮಾಹಿತಿಯನ್ನು ತಿಳಿದುಕೊಂಡಿರುತ್ತಾರೆ ಎನ್ನುವ ಅಂಶ ಬೆಳಕಿಗೆ ಬಂದಿದೆ. ಗ್ರಾಮಗಳಲ್ಲಿ ಸಮಿತಿಯ ಕಾರ್ಯಗಳು ಯಾವುವು ಎಂದು ರೈತರನ್ನು ಪ್ರಶ್ನಿಸಿದಾಗ ಎರಡು ಗ್ರಾಮಗಳಲ್ಲಿ

ಅಷ್ಟಾಗಿ ತಮಗೆ ತಿಳಿಯದು ಎಂದು ಮೊದಲಿಗೆ ಹೇಳಿದರೂ, ಸಂಕ್ಷಿಪ್ತವಾಗಿ ಅಧ್ಯಯನದ ಪ್ರಶ್ನೆ ಮತ್ತು ಉತ್ತರವನ್ನು ಅರ್ಥವಾಗುವ ರೀತಿಯಲ್ಲಿ ವಿವರಿಸಿದಾಗ ರೈತರು ಆಸಕ್ತಿದಾಯಕವಾಗಿಯೇ ಪ್ರತಿಕ್ರಿಯಿಸಿದರು. ಆದರೂ ರೈತರ ಮಾತಿನಲ್ಲಿ ಒಂದು ಕೊರಗೂ ಎದ್ದು ಕಾಣುತ್ತಿತ್ತು. ಕೆಲವು ರೈತರು ಸ್ವತಃ ನನ್ನನ್ನೇ ಪ್ರಶ್ನಿಸಿದರು. ಮಾರುಕಟ್ಟೆಯ ಕುರಿತಾಗಿ ಕಾನೂನಿನಲ್ಲಿ ಇರುವಂತೆ ಎಲ್ಲವೂ ಚಾಚೂ ತಪ್ಪದೆ ನಡೆದರೆ ಯಾವೊಬ್ಬ ರೈತರು ತಾವು ಬೆಳೆದ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ನಷ್ಟ ಅನುಭವಿಸಲು ಸಾಧ್ಯವೇ ಎಂದರು. ಹೀಗೆ ರೈತರಿಗೆ ಮಾರುಕಟ್ಟೆಯ ಕಾರ್ಯಗಳು ಸಮರ್ಪಕವಾದ ಬೆಂಬಲವನ್ನು ನೀಡುತ್ತಿಲ್ಲ ಎನ್ನುವುದನ್ನು ಪರೋಕ್ಷವಾಗಿ ರೈತರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಮುಂದಿನ ಕೋಷ್ಟಕ-33ರಲ್ಲಿ ಕೃಷಿ ಮಾರುಕಟ್ಟೆಯ ಪ್ರಾಂಗಣದಲ್ಲಿ ಒದಗಿಸಿರುವ ಸೌಲಭ್ಯಗಳು, ಮಾರುಕಟ್ಟೆಯಲ್ಲಿ ಮೂಲಭೂತ ಸೌಲಭ್ಯಗಳಾದ ನೀರಿನ ವ್ಯವಸ್ಥೆ, ಕೊಠಡಿ ವ್ಯವಸ್ಥೆ, ಬ್ಯಾಂಕ್ ಮತ್ತು ಅಂಚೆ ತಂತಿಯ ಹಾಗೂ ಇತರೆ ಸೇವೆ ಸೌಲಭ್ಯಗಳನ್ನು ಚರ್ಚಿಸಲಾಗಿದೆ. ಕೋಷ್ಟಕ ದಲ್ಲಿ ಸಂಪೂರ್ಣವಾದ ಮಾರುಕಟ್ಟೆಯ ಚಿತ್ರಣವನ್ನು ಪ್ರಶ್ನಾವಳಿಯ ಮೂಲಕ ಚಿತ್ರಿಸಿ ಪ್ರಶ್ನೆಗಳನ್ನು ರೈತರಿಗೆ ಕೇಳಲಾಗಿದೆ ಮತ್ತು ಬಂದ ಅಂಕಿ-ಅಂಶಗಳನ್ನು ವಿಶ್ಲೇಷಿಸಲಾಗಿದೆ. ರೈತರನ್ನು ಕೃಷಿ ಉತ್ಪನ್ನ ಮಾರುಕಟ್ಟೆಗಾಗಿ ಬಹಿರಂಗ ಹರಾಜುಕಟ್ಟೆಗಳು ಇವೆಯೇ ಎಂದು ಪ್ರಶ್ನಿಸಿದಾಗ ಸಂಡೂರಿನ ಹೊಸಳ್ಳಿ ಗ್ರಾಮದಲ್ಲಿ ಮಾರುಕಟ್ಟೆಯಲ್ಲಿ ಬಹಿರಂಗ ಹರಾಜುಕಟ್ಟೆಗಳು ಇವೆ ಎಂದು ಶೇ.93.33ರಷ್ಟು ಹೇಳಿದರೆ, ಇಲ್ಲ ಎಂದು ಕೇವಲ ಶೇ.5.00ರಷ್ಟು ರೈತರು ಮಾತ್ರವೇ ಹೇಳಿದ್ದಾರೆ. ತಮಗೆ ಮಾರುಕಟ್ಟೆಯ ಬಹಿರಂಗ ಹರಾಜುಕಟ್ಟೆ ಕುರಿತು ಮಾಹಿತಿ ಗೊತ್ತಿಲ್ಲ ಎಂದು ಶೇ.1.67ರಷ್ಟು ರೈತರು ಮಾತ್ರವೇ ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.91.67ರಷ್ಟು ರೈತರಿಗೆ ಮಾರುಕಟ್ಟೆಯಲ್ಲಿ ಬಹಿರಂಗ ಹರಾಜುಕಟ್ಟೆಗಳು ಇವೆ ಎಂದು, ಶೇ.3.33ರಷ್ಟು ರೈತರು ಮಾರುಕಟ್ಟೆಯಲ್ಲಿ ಬಹಿರಂಗ ಹರಾಜು ಕಟ್ಟೆಗಳು ಇಲ್ಲ ಎಂದು ಮತ್ತು ಶೇ.5.00ರಷ್ಟು ರೈತರು ತಮಗೆ ಗೊತ್ತಿಲ್ಲ ಎನ್ನುವ ಅಂಶವನ್ನು ತಿಳಿಸಿದರು.

ಮಾರುಕಟ್ಟೆಗಳು ಇವೆಯಾದರೆ ಸುಸಜ್ಜಿತವಾಗಿವೆಯೇ ಎಂದು ಮರು ಪ್ರಶ್ನೆಯನ್ನು ಹೊಸಳ್ಳಿ ಗ್ರಾಮದ ಆಯ್ದ ರೈತರನ್ನು ಕೇಳಿದಾಗ ಒಟ್ಟು ರೈತರಲ್ಲಿ 10 ಮಂದಿ ರೈತರು(10/60*100 =ಶೇ16.67) ಸುಸಜ್ಜಿತವಾಗಿವೆ ಎಂದರೆ, 42 ರೈತರು(42/60*100=ಶೇ70.00) ಸುಸಜ್ಜಿತವಾಗಿಲ್ಲ ಎಂದು ಮತ್ತು 8 (8/60*100) ರೈತರು ತಮಗೆ ಗೊತ್ತಿಲ್ಲ ಎನ್ನುವ ಉತ್ತರವನ್ನು ನೀಡಿದರು. ಹೊನ್ನಳ್ಳಿ ಗ್ರಾಮದಲ್ಲಿ 8 (8/60*100) ರೈತರು ಹರಾಜುಕಟ್ಟೆಗಳು ಸುಸಜ್ಜಿತವಾಗಿವೆ ಎಂದರೆ, 50 (50/60*100) ರೈತರು ಸುಸಜ್ಜಿತವಾಗಿಲ್ಲ ಎಂದು, ಮತ್ತು 2

(2/60*100) ರೈತರು ತಮಗೆ ಗೊತ್ತಿಲ್ಲ ಎಂದು ತಿಳಿಸಿದರು. ಇದಕ್ಕೆ ಪೂರಕವಾದ ಲೇಖನ, 'ಅನ್ನದಾತ ಅಸುಖಿ'ಯಲ್ಲಿ ಎಂ.ಚಂದ್ರ ಪೂಜಾರಿಯವರು ರೈತರಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಮಾರುಕಟ್ಟೆಯಲ್ಲಿ ಸಮರ್ಪಕವಾಗಿ ಒದಗಿಸಿದಲ್ಲಿ, ರೈತರು ಮಾರುಕಟ್ಟೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ದೊರೆತರೆ ರೈತರ ಆತ್ಮಹತ್ಯೆಯಂತಹ ಕೃತ್ಯಗಳು ಕಡಿಮೆಯಾಗುತ್ತವೆ. ದೇಶದಲ್ಲಿ ರೈತರ ಆತ್ಮಹತ್ಯೆಗಳು ಎಲ್‌ಪಿಜಿ ಬರುವ ಮುಂಚೆ ಶೇ.14%ರಷ್ಟಿದ್ದು, 2011ರ ವೇಳೆಗೆ ಶೇ.16%ರಷ್ಟಾಗಿದೆ ಎನ್ನುವ ಅಂಕಿ ಅಂಶಗಳನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ.

**ಕೋಷ್ಟಕ–33**

**ಕೃಷಿ ಮಾರುಕಟ್ಟೆಯಲ್ಲಿರುವ ಮೂಲಭೂತ ಸೌಲಭ್ಯಗಳ ವಿವರಗಳು**

| ಕ್ರ.ಸಂ. | ಬಹಿರಂಗ ಹಾರಾಜು ಕಟ್ಟೆಗಳು | ಸಂಡೂರು ತಾಲೂಕಿನ ಹೊಸಳ್ಳಿ ಗ್ರಾಮ | | ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 56 | 93.33 | 55 | 91.67 |
| 2. | ಇಲ್ಲ | 3 | 5.00 | 2 | 3.33 |
| 3. | ಗೊತ್ತಿಲ್ಲ | 1 | 1.67 | 3 | 5.00 |
| | ಒಟ್ಟು | 60 | 100 | 60 | 100 |
| | ಹರಾಜು ಕಟ್ಟೆಗಳ ನಿರ್ವಹಣೆ | | | | |
| 1. | ಸುಸಜ್ಜಿತವಾಗಿವೆ | 10 | 16.67 | 8 | 13.33 |
| 2. | ಸುಸಜ್ಜಿತವಾಗಿಲ್ಲ | 42 | 70.00 | 50 | 83.33 |
| 3. | ಗೊತ್ತಿಲ್ಲ | 8 | 13.33 | 2 | 3.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ**

ಮುಂದಿನ ಭಾಗದಲ್ಲಿ ಮಾರುಕಟ್ಟೆಗೆ ಸಂಬಂಧಿಸಿದಂತೆ ಪ್ರಶ್ನೆಯನ್ನು ವಿಶ್ಲೇಷಿಸಿದ್ದೇನೆ, ಪ್ರಶ್ನೆಗೆ ಪೂರಕವಾದ ಮಾಹಿತಿ ನೀಡಿದ ಒಬ್ಬ ತಜ್ಞರ ಅಭಿಪ್ರಾಯವನ್ನು ನೋಡೋಣ. ಇವರು ಅರ್ಥಶಾಸ್ತ್ರಜ್ಞರು ಇವರನ್ನು ದಿನಾಂಕ 20/04/2012ರಂದು ಭೇಟಿ ಮಾಡಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಯಿತು. ಇವರು ಹೇಳುವ ಪ್ರಕಾರ ಕೃಷಿ ಮಾರುಕಟ್ಟೆಯು ಇತರೆ ಮಾರುಕಟ್ಟೆಗಳಿಗಿಂತ ಭಿನ್ನವಾಗಿರುತ್ತದೆ. ಏಕೆಂದರೆ ಇಲ್ಲಿ ಅನೇಕ ಕೃಷಿಕರು ಅವಿದ್ಯಾವಂತರಾಗಿರುತ್ತಾರೆ. ಮತ್ತು ರೈತರಿಗೆ ಅನೇಕ ಸಲ ಮಾರುಕಟ್ಟೆಯ ನಿಯಮಗಳ ಸರಿಯಾದ ಮಾಹಿತಿಯೇ

ಇರುವುದಿಲ್ಲ. ಎಷ್ಟೋ ಸಲ ರೈತರು ಹೇಗೆ ವೈಜ್ಞಾನಿಕವಾಗಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುವುದು ಮತ್ತು ಮಾರುಕಟ್ಟೆಯಲ್ಲಿ ಬೆಳೆದ ಹುಟ್ಟುವಳಿಗಳಿಗೆ ಹೇಗೆ ವೈಜ್ಞಾನಿಕವಾಗಿ ಬೆಲೆಗಳನ್ನು ಪಡೆಯುವುದು ಎಂಬುದು ತಿಳಿದಿರುವುದಿಲ್ಲ. ಅಲ್ಲದೆ ರೈತರು ಸಾಲ ಮಾಡಿ ಬೆಳೆದ ಫಸಲಿಗೆ ಸರಿಯಾದ ಬೆಲೆ ಸಿಗದೆ ಸರ್ಕಾರ ನಿರ್ಧರಿಸಿದ ಬೆಂಬಲ ಬೆಲೆಯಲ್ಲಿಯೂ ಅನೇಕ ಸಲ ದಲ್ಲಾಳಿಗಳ ಮಧ್ಯ ಪ್ರವೇಶದಿಂದಾಗಿ ನಷ್ಟ ಅನುಭವಿಸುತ್ತಿದ್ದಾರೆ ಎಂದು ತಮ್ಮ ಅನುಭವವನ್ನು ತಿಳಿಸಿದ್ದಾರೆ. ಅನೇಕ ಕಡೆ ಈ ಕೃಷಿ ಮಾರುಕಟ್ಟೆಗಳು ಕೇವಲ ನಾಮ ಮಾತ್ರವಾಗಿದ್ದು ಅದರಲ್ಲೂ ತಾಲೂಕು ಮಟ್ಟಗಳಲ್ಲಿ ಮಾರುಕಟ್ಟೆಗಳ ಇರುವಿಕೆಯೇ ಅನೇಕ ಕೃಷಿಕರಿಗೆ ತಿಳಿದಿರುವುದಿಲ್ಲ. ಕೆಲವು ಕಡೆ ಮಾರುಕಟ್ಟೆಗಳಿದ್ದರೂ ಮಾರುಕಟ್ಟೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಎದ್ದು ಕಾಣುತ್ತದೆ. ಉದಾಹರಣೆಗೆ ಉಗ್ರಾಣಗಳು, ಶೀಥಲೀಕರಣ ಘಟಕಗಳು ಇತ್ಯಾದಿ ಎಂಬುದನ್ನು ತಿಳಿಸಿದ್ದಾರೆ. ಹೀಗೆ ಕೃಷಿ ಮಾರುಕಟ್ಟೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಹೆಚ್ಚಾಗಿವೆ ಎನ್ನುವ ಅಂಶಗಳು ಕಾಣಸಿಗುತ್ತವೆ.

ಕೆಳಗಿನ ಕೋಷ್ಟಕ: 34ರಲ್ಲಿ ಕ್ಷೇತ್ರಕಾರ್ಯದ ಮುಂದಿನ ಪ್ರಶ್ನೆ ಮಾರುಕಟ್ಟೆಯ ಹರಾಜುಕಟ್ಟೆಗಳು ವೈಜ್ಞಾನಿಕವಾಗಿವೆಯೇ ಎಂದು ರೈತರನ್ನು ಹೊಸಳ್ಳಿಯಲ್ಲಿ ಪ್ರಶ್ನಿಸಿದಾಗ ವೈಜ್ಞಾನಿಕವಾಗಿವೆ ಎಂದು ಶೇ.38.33ರಷ್ಟು ರೈತರು ಅಭಿಪ್ರಾಯಪಟ್ಟಿದ್ದಾರೆ. ಶೇ.41.67ರಷ್ಟು ರೈತರು ವೈಜ್ಞಾನಿಕವಾಗಿಲ್ಲ ಎಂದು, ಶೇ.20.00ರಷ್ಟು ರೈತರು ಗೊತ್ತಿಲ್ಲ ಎಂದು ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಮಾರುಕಟ್ಟೆಯ ಹರಾಜುಕಟ್ಟೆಗಳು ವೈಜ್ಞಾನಿಕವಾಗಿವೆ ಎಂದು ಶೇ.26.67ರಷ್ಟು ರೈತರು ಹೇಳಿದರೆ, ವೈಜ್ಞಾನಿಕವಾಗಿಲ್ಲ ಎಂದು ಶೇ.63.33ರಷ್ಟು ರೈತರು ಹೇಳಿದ್ದಾರೆ. ಗೊತ್ತಿಲ್ಲ ಎಂದು ಶೇ.10.00ರಷ್ಟು ರೈತರು ಹೇಳಿದ್ದಾರೆ. ಮಾರುಕಟ್ಟೆಯಲ್ಲಿ ಹಿಡುವಳಿಗಳ ವರ್ಗೀಕರಣ ಸೌಲಭ್ಯವಿದೆಯೇ ಎಂದು ರೈತರನ್ನು ಪ್ರಶ್ನಿಸಿದಾಗ ಹೊಸಳ್ಳಿಯಲ್ಲಿ ದೊರೆತ ಅಂಕಿ-ಅಂಶಗಳು ಇಂತಿವೆ. ವರ್ಗೀಕರಣ ಸೌಲಭ್ಯಗಳು ಇವೆ ಎಂದು ಶೇ.46.67ರಷ್ಟು ರೈತರು, ಇಲ್ಲ ಎಂದು ಶೇ.31.67ರಷ್ಟು ರೈತರು ಹಾಗೂ ಗೊತ್ತಿಲ್ಲ ಎಂದು ಶೇ.21.67ರಷ್ಟು ರೈತರು ತಿಳಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.80 ರಷ್ಟು ರೈತರು ಇದೆ ಎಂದರೆ, ಶೇ.6.67ರಷ್ಟು ರೈತರು ಇಲ್ಲ ಎಂದು ಮತ್ತು ಶೇ.13.33ರಷ್ಟು ರೈತರು ತಮಗೆ ಮಾಹಿತಿ ಗೊತ್ತಿಲ್ಲ ಎನ್ನುವ ವಿಚಾರವನ್ನು ವ್ಯಕ್ತಪಡಿಸಿದ್ದಾರೆ.

### ಕೋಷ್ಟಕ-34

**ಮಾರುಕಟ್ಟೆಯಲ್ಲಿ ಒದಗಿಸಿರುವ ಹರಾಜು ಕಟ್ಟೆಗಳ ಮತ್ತು ವರ್ಗೀಕರಣ ಸೌಲಭ್ಯಗಳು**

| ಕ್ರ ಸಂ. | ಹರಾಜು ಕಟ್ಟೆಗಳ ವೈಜ್ಞಾನಿಕತೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ವೈಜ್ಞಾನಿಕವಾಗಿವೆ | 23 | 38.33 | 16 | 26.67 |
| 2 | ವೈಜ್ಞಾನಿಕವಾಗಿಲ್ಲ | 25 | 41.67 | 38 | 63.33 |
| 3 | ಗೊತ್ತಿಲ್ಲ | 12 | 20.00 | 6 | 10.00 |
| | ಒಟ್ಟು | 60 | 100 | 60 | 100 |
| | ಹಿಡುವಳಿಗಳ ವರ್ಗೀಕರಣ | | | | |
| 1 | ಇದೆ | 28 | 46.67 | 48 | 80.00 |
| 2 | ಇಲ್ಲ | 19 | 31.67 | 4 | 6.67 |
| 3 | ಗೊತ್ತಿಲ್ಲ | 13 | 21.67 | 8 | 13.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಕೆಳಗಿನ ಕೋಷ್ಟಕ-35ರಲ್ಲಿ ಮಾರುಕಟ್ಟೆಯಲ್ಲಿ ಹಿಡುವಳಿಗಳ ವರ್ಗಿಕರಣ ಸೌಲಭ್ಯಗಳು ಯಾವ ರೀತಿಯಾಗಿವೆ ಎಂದಾಗ ಹೊಸಳ್ಳಿ ಗ್ರಾಮದಲ್ಲಿ ವ್ಯವಸ್ಥಿತವಾಗಿದೆ ಎಂದು ಶೇ.78.33 ರಷ್ಟು ರೈತರು ಹೇಳಿದರೆ, ವ್ಯವಸ್ಥಿತವಾಗಿಲ್ಲ ಎಂದು ಶೇ.21.67ರಷ್ಟು ರೈತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹೊನ್ನಳ್ಳಿ ಗ್ರಾಮದಲ್ಲಿ, ವ್ಯವಸ್ಥಿತವಾಗಿದೆ ಎಂದು ಶೇ.95.00ರಷ್ಟು ರೈತರು ಹೇಳಿದರೆ, ವ್ಯವಸ್ಥಿತವಾಗಿಲ್ಲ ಎಂದು ಕೇವಲ ಶೇ.5.00ರಷ್ಟು ರೈತರು ತಿಳಿಸಿದ್ದಾರೆ. ಒಟ್ಟಾರೆ ಮಾರುಕಟ್ಟೆಯಲ್ಲಿ ಹಿಡುವಳಿಗಳ ವರ್ಗೀಕರಣ ಸೌಲಭ್ಯಗಳು ಇವೆ ಎನ್ನುವ ಮಾಹಿತಿಯನ್ನು ರೈತರು ತಿಳಿಸಿದ್ದಾರೆ.

ಕೋಷ್ಟಕ–35

ಮಾರುಕಟ್ಟೆಯಲ್ಲಿ ಹಿಡುವಳಿಗಳ ವರ್ಗೀಕರಣ ಸೌಲಭ್ಯದ ವಿವರಗಳು

| ಕ್ರ ಸಂ. | ಹಿಡುವಳಿಗಳ ವರ್ಗೀಕರಣ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ವ್ಯವಸ್ಥಿತವಾಗಿದೆ | 47 | 78.33 | 57 | 95.00 |
| 2. | ವ್ಯವಸ್ಥಿತವಾಗಿಲ್ಲ | 13 | 21.67 | 3 | 5.00 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಪ್ರಿಲಿಮಿನರಿ ಅಧ್ಯಯನದಲ್ಲಿ ನೋಡುವುದಾದರೆ ರೈತರ ಅಭಿಪ್ರಾಯದ ಪ್ರಕಾರ ಅನೇಕ ಕೃಷಿ ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ಒಣಗಿಸಲು ಸರಿಯಾದ ವ್ಯವಸ್ಥೆ ಇರುವುದಿಲ್ಲ ಎನ್ನುವುದಿದೆ. ಕೆಳಗಿನ ಕೋಷ್ಟಕ–35ರಲ್ಲಿ ಮಾರುಕಟ್ಟೆಯ ಪ್ರಾಂಗಣದಲ್ಲಿ ಒಣಗಿಸುವ ಸೌಲಭ್ಯವಿದೆಯೇ ಎಂದಾಗ ಹೊಸಳ್ಳಿಯಲ್ಲಿ ಇದೆ ಎಂದು ಶೇ.57.00ರಷ್ಟು ರೈತರು, ಇಲ್ಲ ಎಂದು ಶೇ.3.33ರಷ್ಟು ರೈತರು ಮತ್ತು ಗೊತ್ತಿಲ್ಲ ಎಂದು ಶೇ.1.67ರಷ್ಟು ರೈತರು ಅಭಿಪ್ರಾಯ ವ್ಯಕ್ತಪಡಿಸಿದರೆ, ಹೊನ್ನಳ್ಳಿ ಗ್ರಾಮದಲ್ಲಿ ಒಣಗಿಸುವ ಸೌಲಭ್ಯವಿದೆ ಇದೆ ಎಂದು ಶೇ.95.00ರಷ್ಟು ರೈತರು ಮತ್ತು ಇಲ್ಲ ಎಂದು ಶೇ.3.33ರಷ್ಟು ರೈತರು ಹಾಗೂ ಗೊತ್ತಿಲ್ಲ ಎಂದು ಶೇ.1.67ರಷ್ಟು ರೈತರು ಮಾತ್ರವೇ ತಿಳಿಸಿದ್ದಾರೆ. ಪ್ರಸ್ತುತ ಪ್ರಶ್ನೆಯಲ್ಲಿ ರೈತರ ಅಭಿಪ್ರಾಯ ನೋಡುವುದಾದರೆ, ಹೆಚ್ಚು ಕಡಿಮೆ ಎರಡು ಗ್ರಾಮಗಳಲ್ಲಿಯೂ ಒಂದೇ ತೆರನಾದ ಉತ್ತರಗಳು ದೊರೆತಿವೆ. ಪ್ರಾಂಗಣದಲ್ಲಿ ಹುಟ್ಟುವಳಿಗಳನ್ನು ಒಣಗಿಸುವ ಸೌಲಭ್ಯವಿದ್ದಲ್ಲಿ ಯಾವ ಯಾವ ಸೌಲಭ್ಯಗಳನ್ನು ಕಾಣಬಹುದು ಎಂದು ಹೊಸಳ್ಳಿಯಲ್ಲಿ ರೈತರನ್ನು ಪ್ರಶ್ನಿಸಿದಾಗ, ಕ್ರಮವಾಗಿ ಸ್ವಚ್ಛಗೊಳಿಸುವ ಯಂತ್ರ, ಒಣಗಿಸುವ ಯಂತ್ರ, ಮಾರುಕಟ್ಟೆಯ ಬಯಲಿನಲ್ಲಿ ಒಣಗಿಸುವುದು ಎಂದು ಶೇ.3.33, ಶೇ.1.67 ಮತ್ತು ಶೇ.95.00ರಷ್ಟು ರೈತರು ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಸ್ವಚ್ಛಗೊಳಿಸುವ ಯಂತ್ರ ಎಂದು ಶೇ.1.67ರಷ್ಟು ರೈತರು, ಒಣಗಿಸುವ ಯಂತ್ರವೆಂದು ಶೇ.3.33ರಷ್ಟು ರೈತರು ಮತ್ತು ಮಾರುಕಟ್ಟೆಯ ಬಯಲಿನಲ್ಲಿ ಒಣಗಿಸುವುದು ಎಂದು ಶೇ.95.00ರಷ್ಟು ರೈತರು ತಮ್ಮ ಅನುಭವವನ್ನು ತಿಳಿಸಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಕುಮಾರಸ್ವಾಮಿ ಎನ್ನುವ ಸಣ್ಣ ರೈತರು ತಮ್ಮ ಅನುಭವವನ್ನು ಹಂಚಿಕೊಂಡರು. ಎಷ್ಟೋ ಸಲ ಬಳ್ಳಾರಿಗೆ ಮಾರಲು ತೆಗೆದುಕೊಂಡು ಹೋದ ಉತ್ಪನ್ನಗಳನ್ನು ಒಣಗಿಸಲು ಮಾರುಕಟ್ಟೆಯ ಆವರಣದಲ್ಲಿ ಜಾಗದ ಅಭಾವವು ಉಂಟಾಗುತ್ತದೆ. ಹಾಗಾಗಿ ಒಬ್ಬ ರೈತರ ಉತ್ಪನ್ನಗಳನ್ನು ಒಣಗಿಸಿ ಚೀಲಕ್ಕೆ ತುಂಬಿದ ನಂತರ ಸರದಿಯ ಪ್ರಕಾರ

ಇನ್ನೊಬ್ಬರ ಉತ್ಪನ್ನಗಳನ್ನು ಒಣಗಿಸಲಾಗುತ್ತದೆ. ಹಾಗೆಯೇ ಇನ್ನೊಂದು ಸಂತೋಷದ ವಿಚಾರವೆಂದರೆ, ಇತ್ತೀಚೆಗಷ್ಟೇ ಬಳ್ಳಾರಿ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ವರ್ಗೀಕರಣದ ಸೌಲಭ್ಯ ಶುರುವಾಗಿದೆ ಎಂಬ ಪ್ರಶ್ನೆಗೆ ಪೂರಕವಾದ ಮಾಹಿತಿಯನ್ನು ವಿವರಿಸಿದರು.

**ಕೋಷ್ಟಕ–36**

**ಮಾರುಕಟ್ಟೆಯಲ್ಲಿ ಒಣಗಿಸುವ ಸೌಲಭ್ಯವಿರುವುದರ ವಿವರಗಳು**

| ಕ್ರ ಸಂ. | ಉತ್ಪನ್ನಗಳನ್ನು ಒಣಗಿಸಲು | ಹೊಸಳ್ಳಿ ಗ್ರಾಮ | | ಹೊನ್ನಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 57 | 95.00 | 57 | 95.00 |
| 2. | ಇಲ್ಲ | 2 | 3.33 | 2 | 3.33 |
| 3. | ಗೊತ್ತಿಲ್ಲ | 1 | 1.67 | 1 | 1.67 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರಕಾರ್ಯದಿಂದ ಪಡೆಯಲಾಗಿದೆ.

ಮಾರ್ಕೆಟಿಂಗ್ ಆಫ್ ಇನ್ ಮಂಗಳೂರು ಸಿಟಿ: ಎ ಕೇಸ್ ಸ್ಟಡಿ ಇನ್ಟು ದಿ ಪ್ರಾಬ್ಲಮ್ ಆಫ್ ಕನ್‌ಜೂಮರ್ಸ್ ಆ್ಯಂಡ್ ಡಿಲರ್ಸ್ ಎಂಬ ಲೇಖನದಲ್ಲಿ ಗ್ರಾಹಕರಿಗೆ ಮತ್ತು ರೈತರಿಗೆ ಮಧ್ಯವರ್ತಿಗಳಿಂದ ಮಾರುಕಟ್ಟೆಯಲ್ಲಿ ನಷ್ಟವುಂಟಾಗುತ್ತದೆ ಎಂದಿದ್ದಾರೆ. ಅದರಲ್ಲೂ ತರಕಾರಿ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ಹಾವಳಿಯಿಂದ ರೈತರು ಮತ್ತು ಗ್ರಾಹಕರಿಗೆ ಆಗುತ್ತಿರುವ ನಷ್ಟವನ್ನು ತಿಳಿಸಿದ್ದಾರೆ. ಈ ಅಧ್ಯಯನದಲ್ಲಿ ಚರ್ಚಿಸಿದ ವಿಷಯವು ಸತ್ಯಕ್ಕೆ ಅಂದರೆ ರೈತರು ನಿಜವಾಗಲೂ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ಹಾವಳಿಯಿಂದ ನಷ್ಟವಾಗುತ್ತದೆ ಎನ್ನುವ ಅಂಶವು ಕಂಡುಬಂದಿದೆ.

ನೇರ ಮಾರಾಟ ಪದ್ಧತಿಯಿಂದ ರೈತರಿಗೆ ಮಾರುಕಟ್ಟೆಯಲ್ಲಿ ಆಗುವ ನಷ್ಟವನ್ನು ತಪ್ಪಿಸಬಹುದು ಎನ್ನುವ ಮಾಹಿತಿಯನ್ನು ಮುಂದಿನ ಕೋಷ್ಟಕ–37ರಲ್ಲಿ ನೋಡಬಹುದು. ನೇರ ಮಾರಾಟ ಪದ್ಧತಿ ಇದೆಯೇ ಎಂದು ರೈತರನ್ನು ಕೇಳಿದಾಗ ಎರಡು ಗ್ರಾಮಗಳಲ್ಲಿಯೂ ಇದೆ ಎನ್ನುವ ಮಾಹಿತಿ ಕೊಟ್ಟಿದ್ದಾರೆ. ಹೊಸಳ್ಳಿಯಲ್ಲಿ ಶೇ.96.67ರಷ್ಟು ರೈತರು ಇದೆ ಎಂದರೆ ಹೊನ್ನಳ್ಳಿ ಗ್ರಾಮದಲ್ಲಿ ಶೇ.98.33ರಷ್ಟು ರೈತರು ಇದೆ ಎಂದಿದ್ದಾರೆ, ಕೇವಲ ಶೇ.3.33ರಷ್ಟು ರೈತರು ಹೊಸಳ್ಳಿ ಗ್ರಾಮದಲ್ಲಿ, ಶೇ.1.67ರಷ್ಟು ರೈತರು ಹೊನ್ನಳ್ಳಿಯಲ್ಲಿ ತಮಗೆ ಗೊತ್ತಿಲ್ಲ ಎನ್ನುವ ಮಾಹಿತಿಯನ್ನು ನೀಡಿರುತ್ತಾರೆ. ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಯಾವ ಪದ್ಧತಿ ಇದೆ ಎಂದಾಗ ಹೊಸಳ್ಳಿಯಲ್ಲಿ ಶೇ.98.33ರಷ್ಟು ರೈತರು ಇ–ಟೆಂಡರ್ ಪದ್ಧತಿ ಎಂದು,

ಕೇವಲ ಶೇ.1.67ರಷ್ಟು ಬಹಿರಂಗವಾಗಿ ಹರಾಜು ಕೂಗುವುದು ಮತ್ತು ಯಾವೊಬ್ಬ ರೈತರು ಗುಪ್ತವಾಗಿ ಚೀಟಿ ಬರೆಯುವುದು ಇದೆ ಎಂದು ಹೇಳಿರುವುದಿಲ್ಲಾ, ಹೊನ್ನಳ್ಳಿಯಲ್ಲಿ ಶೇ.60.00ರಷ್ಟು ರೈತರು ಇ-ಟೆಂಡರ್ ಎಂದು, ಶೇ.36.67 ರಷ್ಟು ರೈತರು ಬಹಿರಂಗವಾಗಿ ಹರಾಜು ಕೂಗುವುದು, ಮತ್ತು ಶೇ.3.33ರಷ್ಟು ರೈತರು ಗುಪ್ತವಾಗಿ ಚೀಟಿ ಬರೆಯುವುದು ಎಂದು ತಿಳಿಸಿದ್ದಾರೆ. ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಪ್ರಿಲಿಮಿನರಿ ಅಧ್ಯಾಯದಲ್ಲಿ ಮತ್ತು ಸಂಪೂರ್ಣ ಕ್ಷೇತ್ರ ಕಾರ್ಯಮಾಡುವಾಗ ದೊರೆತ ರೈತರ ಉತ್ತರವೆಂದರೆ ಇ-ಟೆಂಡರ್ ಪದ್ಧತಿಯೇ ಆಗಿದೆ. ಇದು ರೈತರಿಗೂ ಅನೂಕೂಲವಾಗಿದೆ ಎನ್ನುವ ಮಾತನ್ನು ಸ್ವತಃ ಹೊಸಳ್ಳಿ ಗ್ರಾಮದಲ್ಲಿ ರೈತರೇ ತಿಳಿಸಿದರು.

**ಕೋಷ್ಟಕ-37**

**ಕೃಷಿ ಮಾರುಕಟ್ಟೆಯಲ್ಲಿ ನೇರ ಮಾರಾಟ ಪದ್ಧತಿಯ ವಿವರಗಳು**

| ಕ್ರ.ಸಂ. | ನೇರ ಮಾರಾಟ ಪದ್ಧತಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| 1. | ಇದೆ | 58 | 96.67 | 59 | 98.33 |
| 2. | ಇಲ್ಲ | 2 | 3.33 | 1 | 1.67 |
| | ಒಟ್ಟು | 60 | 100 | 60 | 100 |
| | ವಿಧಗಳು | | | | |
| 1. | ಇ-ಟೆಂಡರ್ | 59 | 98.33 | 36 | 60.00 |
| 2. | ಬಹಿರಂಗವಾಗಿ ಹರಾಜು ಕೂಗುವುದು | 1 | 1.67 | 22 | 36.67 |
| 3. | ಗುಪ್ತವಾಗಿ ಚೀಟಿ ಬರೆಯುವುದು | 0 | 0 | 2 | 3.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೆಳಗಿನ ಕೋಷ್ಟಕ-38ರಲ್ಲಿ ಮಾರುಕಟ್ಟೆಯಲ್ಲಿ ವಿಶ್ರಾಂತಿ ಗೃಹಗಳಿವೆ ಎಂದು ರೈತರನ್ನು ಹೊಸಳ್ಳಿಯಲ್ಲಿ ಪ್ರಶ್ನಿಸಿದಾಗ, ಹೆಚ್ಚಿನ ರೈತರು ವಿಶ್ರಾಂತಿಗೃಹಗಳು ಇಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ನಾವು ಮಾರುಕಟ್ಟೆಗೆ ಹೋದ ಪ್ರತಿ ಸಲವೂ ಮಾರುಕಟ್ಟೆಯ ಆವರಣದಲ್ಲಿಯೇ ಮಲಗುತ್ತೇವೆ. ಅದಕ್ಕೆ ಕಾರಣವನ್ನು ಹೀಗೆ ಹೇಳುತ್ತಾರೆ, ವರ್ಷವಿಡೀ ಉತ್ತು ಬಿತ್ತಿ ಬೆಳೆದ ಉತ್ಪನ್ನಗಳನ್ನು ಮಾರುಕಟ್ಟೆಯ ಆವರಣದ ಹೊರಗೆ ಬಿಟ್ಟು ನಾವಾದರೂ ಹೇಗೆ ತಾನೆ

ಬೇರೆಡೆ ಮಲಗಲು ಸಾಧ್ಯ ತಾಯಿ ಎಂದು ಹೊನ್ನಳ್ಳಿಯ ಒಬ್ಬ ಲಂಬಾಣಿ ರೈತರೊಬ್ಬರ ಅನಿಸಿಕೆಯಾಗಿತ್ತು. ಇನ್ನೊಬ್ಬ ರೈತ ಇದಕ್ಕೆ ಸಂಬಂಧಿಸಿದಂತೆ ಮಾರುಕಟ್ಟೆಯ ಆವರಣದಲ್ಲಿ ಉತ್ಪನ್ನಗಳನ್ನು ರಾತ್ರಿ ಹೊತ್ತು ಬಿಟ್ಟು ನಾವೆಲ್ಲೋ ಮಲಗಲು ಆಗುವುದಿಲ್ಲ, ಅಲ್ಲದೆ ಅವುಗಳನ್ನು ರಾತ್ರಿ ಹೊತ್ತು ಯಾರು ಕಳುವು ಮಾಡುವುದಿಲ್ಲ ಎಂದು ಹೇಗೆ ನಂಬಬೇಕು ಮೇಡಮ್, ಅದರಲ್ಲೂ ನಾವು ರೈತರು. ಪೇಟೆಗೆ ಬಂದಿರುತ್ತೇವೆ ನಮಗೆ ಜಾಗ ಹೊಸದು ಎನ್ನುತ್ತಾ, ದೊಡ್ಡ ರೈತರಾದರೆ ಬೇರೊಬ್ಬ ಕೂಲಿ ಆಳುಗಳನ್ನು ನೇಮಿಸಿ ಖಾಸಗಿ ವಿಶ್ರಾಂತಿಗೃಹಗಳಲ್ಲಿ ತಂಗಿದ ಉದಾಹರಣೆಗಳಿವೆ ಎನ್ನುತ್ತಾ ಮಾರುಕಟ್ಟೆಯಲ್ಲಿ ರೈತರಿಗೆ ರಾತ್ರಿ ಹೊತ್ತು ತಂಗಲು ಸರಿಯಾದ ವ್ಯವಸ್ಥೆ ಇಲ್ಲ. ರಕ್ಷಣೆಯೂ ಅಷ್ಟಾಗಿ ಇರುವುದಿಲ್ಲ ಎನ್ನುವ ಮಾಹಿತಿಯನ್ನು ನಾಗಣ್ಣ ಎನ್ನುವ ಹೊಸಳ್ಳಿಯ ರೈತ ತಿಳಿಸಿದರು. ಮಾರುಕಟ್ಟೆಯಲ್ಲಿ ಜಾನುವಾರುಗಳ ಕೊಟ್ಟಿಗೆ ಇರುವುದಿಲ್ಲ, ಹಿಂದೆಲ್ಲ ಜಾನುವಾರುಗಳಿಗೆ ಪ್ರತ್ಯೇಕ ಸ್ಥಳದ ವ್ಯವಸ್ಥೆ ಇರುತ್ತಿತ್ತು. ಆದರೆ ಈಗೆಲ್ಲ ಹೆಚ್ಚಿನ ಜನರು ತಮ್ಮ ಜಾನುವಾರುಗಳನ್ನು ತಮ್ಮ ತಮ್ಮ ಊರುಗಳಲ್ಲೇ ಮಾರುವುದರಿಂದ ಮಾರುಕಟ್ಟೆಯಲ್ಲಿ ಇದಕ್ಕೆ ಸಂಬಂಧಿಸಿದಂತೆ ಅಷ್ಟಾಗಿ ಸೌಲಭ್ಯಗಳು ಇರುವುದಿಲ್ಲ ಎನ್ನುವ ಮಾಹಿತಿಯೇ ಕ್ಷೇತ್ರಕಾರ್ಯದಲ್ಲಿ ದೊರೆತಿದೆ. ಆವರಣದಲ್ಲಿ ರೈತರು ಉತ್ಪನ್ನಗಳನ್ನು ತಂದ ಗಾಡಿಗಳನ್ನು ನಿಲ್ಲಿಸಲು ಪ್ರತ್ಯೇಕ ಸ್ಥಳದ ವ್ಯವಸ್ಥೆ ಇರುವುದಿಲ್ಲ ಎನ್ನುವ ಅಭಿಪ್ರಾಯವೇ ಎರಡು ಗ್ರಾಮಗಳ ಅಂಕಿ–ಅಂಶಗಳಲ್ಲಿ ಕಂಡುಬಂದಿದೆ.

**ಕೋಷ್ಟಕ–38**

**ಮಾರುಕಟ್ಟೆಯಲ್ಲಿ ರೈತರಿಗೆ ವಿಶ್ರಾಂತಿ ಗೃಹಗಳ ವಿವರಗಳು**

| ಕ್ರ ಸಂ. | ವಿಶ್ರಾಂತಿ ಗೃಹಗಳು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇವೆ | 32 | 53.33 | 15 | 25.00 |
| 2. | ಇಲ್ಲ | 27 | 45.00 | 34 | 56.67 |
| 3. | ಗೊತ್ತಿಲ್ಲ | 1 | 1.67 | 11 | 18.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೊಷ್ಟಕ–39ರಲ್ಲಿ ಮಾರುಕಟ್ಟೆಯಲ್ಲಿನ ಮೂಲಭೂತ ಸೌಕರ್ಯಗಳ ಕುರಿತಾಗಿದ್ದು, ಮಾರುಕಟ್ಟೆಯಲ್ಲಿ ನೀರಿನ ವ್ಯವಸ್ಥೆ, ಬ್ಯಾಂಕ್ ವ್ಯವಸ್ಥೆ ಹಾಗೂ ಅಂಚೆ ವ್ಯವಸ್ಥೆಯ ಕುರಿತಾದ ಅಂಕಿ ಅಂಶಗಳ ವಿವರವನ್ನು ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮಾರುಕಟ್ಟೆಯ ಆವರಣದಲ್ಲಿ ಕುಡಿಯುವ ನೀರಿನ ವ್ಯವಸ್ಥೆಯ ಕುರಿತು ಪ್ರಶ್ನೆಯನ್ನು ಸಂಡೂರಿನ ಹೊಸಳ್ಳಿ

ಗ್ರಾಮದಲ್ಲಿ ಮತ್ತು ಹೊನ್ನಳ್ಳಿ ಗ್ರಾಮದಲ್ಲಿ ಕೇಳಿದಾಗ ಗ್ರಾಮಗಳಲ್ಲಿ ಎಲ್ಲ ಕುಟುಂಬಗಳು ಇದೆ ಎನ್ನುವ ಮಾಹಿತಿ ನೀಡಿದ್ದಾರೆ. ಅದು ಶೇ.100ರಷ್ಟು ಹೊನ್ನಳ್ಳಿಯಲ್ಲಿ, ಶೇ.88.33ರಷ್ಟು ಹೊಸಳ್ಳಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ನೀರಿನ ವ್ಯವಸ್ಥೆ ಸುಸಜ್ಜಿತವಾಗಿದೆಯೇ ಎಂಬ ಪ್ರಶ್ನೆಯನ್ನು ಹೊಸಳ್ಳಿಯಲ್ಲಿ ಕೇಳಿದಾಗ ಹೌದು ಎಂದು ಶೇ.91.67ರಷ್ಟು, ಶೇ.8.33ರಷ್ಟು ರೈತರು ಇಲ್ಲ ಎನ್ನುವ ಅಭಿಪ್ರಾಯ ತಿಳಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.61.67ರಷ್ಟು ರೈತರು ಸುಸಜ್ಜಿತವಾಗಿದೆ ಎಂದು, ಶೇ.38.33 ರಷ್ಟು ಸುಸಜ್ಜಿತವಾಗಿಲ್ಲವೆಂದು ಹೇಳಿದ್ದಾರೆ. ಕ್ಷೇತ್ರಕಾರ್ಯದ ಸಮಯದಲ್ಲಿ ಕೆಲವು ರೈತರು ನಾವೂ ಇದುವರೆಗೂ ಆವರಣದಲ್ಲಿ ನೀರಿನ ಅನುಕೂಲ ಎಲ್ಲಿದೆ ಎಂದು ನೋಡಿಯೇ ಇಲ್ಲ, ನಮಗೆ ನೀರು ಬೇಕಾದಾಗ ಅಲ್ಲೆ ಅಂಗಡಿಗಳಲ್ಲಿಯೋ ಅಥವಾ ದಲ್ಲಾಳಿಗಳ ಬಳಿ ನೀರು ಕೇಳಿ ಪಡೆಯುತ್ತೇವೆ ಎಂದು ತಮ್ಮ ಅನುಭವವನ್ನು ತಿಳಿಸಿದರು.

**ಕೋಷ್ಟಕ–39**

**ಮಾರುಕಟ್ಟೆಯಲ್ಲಿ ರೈತರಿಗೆ ಕುಡಿಯುವ ನೀರಿನ ವ್ಯವಸ್ಥೆಯ ವಿವರ**

| ಕ್ರ ಸಂ. | ಕುಡಿಯುವ ನೀರು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಇದೆ | 53 | 88.33 | 60 | 100 |
| 2 | ಇಲ್ಲಾ | 3 | 5.00 | 00 | 00 |
| 3 | ಗೋತ್ತಿಲ್ಲ | 4 | 6.67 | 00 | 00 |
| | ಒಟ್ಟು | 60 | 100 | 60 | 100 |

**ಮೂಲ:** ಕ್ಷೇತ್ರಕಾರ್ಯದಿಂದ ಬಂದ ಮಾಹಿತಿ

ಕೆಳಗಿನ ಕೋಷ್ಟಕ–40ರಲ್ಲಿ ಮಾರುಕಟ್ಟೆಯ ಆವರಣದಲ್ಲಿ ಅಂಚೆ ತಂತಿ ಕಛೇರಿಯ ವ್ಯವಸ್ಥೆ ಇದೆಯೇ ಮತ್ತು ಇದ್ದರೆ ರೈತರಿಗೆ ಅನುಕೂಲಕರವಾಗಿದೆಯೇ ಎಂದು ಕ್ಷೇತ್ರ ಕಾರ್ಯದಲ್ಲಿ ಹೊಸಳ್ಳಿ ಗ್ರಾಮದ ರೈತರನ್ನು ಕೇಳಿದಾಗ ಶೇ.78.34ರಷ್ಟು ರೈತರು ಇದೆ ಎಂದು, ಶೇ.21.66ರಷ್ಟು ರೈತರು ಇಲ್ಲ ಎಂದು ಮತ್ತು ಶೇ.00 ಅಂದರೆ ಗೊತ್ತಿಲ್ಲ ಎಂದು ಯಾವೊಬ್ಬ ರೈತರೂ ತಿಳಿಸಿಲ್ಲ. ಅನುಕೂಲಕರವಾಗಿದೆ ಎಂದು ಶೇ.38.33ರಷ್ಟು ರೈತರು ಹೇಳಿದರೆ, ಅನುಕೂಲಕರವಾಗಿಲ್ಲ ಎಂದು 61.67ರಷ್ಟು ರೈತರು ತಿಳಿಸಿದ್ದಾರೆ. ಹಾಗೆಯೇ ಇದೆ ಪ್ರಶ್ನೆಗೆ ಹೊನ್ನಳ್ಳಿ ಗ್ರಾಮದಲ್ಲಿ ಅಂಚೆ ಕಛೇರಿಯು ಇದೆ ಎಂದು ಶೇ.76.67ರಷ್ಟು ರೈತರು, ಇಲ್ಲ ಎಂದು ಶೇ.16.67ರಷ್ಟು ರೈತರು ಹಾಗೂ ಗೊತ್ತಿಲ್ಲ ಎಂದು ಶೇ.6.67ರಷ್ಟು ರೈತರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಂಚೆ ಕಛೇರಿ ಅನೂಕೂಲಕರವಾಗಿದೆ ಎಂದು ಶೇ.55.00

ರಷ್ಟು ರೈತರು ಹೇಳಿದರೆ, ಇಲ್ಲ ಎಂದು ಶೇ.45.00ರಷ್ಟು ರೈತರು ತಮ್ಮ ಅನಿಸಿಕೆಯನ್ನು ತಿಳಿಸಿದ್ದಾರೆ.

**ಕೋಷ್ಟಕ–40**

**ಮಾರುಕಟ್ಟೆಯಲ್ಲಿ ಅಂಚೆ ಮತ್ತು ತಂತಿ ವ್ಯವಸ್ಥೆ ವಿವರಗಳು**

| ಕ್ರ ಸಂ. | ಅಂಚೆ ಮತ್ತು ತಂತಿ ವ್ಯವಸ್ಥೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 47 | 78.34 | 46 | 76.67 |
| 2. | ಇಲ್ಲ | 13 | 21.66 | 10 | 16.67 |
| 3. | ಗೊತ್ತಿಲ್ಲ | 00 | 00 | 4 | 6.67 |
| | ಒಟ್ಟು | 60 | 100 | 60 | 100 |
| | ಕಾರ್ಯನಿರ್ವಹಣೆ | | | | |
| 1. | ಅನುಕೂಲಕರವಾಗಿದೆ | 23 | 38.33 | 33 | 55.00 |
| 2. | ಅನುಕೂಲಕರವಾಗಿಲ್ಲ | 37 | 61.67 | 27 | 45.00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಮುಂದಿನ ಕೋಷ್ಟಕ–41ರಲ್ಲಿ ಮಾರುಕಟ್ಟೆಯ ಆವರಣದಲ್ಲಿ ಬ್ಯಾಂಕ್ ವ್ಯವಸ್ಥೆ ಇದೆಯೇ, ಇದ್ದರೆ ಬ್ಯಾಂಕ್ ವ್ಯವಸ್ಥೆ ಯಾವ ರೀತಿಯಾಗಿದೆ ಎಂದು ರೈತರನ್ನು ಸಂದರ್ಶನದ ಸಮಯದಲ್ಲಿ ಕೇಳಿದಾಗ ಇದೆ ಎಂದು ಶೇ.80.00ರಷ್ಟು ರೈತರು, ಶೇ.13.33ರಷ್ಟು ರೈತರು ಇಲ್ಲ ಎಂದು, ಶೇ.6.67ರಷ್ಟು ರೈತರು ಗೊತ್ತಿಲ್ಲ ಎಂದು ಹೊಸಳ್ಳಿ ಗ್ರಾಮದಲ್ಲಿ ಹೇಳಿದ್ದಾರೆ. ಬ್ಯಾಂಕ್ ವ್ಯವಸ್ಥೆ ಉಪಯುಕ್ತವಾಗಿದೆಯೆಂದು ಶೇ.83.33ರಷ್ಟು ರೈತರು ಹೇಳಿದರೆ, ಉಪಯುಕ್ತವಾಗಿಲ್ಲವೆಂದು ಶೇ.16.67ರಷ್ಟು ರೈತರು ಸಂಡೂರಿನ ಹೊಸಳ್ಳಿ ಗ್ರಾಮದಲ್ಲಿ ತಿಳಿಸಿದ್ದಾರೆ. ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಶೇ.66.67ರಷ್ಟು ರೈತರು ಬ್ಯಾಂಕ್ ವ್ಯವಸ್ಥೆ ಇದೆ ಎಂದು, ಶೇ.18.33ರಷ್ಟು ರೈತರು ಇಲ್ಲವೆಂದು ಮತ್ತು ಶೇ.15ರಷ್ಟು ರೈತರು ತಮಗೆ ಗೊತ್ತಿಲ್ಲವೆಂದು ಹೇಳಿದ್ದಾರೆ. ಬ್ಯಾಂಕ್ ವ್ಯವಸ್ಥೆ ಆವರಣದಲ್ಲಿದ್ದು ತಮಗೆ ಅನುಕೂಲವಾಗಿದೆ ಎಂದು ಶೇ.71.66ರಷ್ಟು ರೈತರು ಮತ್ತು ಶೇ.28.34ರಷ್ಟು ರೈತರು ಉಪಯುಕ್ತವಾಗಿಲ್ಲವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬ್ಯಾಂಕ್ ವ್ಯವಸ್ಥೆ ಉಪಯುಕ್ತವಾಗಿಲ್ಲ ಎನ್ನುವುದರ ಕಾರಣಗಳನ್ನು

ನೋಡುವುದಾದರೆ ರೈತರು ಈ ಕೆಳಗಿನಂತೆ ಪ್ರತಿಕ್ರಿಯಿಸಿದ್ದಾರೆ. ಹೊಸಳ್ಳಿ ಗ್ರಾಮದಲ್ಲಿ ಶೇ.18.33ರಷ್ಟು ರೈತರು ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲವೆಂದು, ಶೇ.3.33ರಷ್ಟು ರೈತರು ಅಧಿಕಾರಿಗಳು ಸ್ಪಂದಿಸುವುದಿಲ್ಲವೆಂದು, ಶೇ.50 ರಷ್ಟು ರೈತರು ತಮಗೆ ಮಾಹಿತಿ ಇರುವುದಿಲ್ಲವೆಂದು, ಶೇ.20ರಷ್ಟು ರೈತರು ಕಛೇರಿಯಲ್ಲಿ ಬೇಕಾದ ಕಾಗದ ಪತ್ರಗಳ ಕೊರತೆ ಇದೆ ಎಂದು, ಶೇ.8.33ರಷ್ಟು ರೈತರು ಸರಿಯಾದ ಸಮಯಕ್ಕೆ ಬ್ಯಾಂಕ್ ತೆರೆದಿರುವುದಿಲ್ಲ ಎಂದು ತಿಳಿಸಿದ್ದಾರೆ.

ಹೊಸಳ್ಳಿ ಗ್ರಾಮದಲ್ಲಿರುವ ಕುಮಾರಸ್ವಾಮಿ ಎಂಬ ರೈತರೊಬ್ಬರು ಬ್ಯಾಂಕ್‌ಗಳಲ್ಲಿ ತಮಗೆ ಆದ ಅನನುಕೂಲವನ್ನು ಇದಕ್ಕೆ ಸಂಬಂಧಪಟ್ಟಂತೆ ಈ ರೀತಿಯಾಗಿ ಹೇಳಿದರೂ, ತಾವು ಒಂದು ಸಾರಿ ಮಾರುಕಟ್ಟೆಯ ಬ್ಯಾಂಕ್‌ಗೆ ಹೋದಾಗ ತಮಗೆ ಬೇಕಾದ ಕೆಲವು ಚಲನ್‌ಗಳ ಕೊರತೆ ಮತ್ತು ಹಣದ ಅಭಾವವಿರುವುದು ಕಂಡುಬಂದಿದೆ ಎಂದಿದ್ದಾರೆ. ಬ್ಯಾಂಕ್‌ನಲ್ಲಿ ಅಧಿಕಾರಿಗಳನ್ನು ವಿಚಾರಿಸಿದರೆ ಬ್ಯಾಂಕ್‌ನವರು ಮೇನ್ ಬ್ರಾಂಚ್‌ಗೆ ಹೋಗಿ ಎಂದು ತಿಳಿಸಿದರು, ಅಧಿಕಾರಿಗಳನ್ನು ನೀವು ಬ್ಯಾಂಕ್‌ನ ಎಲ್ಲ ಸೌಲಭ್ಯಗಳನ್ನು ಒದಗಿಸಬೇಕಲ್ಲವೆ ಎಂದರೆ, ಏನು ಮಾಡೋದು ಇಲ್ಲಿ ಬರುವವರು ಕಡಿಮೆ ಸಂಖ್ಯೆಯ ಗ್ರಾಹಕರುಗಳು ಹಾಗಾಗಿ ಕೆಲವೊಂದು ಕೊರತೆಗಳು ಇರುತ್ತವೆ ಅನುಸರಿಸಿಕೊಳ್ಳಿ, ಮೇನ್ ಬ್ರಾಂಚ್‌ಗೆ ಹೋಗಿ ಎನ್ನುವ ಉತ್ತರವನ್ನೇ ಮತ್ತೆ ನೀಡಿದರು. ಒಟ್ಟಾರೆ ಮಾರುಕಟ್ಟೆಯಲ್ಲಿನ ಕೆಲವು ಸೌಲಭ್ಯಗಳು ಹೆಸರಿಗೆ ಇದ್ದರೂ ಅವು ಸಮರ್ಪಕವಾಗಿ ರೈತರಿಗೆ ತಲುಪುವಲ್ಲಿ ವಿಫಲವಾಗಿವೆ ಎಂದು ಮೇಲಿನ ಅಂಕಿ-ಅಂಶಿಗಳ ಆಧಾರದ ಮೇಲೆ ಹೇಳಬಹುದು.

**ಕೋಷ್ಟಕ-41**

**ಮಾರುಕಟ್ಟೆಯ ಆವರಣದಲ್ಲಿ ಬ್ಯಾಂಕ್ ವ್ಯವಸ್ಥೆಯ ವಿವರಗಳು**

| ಕ್ರ. | ಬ್ಯಾಂಕ್ ವ್ಯವಸ್ಥೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| ಸಂ. | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಇದೆ | 48 | 80.00 | 40 | 66.67 |
| 2 | ಇಲ್ಲ | 8 | 13.33 | 11 | 18.33 |
| 3 | ಗೊತ್ತಿಲ್ಲ | 4 | 6.67 | 9 | 15 |
| | ಒಟ್ಟು | 60 | 100 | 60 | 100 |
| | ವ್ಯವಸ್ಥೆ ಉಪಯುಕ್ತತೆ | | | | |
| 1 | ಉಪಯುಕ್ತವಾಗಿದೆ | 50 | 83.33 | 43 | 71.66 |
| 2 | ಇಲ್ಲ | 10 | 16.67 | 17 | 28.34 |
| | ಒಟ್ಟು | 60 | 100 | 60 | 100 |

**ಮೂಲ:** ಕ್ಷೇತ್ರಕಾರ್ಯದಿಂದ ಬಂದ ಮಾಹಿತಿ

ಮೇಲಿನ ಕೋಷ್ಟಕಗಳಿಗೆ ಸಂಬಂಧಿಸಿದಂತೆ ಮುಂದಿನ ಭಾಗದಲ್ಲಿ ಅಧ್ಯಯನಗಳನ್ನು ಫಲಿತಗಳೊಂದಿಗೆ, ಹೋಲಿಸಿ ವಿಶ್ಲೇಷಿಸಲಾಗಿದೆ, ದಿನಾಂಕ 20/4/2013ರಂದು ಹಗರಿಬೊಮ್ಮನ ಹಳ್ಳಿ ಕೃಷಿ ಮಾರುಕಟ್ಟೆಗೆ ಭೇಟಿ ನೀಡಿ ಕೃಷಿ ಮಾರುಕಟ್ಟೆಯಲ್ಲಿ ಮಾರುಕಟ್ಟೆಯ ಸಹಾಯಕ ಅಧಿಕಾರಿಯಾದ ಎಸ್.ಮಂಜುನಾಥ ಅವರು ಕೃಷಿ ಮಾರುಕಟ್ಟೆಯ ವಹಿವಾಟು ಕುರಿತು ಮತ್ತು ಕೃಷಿ ಮಾರುಕಟ್ಟೆಯ ಯೋಜನೆಗಳ ಕುರಿತು ಮಾಹಿತಿ ನೀಡಿದರು. ಅದರಲ್ಲಿ ಮೊದಲನೆಯದಾಗಿ ಹಗರಿಬೊಮ್ಮನಹಳ್ಳಿಯ ಕೃಷಿ ಮಾರುಕಟ್ಟೆಯಲ್ಲಿ ಇ–ಟೆಂಡರ್ ಮುಖಾಂತರ ಮಾರಲಾಗುವುದಿಲ್ಲ ಎನ್ನುವ ಅಂಶವನ್ನು ಹೇಳುತ್ತಾ ದಲ್ಲಾಳಿಗಳು ಲೈಸೆನ್ಸ್ ಹೊಂದಿದ್ದು ಲೈಸೆನ್ಸ್ ಹೊಂದಿರುವ ದಲ್ಲಾಳಿಗಳು ಮಾತ್ರ ವ್ಯಾಪಾರ ವಹಿವಾಟನ್ನು ಮಾಡತಕ್ಕದ್ದು ಎಂದು ತಿಳಿಸಿದರು. ದಲ್ಲಾಳಿಗಳು ಕೃಷಿ ಮಾರುಕಟ್ಟೆಯ ಆವರಣದಲ್ಲೇ ಒಂದು ಕೋಣೆಯನ್ನು ಹೊಂದಿದ್ದಾರೆ. ಪ್ರತಿಯೊಬ್ಬ ದಲ್ಲಾಳಿಗಳು ಪ್ರತಿದಿನ ಮಾರುಕಟ್ಟೆಯ ಅಧಿಕಾರಿಗಳಿಗೆ ಕೊಂಡುಕೊಳ್ಳುವ ಮತು ಪ್ರತಿ ದಿವಸದ ವ್ಯಾಪಾರ ವಹಿವಾಟಿನ ಮಾಹಿತಿಯನ್ನು ಕೊಡಬೇಕು. ಹಾಗೆಯೇ ದಲ್ಲಾಳಿಗಳು ಮಾರುಕಟ್ಟೆಯ ಅಧಿಕಾರಿಗಳಿಗೆ ಪಾವತಿಸಬೇಕು.

ಮಂಜುನಾಥನ ಅವರು 2011–12ರ ಸಾಲಿನಲ್ಲಿ ಹಗರಿಬೊಮ್ಮನಹಳ್ಳಿಯಲ್ಲಿ ನಡೆದ ವಹಿವಾಟು ಕುರಿತಾಗಿ ಮಾಹಿತಿ ನೀಡುತ್ತಾ ಸರಾಸರಿ 1 ಕೋಟಿಯ ವಹಿವಾಟು ನಡೆದಿರುತ್ತದೆ ಎಂದು ತಿಳಿಸಿದರು. ಈ ಕೃಷಿ ಮಾರುಕಟ್ಟೆಯಲ್ಲಿ ರೈತರಿಗೆ ದೊರೆಯುವ ಸೌಲಭ್ಯಗಳು, ಅಂದರೆ ಗೋಡನ್, ರೈತರು ಉಳಿದುಕೊಳ್ಳಲು ಕೊಠಡಿಗಳನ್ನು ಮತ್ತು ನೀರಿನ ವ್ಯವಸ್ಥೆಯನ್ನು ಮಾಡಲಾಗುತ್ತದೆ. ರೈತರು ತಾವು ಬೆಳೆದ ಬೆಳೆಗಳನ್ನು ದಲ್ಲಾಳಿಗಳಿಗೆ ಮಾರಾಟ ಮಾಡುತ್ತಾರೆ, ರೈತರಿಗೆ ತಾವು ಅಂದುಕೊಂಡಷ್ಟು ಬೆಲೆ ಬಂದರೆ ಮಾತ್ರ ಮಾರುತ್ತಾರೆ ಇಲ್ಲವಾದರೆ ಅವರು ಕೆಲವು ದಿನಗಳ ಕಾಲ ಗೋಡನ್‌ನಲ್ಲಿ ಇರಿಸಿ ಬೆಲೆ ಬರುವವರೆಗೆ ಕಾಯುತ್ತಾರೆ. ಕೆಲವರು ಬೇರೆ ಮಾರುಕಟ್ಟೆಗೆ ಬೆಲೆಯನ್ನು ಹೋಲಿಸಿ ಬೆಲೆ ಹೆಚ್ಚಿದ್ದರೆ ಅಂತಹ ಮಾರುಕಟ್ಟೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಉದಾಹರಣೆಗೆ ಬಳ್ಳಾರಿ, ಹೊಸಪೇಟೆ ಆದರೆ ಬಹುತೇಕ ರೈತರು ಮಾರುಕಟ್ಟೆಗೆ ತಂದ ಮೇಲೆ ಮಾರುಕಟ್ಟೆಯಲ್ಲಿಯೇ ಮಾರಿ ಹೋಗುತ್ತಾರೆ. ಶ್ರೀಮಂತ ರೈತರು ಮಾತ್ರ ಬೇಡಿಕೆ ಬರುವ ತನಕ ಕಾಯುವುದು ಇಲ್ಲವೇ ಬೇರೆ ಮಾರುಕಟ್ಟೆಗೆ ಸಾಗಿಸುವ ಗೋಜಿಗೆ ಹೋಗುತ್ತಾರೆ. ಸಣ್ಣರೈತರು ಮತ್ತು ಮಧ್ಯಮರೈತರು ಸ್ವಲ್ಪ ಹೆಚ್ಚು ಕಡಿಮೆ ಬೆಲೆ ಎಂದು ತಂದ ಮಾಲನ್ನು ಮಾರುವುದೇ ಹೆಚ್ಚು ಎನ್ನುವ ಅಂಶಗಳನ್ನು ತಿಳಿಸಿದರು. ಹಾಗೆಯೇ ಕೃಷಿ ಮಾರುಕಟ್ಟೆಯ ಹಣಕಾಸಿನ ವಿಚಾರವಾಗಿ ಪ್ರಶ್ನೆಯನ್ನು ಕೇಳಿದಾಗ, ಅಧಿಕಾರಿಯು ಪ್ರತಿ ಕೃಷಿ ಮಾರುಕಟ್ಟೆಗೆ ಪ್ರತಿ ವರ್ಷ ಸರಕಾರದಿಂದ ಇಂತಿಷ್ಟು ಎಂದು ಹಣವನ್ನು ಬಿಡುಗಡೆ

ಮಾಡಲಾಗುತ್ತದೆ. ಕೃಷಿ ಮಾರುಕಟ್ಟೆಯಲ್ಲಿಯ ಮೂಲಭೂತ ಸೌಲಭ್ಯಗಳನ್ನು ಆಧರಿಸಿ ಉದಾ: ಕುಡಿಯುವ ನೀರಿನ ವ್ಯವಸ್ಥೆ, ಗೋಡನ್‌ಗಳ ನಿರ್ವಹಣೆ, ಶೀಥಲೀಕರಣ ಘಟಕಗಳಿಗೆ, ಶೌಚಾಲಯಗಳಿಗೆ ಇತ್ಯಾದಿ ಆಧಾರದ ಮೇಲೆ ಅಧಿಕಾರಿಗಳು ವರದಿ ತಯಾರಿಸಿ ಹಣವನ್ನು ಬಿಡುಗಡೆ ಮಾಡುತ್ತಾರೆ.

ತಂಬ್ರಹ್ಳಿಯು ಹಗರಿಬೊಮ್ಮನಹಳ್ಳಿಯ ಉಪಮಾರುಕಟ್ಟೆಯಾಗಿದ್ದು, ಅ ಭಾಗದ ರೈತರು ಕೆಲವು ಸಲ ತಾವು ಬೆಳೆದ ಉತ್ಪಾದನೆಯನ್ನು ತಂಬ್ರಹ್ಳಿಯ ಉಪಮಾರುಕಟ್ಟೆಯಲ್ಲಿಯೇ ಮಾರು ತ್ತಾರೆ. ಹೆಚ್ಚಾಗಿ ಈ ಭಾಗದ ರೈತರು ಉತ್ಪಾದಿಸುವ ಉತ್ಪನ್ನಗಳು ಶೇಂಗಾ, ಭತ್ತ, ಹತ್ತಿ, ಮೆಕ್ಕೆಜೋಳ, ಹುರಿಕಡಲೆಗಳಾಗಿರುತ್ತವೆ ಎಂದು ತಿಳಿಸಿದರು. ಹಾಗೆಯೆ ಕೂಲಿ ಕಾರ್ಮಿಕರಿಗೆ ಸಂಬಂಧಿಸಿದಂತೆ ಪ್ರಶ್ನೆಯನ್ನು ಕೇಳಿದಾಗ, ಕೃಷಿ ಮಾರುಕಟ್ಟೆಯ ಕಾರ್ಮಿಕರು ಅಂದರೆ ಹಮಾಲಿಗಳು ಈ ಲೈಸ್ಸನ್ಸನ್ನು ಹೊಂದಿರಬೇಕು. ಈ ಹಮಾಲಿಗಳು ಪ್ರತಿ ಚೀಲಕ್ಕೂ ರೈತರಿಂದ ಇಂತಿಷ್ಟು ಶುಲ್ಕ(ಹಣ)ವನ್ನು ತೆಗೆದುಕೊಳ್ಳಬೇಕು ಎಂಬ ನಿಯಮವಿದೆ, ಶುಲ್ಕವು ಪ್ರತಿ ಚೀಲಕ್ಕೆ ರೂ.2 ಇರುತ್ತದೆ ಎಂದು ಹೇಳುತ್ತಾ, ಯಾವೊಬ್ಬ ಹಮಾಲರು ನಿಗದಿಪಡಿಸಿದ ಶುಲ್ಕದಂತೆ ತೆಗೆದುಕೊಳ್ಳದೆ ಹೆಚ್ಚಿನ ಹಣವನ್ನು ತೆಗೆದುಕೊಳ್ಳುತ್ತಾರೆ. ಅಧಿಕಾರಿ ಇದಕ್ಕೆ ಕಾರಣವನ್ನು ಹೀಗೆ ಹೇಳುತ್ತಾರೆ ಹಮಾಲರು ಹೀಗೆ ನಿಯಮ ಮೀರಿ ಶುಲ್ಕ ಪಡೆಯುತ್ತಿರುವುದು ತಪ್ಪಾದರೂ ಕೃಷಿ ಮಾರುಕಟ್ಟೆಯು ನಿಗದಿ ಮಾಡಿರುವ ಶುಲ್ಕ ತೀರಾ ಕಡಿಮೆ ಇರುವುದೇ ಕಾರಣ ಎನ್ನುವ ಅಂಶವನ್ನು ತಿಳಿಸಿದರು. ಕೃಷಿ ಮಾರುಕಟ್ಟೆಯಲ್ಲಿ ಕಾರ್ಮಿಕರಿಗೆ ಬಿಡುವಿನ ವೇಳೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ವಿಶ್ರಾಂತಿ ಕೊಠಡಿಯ ವ್ಯವಸ್ಥೆ ಇರುತ್ತದೆ ಎನ್ನವ ಅಂಶಗಳನ್ನು ಎಸ್.ಮಂಜುನಾಥ ಅವರು ತಿಳಿಸಿದರು.

ಎರಡನೇ ಭಾಗದಲ್ಲಿ ಮಾರುಕಟ್ಟೆಯ ಇತರೆ ಸೇವೆ ಸೌಲಭ್ಯಗಳನ್ನು ಮತ್ತು ಮಾರಾಟ ಮಾಡುವ ವಿಧಾನವನ್ನು ಚರ್ಚಿಸಲಾಗಿದೆ. ಮಾರುಕಟ್ಟೆಯು ತನ್ನದೇ ಆದ ಕೆಲವು ಮೂಲ ಸೌಕರ್ಯಗಳನ್ನು ರೈತರಿಗೆ ಒದಗಿಸುತ್ತದೆ. ಅವುಗಳ ಚರ್ಚೆಯನ್ನು ಮೇಲಿನ ಭಾಗದಲ್ಲಿ ಮಾಡಲಾಗಿದೆ. ಕೋಷ್ಟಕ–44ರಲ್ಲಿ ಕೃಷಿ ಮಾರುಕಟ್ಟೆಯ ಸೇವೆ ಸೌಲಭ್ಯಗಳನ್ನು ಮತ್ತು ಮಾರಾಟ ಮಾಡುವ ವಿಧಾನವನ್ನು ಕ್ಷೇತ್ರಕಾರ್ಯದಿಂದ ಕಲೆ ಹಾಕಿದ ಅಂಕಿ–ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ರೈತರಿಗೆ ಕೃಷಿ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಮಾರಾಟ ಕುರಿತಂತೆ ಪೇಟೆ ಸಮಾಚಾರ ಸೇವೆಗಳ ಸೌಲಭ್ಯವಿದೆಯೇ ಎಂದು ಸಂಡೂರಿನ ಹೊಸಳ್ಳಿ ಗ್ರಾಮದಲ್ಲಿ ಕೇಳಿದಾಗ

ಶೇ.45ರಷ್ಟು ರೈತರು ಇದೆ ಎಂದು, ಶೇ.28.33ರಷ್ಟು ರೈತರು ಇಲ್ಲ ಎಂದು, ಶೇ.26.67 ರಷ್ಟು ರೈತರು ತಮಗೆ ಗೊತ್ತಿಲ್ಲವೆನ್ನುವ ಅಭಿಪ್ರಾಯವನ್ನು ತಿಳಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.78.33 ರಷ್ಟು ರೈತರು ಮಾರುಕಟ್ಟೆಯಲ್ಲಿ ಸೇವೆ ಸೌಲಭ್ಯವಿದೆ ಎಂದು, ಶೇ.15 ರಷ್ಟು ರೈತರು ಇಲ್ಲ ಎಂದು, ಶೇ.6.67ರಷ್ಟು ರೈತರು ಗೊತ್ತಿಲ್ಲ ಎನ್ನುವ ಮಾಹಿತಿಯನ್ನು ನೀಡಿದ್ದಾರೆ. ಮೇಲಿನ ಪ್ರಶ್ನೆಗೆ ಪೂರಕವಾಗಿ ರೈತರಿಗೆ ಪೇಟೆ ಸೌಲಭ್ಯವು ಇರುವುದಾದರೆ ಉಪಯುಕ್ತವಾಗಿದೆಯೇ ಎಂದು ಹೊಸಳ್ಳಿ ಗ್ರಾಮದಲ್ಲಿ ಕೇಳಿದಾಗ ಶೇ.33.33ರಷ್ಟು ರೈತರು ಹೌದು ಎಂದು, ಶೇ.70.67 ರಷ್ಟು ರೈತರು ಇಲ್ಲ ಎನ್ನುವ ಉತ್ತರವನ್ನು ನೀಡುತ್ತಾ ಅದಕ್ಕೆ ಕಾರಣವನ್ನು ಹೀಗೆ ಹೇಳುತ್ತಾರೆ, ಭಾಷೆಯ ಸಮಸ್ಯೆಯಿಂದ ಶೇ.18.33ರಷ್ಟು ರೈತರು ಮತ್ತು ಶೇ.81.67ರಷ್ಟು ರೈತರಿಗೆ ಎಲ್.ಇ.ಡಿ. ಮೇಲೆ ಬರುವ ವೇಗದ ಮಾಹಿತಿಯನ್ನು ಬೇಗನೆ ಅರ್ಥ ಮಾಡಿಕೊಳ್ಳಲು ಆಗುವುದಿಲ್ಲ ಎನ್ನುವ ತಮ್ಮ ಅಭಿಪ್ರಾಯವನ್ನು ಹೊಸಳ್ಳಿಯಲ್ಲಿ ವ್ಯಕ್ತಪಡಿಸಿದರೆ, ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಪೇಟೆ ಸಮಾಚಾರವು ಉಪಯುಕ್ತವಾಗಿದೆ ಎಂದು ಶೇ.56.67ರಷ್ಟು ರೈತರು ಮತ್ತು ಶೇ.43.33ರಷ್ಟು ತಮಗೆ ಉಪಯುಕ್ತವಾಗುತ್ತಿಲ್ಲ ಎನ್ನುವ ಮಾಹಿತಿಯೊಂದಿಗೆ ಗ್ರಾಮದಲ್ಲಿ ಭಾಷೆಯ ಸಮಸ್ಯೆಯಿಂದ ಶೇ.35ರಷ್ಟು ರೈತರಿಗೆ ಅರ್ಥವಾಗದೆ ಹೋದರೆ, ಶೇ.65ರಷ್ಟು ರೈತರಿಗೆ ವೇಗದ ಮಾಹಿತಿ ರವಾನೆಯಿಂದ ತಮಗೆ ಮಾರುಕಟ್ಟೆಯ ಆವರಣದಲ್ಲಿ ಒದಗಿಸಿರುವ ಸೌಲಭ್ಯಗಳು ಅಷ್ಟಾಗಿ ಉಪಯುಕ್ತವಾಗಿಲ್ಲ ಎಂದು ಹೇಳಿದ್ದಾರೆ.

ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ ರೈತರೊಬ್ಬರು ಮಾರುಕಟ್ಟೆಯಲ್ಲಿ ಒದಗಿಸುವ ಪೇಟೆ ಸಮಾಚಾರವು ಖಂಡಿತ ರೈತರಿಗೆ ಅನೂಕೂಲವೇ ಸರಿ, ಯಾಕೆಂದರೆ ರಾಜ್ಯದ ವಿವಿಧ ಮಾರುಕಟ್ಟೆಯ ಧಾರಣೆಗಳನ್ನು ಏಕಕಾಲಕ್ಕೆ ನಾವು ಹೋದ ಮಾರುಕಟ್ಟೆಯಲ್ಲಿಯೇ ಕುಳಿತು ತಿಳಿದುಕೊಳ್ಳಬಹುದು. ಅಲ್ಲದೆ ಹೊರರಾಜ್ಯಗಳ ಉತ್ಪನ್ನಗಳ ಧಾರಣೆಯನ್ನು ನಾವು ತಿಳಿದುಕೊಳ್ಳ ಬಹುದು ಎನ್ನುವ ಅಂಶವನ್ನು ರೈತ ರಾಜೇಶ್ ಬಸೆಟ್ಟಿ, ಪಿ.ಯು.ಸಿ. ವಿದ್ಯಾಭ್ಯಾಸ ಮಾಡಿದ ಇವರು ಹೇಳಿದ್ದಾರೆ. ತಾವೂ ಬೆಳೆದ ಮೆಕ್ಕೆಜೋಳ, ತರಕಾರಿ. ಈರುಳ್ಳಿಯ ಉತ್ಪನ್ನಗಳೊಂದಿಗೆ ಬಳ್ಳಾರಿ, ಜಗಳೂರು, ಸಂಡೂರು, ಕೊಟ್ಟೂರು ಮತ್ತು ಬೆಂಗಳೂರು ಮಾರುಕಟ್ಟೆಗೆ ಅನೇಕ ಸಲ ಹೋಗಿದ್ದು, ರೈತರು ಮಾರುಕಟ್ಟೆಗೆ ಹೋಗಿ ಮಾರಾಟ ಮಾಡುವುದರಿಂದ ಹೆಚ್ಚಿನ ಲಾಭವನ್ನು ಗಳಿಸಬಹುದು ಎನ್ನುವ ಮಹತ್ತರವಾದ ವಿಚಾರವನ್ನು ಹಂಚಿಕೊಂಡರು.

### ಕೋಷ್ಟಕ–42

### ಮಾರುಕಟ್ಟೆಯ ಸೇವೆ ಸೌಲಭ್ಯಗಳು ಮತ್ತು ಮಾರಾಟ ಮಾಡುವ ವಿಧಾನಗಳ ವಿವರಗಳು

| ಕ್ರ | ಪೇಟೆ ಸಮಾಚಾರ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| ಸಂ. | ಸೇವೆಗಳು | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 27 | 45.00 | 47 | 78.33 |
| 2. | ಇಲ್ಲ | 17 | 28.33 | 9 | 15.00 |
| 3. | ಗೊತ್ತಿಲ್ಲ | 16 | 26.67 | 4 | 6.67 |
| | ಒಟ್ಟು | 60 | 100 | 60 | 100 |
| | ಪೇಟೆ ಸಮಾಚಾರ | | | | |
| 1. | ದೂರದರ್ಶನ | 2 | 3.33 | 3 | 5.00 |
| 2 | ಆಕಾಶವಾಣಿ | 00 | 00 | 00 | 00 |
| 3. | ದೃಶ್ಯ ಮಾಧ್ಯಮ | 30 | 50 | 40 | 66.67 |
| 4. | ಧ್ವನಿ ಮಾಧ್ಯಮ | 28 | 41.67 | 17 | 28.33 |
| | ಒಟ್ಟು | 60 | 100 | 60 | 100 |
| | ಪೇಟೆ ಸಮಾಚಾರ ಉಪಯುಕ್ತತೆ | | | | |
| 1. | ಇದೆ | 20 | 33.33 | 34 | 56.67 |
| 2. | ಇಲ್ಲ | 40 | 70.67 | 26 | 43.33 |
| | ಒಟ್ಟು | 60 | 100 | 60 | 100 |
| | ಪೇಟೆ ಸಮಾಚಾರದ ಸಮಸ್ಯೆಗಳು | | | | |
| 1. | ಭಾಷೆಯ ಸಮಸ್ಯೆ | 11 | 18.33 | 21 | 35.00 |
| 2. | ವೇಗದ ಮಾಹಿತಿಯ | | | | |
| | ರವಾನೆ | 49 | 81.67 | 39 | 65.00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕೇತ್ರ ಕಾರ್ಯದ ಪಡೆದ ಮಾಹಿತಿ

# ಭಾಗ–ಮೂರು

ಮೂರನೇ ಭಾಗದಲ್ಲಿ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ತೂಕದ ವಿಧಾನಗಳನ್ನು ಹಾಗೂ ರೈತರು ಕೃಷಿಗಾಗಿ ಬಳಸಿಕೊಳ್ಳುವ ಸಾಲದ ಮೂಲಗಳ ಕುರಿತು ವಿವರಿಸಲಾಗಿದೆ. ಮೇಲಿನ ಒಂದು ಮತ್ತು ಎರಡನೇ ಭಾಗದಲ್ಲಿ ಮಾರುಕಟ್ಟೆಯ ಕುರಿತು, ಮೂಲಸೌಲಭ್ಯಗಳು ಮತ್ತು ಸೇವೆಗಳನ್ನು ಕುರಿತು ಚರ್ಚಿಸಲಾಗಿತ್ತು. ಮುಂದಿನ ಕೋಷ್ಟಕಗಳಲ್ಲಿ ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ತೂಕ ಮಾಡುವ ವಿಧಾನ, ತೂಕ ಮಾಡುವ ಯಂತ್ರಗಳು, ತೂಕ ಮಾಡುವ ನಿಯಮ ಹೀಗೆ ಉತ್ಪನ್ನಗಳ ತೂಕಕ್ಕೆ ಸಂಬಂಧಪಟ್ಟಂತೆ ಕ್ಷೇತ್ರಕಾರ್ಯದಿಂದ ಬಂದ ಅಂಕಿ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಮೊದಲನೆಯದಾಗಿ ಕೋಷ್ಟಕ–43ರಲ್ಲಿ ಮಾರುಕಟ್ಟೆಯ ಆವರಣದಲ್ಲಿ ತೂಕದ ವ್ಯವಸ್ಥೆ ಇದೆಯೇ ಎನ್ನುವ ಪ್ರಶ್ನೆಗೆ ಮಾರುಕಟ್ಟೆಯ ಆವರಣದಲ್ಲಿ ತೂಕದ ವ್ಯವಸ್ಥೆ ಇದೆ ಎಂದು ಎಲ್ಲ ರೈತರು ಅಭಿಪ್ರಾಯಪಟ್ಟರು. ಕೇವಲ ಹೊಸಳ್ಳಿಯಲ್ಲಿ ಶೇ.3.33ರಷ್ಟು ರೈತರು ತಮಗೆ ಗೊತ್ತಿಲ್ಲ ಎಂದರೆ, ಹೊನ್ನಳ್ಳಿ ಗ್ರಾಮದಲ್ಲಿ ಶೇ.5ರಷ್ಟು ರೈತರು ತಮಗೆ ಗೊತ್ತಿಲ್ಲ ಎನ್ನುವ ಮಾಹಿತಿಯನ್ನು ನೀಡಿದ್ದಾರೆ. ತೂಕದ ವ್ಯವಸ್ಥೆಯಲ್ಲಿ ಯಾವ ವಿಧದ ಉಪಕರಣವನ್ನು ಬಳಸಲಾಗುತ್ತಿದೆ ಎನ್ನುವ ಪ್ರಶ್ನೆಗೆ ಹೊಸಳ್ಳಿ ಗ್ರಾಮದಲ್ಲಿ ಕ್ರಮವಾಗಿ ತ್ರಿಪಾದಾಸನ ಮಾಪಕ ಶೇ.3.33ರಷ್ಟು ರೈತರು, ಪ್ಲಾಟ್ ಫಾರಂ ಸ್ಕೇಲ್ ತೂಕದ ಯಂತ್ರ ಶೇ.8.33ರಷ್ಟು ರೈತರು ಎಲೆಕ್ಟ್ರಾನಿಕ್ ತೂಕದ ಯಂತ್ರ ಶೇ.88.34ರಷ್ಟು, ಹೊನ್ನಳ್ಳಿ ಗ್ರಾಮದಲ್ಲಿ ತ್ರಿಪಾದಾಸನ ಮಾಪಕ ಶೇ5.00ರಷ್ಟು ರೈತರು, ಪ್ಲಾಟ್ ಫಾರಂ ಸ್ಕೇಲ್ ತೂಕದ ಯಂತ್ರ ಶೇ.8.33ರಷ್ಟು ರೈತರು. ಎಲೆಕ್ಟ್ರಾನಿಕ್ ತೂಕದ ಯಂತ್ರ ಶೇ.86.67ರಷ್ಟು ರೈತರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಹೆಚ್ಚಿನ ಸಂಖ್ಯೆಯಲ್ಲಿ ಎಲೆಕ್ಟ್ರಾನಿಕ್ ತೂಕದ ಯಂತ್ರವೆಂದು ರೈತರ ಉತ್ತರವೂ ಬಂದಿದೆ. ಹಾಗೆಯೇ ಇದೇ ಪ್ರಶ್ನೆಗೆ ಸಂಬಂಧಿಸಿದಂತೆ ಅನೇಕ ರೈತರ ಅಭಿಪ್ರಾಯವು ಎಲೆಕ್ಟ್ರಾನಿಕ್ ತೂಕದ ಯಂತ್ರದಿಂದ ರೈತರಿಗೆ ತೂಕದಲ್ಲಾಗುವ ಮೋಸವನ್ನು ತಡೆಯಬಹುದು ಮತ್ತು ತೂಕವು ನ್ಯಾಯಯುತವಾಗಿರುತ್ತದೆ ಎಂದು ತಿಳಿಸಿದರು. ಮೊದಲೆಲ್ಲಾ ತೂಕದಲ್ಲಿ ರೈತರಿಗೆ ಹೆಚ್ಚಿನ ಅನ್ಯಾಯವಾಗುತ್ತಿತ್ತು. ಆದರೆ ಎಲೆಕ್ಟ್ರಾನಿಕ್ ತೂಕದ ಯಂತ್ರದಿಂದ ಅದನ್ನು ತಡೆಯಬಹುದಾಗಿದೆ.

ಕೋಷ್ಟಕ-43

ಕೃಷಿ ಮಾರುಕಟ್ಟೆಯಲ್ಲಿ ತೂಕದ ವಿವರಗಳು

| ಕ್ರ ಸಂ. | ತೂಕದ ವ್ಯವಸ್ಥೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 58 | 96.67 | 57 | 95.00 |
| 2. | ಇಲ್ಲ | 00 | 00 | 00 | 00 |
| 3. | ಗೊತ್ತಿಲ್ಲ | 2 | 3.33 | 3 | 5.00 |
| | ಒಟ್ಟು | 60 | 100 | 60 | 100 |
| | ತೂಕದ ಉಪಕರಣ | | | | |
| 1. | ತ್ರಿಪಾದಾಸನ ಮಾಪಕ | 2 | 3.33 | 3 | 5.00 |
| 2. | ಪ್ಲಾಟ್ ಫಾರಂ ಸ್ಕೇಲ್ ತೂಕದ ಯಂತ್ರ | 5 | 8.33 | 5 | 8.33 |
| 3. | ಎಲೆಕ್ಟ್ರಾನಿಕ್ ತೂಕದ ಯಂತ್ರ | 53 | 88.34 | 52 | 86.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕೇತ್ರಕಾರ್ಯದಿಂದ ಪಡೆದ ಮಾಹಿತಿ

ಕೋಷ್ಟಕ-44ರಲ್ಲಿ ಮಾರುಕಟ್ಟೆಯಲ್ಲಿ ತೂಕವನ್ನು ನ್ಯಾಯಯುತವಾಗಿ ಮಾಡಲಾಗುತ್ತದೆಯೇ ಎಂದಾಗ ಹೊಸಳ್ಳಿ ಗ್ರಾಮದಲ್ಲಿ ಹೌದು ಎಂದು ಶೇ.38.33ರಷ್ಟು ರೈತರು ತಿಳಿಸಿದರೆ, ಶೇ.61.67ರಷ್ಟು ರೈತರು ಇಲ್ಲ ಎನ್ನುವ ಮಾಹಿತಿಯನ್ನು ನೀಡಿದರು. ಹೊನ್ನಳ್ಳಿ ಗ್ರಾಮದಲ್ಲಿ ಹೌದು ಎಂದು ಶೇ.88.34ರಷ್ಟು ರೈತರು ಹೇಳಿದರೆ, ಇಲ್ಲ ಎಂದು ಶೇ.11.67ರಷ್ಟು ರೈತರು ತಿಳಿಸಿದ್ದಾರೆ. ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ಕೊಳ್ಳುವ ವಿಧಾನಗಳಾವವು ಎಂದರೆ ಹೊಸಳ್ಳಿಯಲ್ಲಿ ಎಲೆಕ್ಟ್ರಾನಿಕ್ ಡಿಜಿಟಲ್ ವೈಯಿಂಗ್ ಮಿಷನ್ ಶೇ.61.67ರಷ್ಟು ರೈತರೆಂದರೆ, ರೈತರ ಸಮ್ಮುಖದಲ್ಲಿ ತೂಕ ಮಾಡುವುದು ಎಂದು ಶೇ.33.33ರಷ್ಟು ರೈತರು ಹೇಳಿದರೆ, ಬಹಿರಂಗ ಒಪ್ಪಂದದ ಪದ್ಧತಿಯೆಂದು, ಶೇ.5 ರಷ್ಟು ರೈತರು ಮಾತ್ರವೆ ಹೇಳಿದ್ದಾರೆ. ಮತ್ತು ಹೊನ್ನಳ್ಳಿ ಗ್ರಾಮದಲ್ಲಿ ಎಲೆಕ್ಟ್ರಾನಿಕ್ ಡಿಜಿಟಲ್ ವೈಹಿಂಗ್ ಮಿಷನ್ ಶೇ.18.33 ರಷ್ಟು ರೈತರೆಂದರೆ, ರೈತರ ಸಮುಖದಲ್ಲಿ ತೂಕ ಮಾಡುವುದು ಎಂದು ಶೇ.56.67ರಷ್ಟು ರೈತರು ಹೇಳಿದರೆ, ಬಹಿರಂಗ ಒಪ್ಪಂದದ ಪದ್ಧತಿಯೆಂದು, ಶೇ.25.00ರಷ್ಟು ರೈತರು ತಮ್ಮ ಅಭಿಪ್ರಾಯ ಹೇಳಿದ್ದಾರೆ.

ಕೋಷ್ಟಕ-44

ಮಾರುಕಟ್ಟೆಯಲ್ಲಿ ತೂಕ ಮತ್ತು ಖರೀದಿ ನ್ಯಾಯಯುತ ವಿಧಾನಗಳ ವಿವರಗಳು

| ಕ್ರ ಸಂ. | ತೂಕ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ನ್ಯಾಯಯುತವಾಗಿದೆ | 23 | 38.33 | 53 | 88.34 |
| 2. | ನ್ಯಾಯಯುತವಾಗಿಲ್ಲ | 37 | 61.67 | 7 | 11.67 |
| | ಒಟ್ಟು | 60 | 100 | 60 | 100 |
| | ಉತ್ಪನ್ನಗಳನ್ನು ಕೊಳ್ಳುವ ವಿಧಾನ | | | | |
| 1. | ಎಲೆಕ್ಟ್ರಾನಿಕ್ ಡಿಜಿಟಲ್ ವೈಯಿಂಗ್ ಮಿಷ್‌ನ್ | 37 | 61.67 | 11 | 18.33 |
| 2. | ರೈತರ ಸಮ್ಮುಖದಲ್ಲಿ ತೂಕ ಮಾಡುವುದು | 20 | 33.33 | 34 | 56.67 |
| 3. | ಬಹಿರಂಗ ಒಪ್ಪಂದದ ಪದ್ಧತಿ | 3 | 5.00 | 15 | 25.00 |
| | ಒಟ್ಟು | 60 | 100 | 60 | 100 |

ಮಾಹಿತಿಯ ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

ಕೆಳಗಿನ ಕೋಷ್ಟಕ-45ರಲ್ಲಿ ತೂಕದವರಿಂದ ರೈತರಿಗೆ ತೂಕದ ಚೀಟಿಗಳನ್ನು ನೀಡಲಾಗುತ್ತದೆಯೇ ಎಂದು ಪ್ರಶ್ನಿಸಿದಾಗ ಬಹುತೇಕ ರೈತರು ಎರಡು ಗ್ರಾಮಗಳಲ್ಲಿಯೂ ತೂಕದ ಚೀಟಿಯನ್ನು ನೀಡುತ್ತಾರೆ ಎನ್ನುವ ಮಾಹಿತಿ ನೀಡಿದ್ದಾರೆ. ಅದರಲ್ಲೂ ಶೇ.87.99ರಷ್ಟು ರೈತರು ತೂಕದ ಚೀಟಿ ನೀಡುತ್ತಾರೆ ಎಂದು, ಶೇ.9.99ರಷ್ಟು ರೈತರು ತೂಕದ ಚೀಟಿ ನೀಡುವುದಿಲ್ಲವೆಂದು ಹೊಸಳ್ಳಿ ಗ್ರಾಮದಲ್ಲಿ ಹೇಳಿದರೆ. ಶೇ.93.33ರಷ್ಟು ರೈತರು ತೂಕದ ಚೀಟಿಯನ್ನು ನೀಡುತ್ತಾರೆಂದು, ಶೇ.6.67ರಷ್ಟು ರೈತರು ತೂಕದ ಚೀಟಿ ನೀಡಿಲ್ಲವೆಂದು ತಿಳಿಸಿರುತ್ತಾರೆ.

ಕೋಷ್ಟಕ-45

ಮಾರುಕಟ್ಟೆಯಲ್ಲಿ ಮಾರಾಟದ ಚೀಟಿ ನೀಡುವ ವಿವರಗಳು

| ಕ್ರ ಸಂ. | ಚೀಟಿ ನೀಡುವುದು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಹೌದು | 54 | 87.99 | 56 | 93.33 |
| 2. | ಇಲ್ಲ | 6 | 9.99 | 4 | 6.67 |
| | ಒಟ್ಟು | 60 | 100 | 60 | 100 |

ಮಾಹಿತಿಯ ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

# ಭಾಗ–ನಾಲ್ಕು

ಇಲ್ಲಿಯವರೆಗೆ ಮಾರುಕಟ್ಟೆಯ ಶಾಸನ 1966, ಮಾರಾಟದ ಸ್ಥಳ, ಮಾರಾಟ ಮಾಡುವ ವಿಧಾನ, ಮಾರಾಟ ಮಾಡುವ ಪ್ರಕ್ರಿಯೆ ಮತ್ತು ತೂಕದ ಕುರಿತು ವಿಶ್ಲೇಷಿಸಲಾಗಿದೆ. ಪ್ರಸ್ತುತ ನಾಲ್ಕನೆಯ ಭಾಗದಲ್ಲಿ ಕೃಷಿಗಾಗಿ ಹಣದ ಕೊಡು–ಕೊಳ್ಳುವ ವಿವರಗಳನ್ನು, ದಲ್ಲಾಳಿಗಳ ಕುರಿತು ಕ್ಷೇತ್ರಕಾರ್ಯದ ಮೂಲಕ ಕಲೆಹಾಕಿದ ಮಾಹಿತಿಯನ್ನು ಅಂಕಿ ಅಂಶಗಳ ಮೂಲಕ ಚರ್ಚಿಸಲಾಗಿದೆ. ಹಾಗೆಯೇ ಕೃಷಿ ಉತ್ಪನ್ನ ಅಡಮಾನದ ಸಾಲ ಯೋಜನೆಗಳನ್ನು, ರೈತರ ವಿಮೆ ಯೋಜನೆಗಳ ಕುರಿತು ಇದೇ ಭಾಗದಲ್ಲಿ ಚರ್ಚಿಸಲಾಗಿದೆ. ರೈತರು ಕೃಷಿಗಾಗಿ ಹಣ ಹೂಡುತ್ತಾರೆ ಮತ್ತು ಹಣವನ್ನು ಉತ್ಪನ್ನಗಳನ್ನು ಉತ್ಪಾದಿಸಲು ಬೀಜ, ಗೊಬ್ಬರ, ಕ್ರಿಮಿನಾಶಕಗಳನ್ನು ಕೊಳ್ಳುವುದಕ್ಕೆ ಬಳಸುತ್ತಾರೆ. ನಂತರ ಉತ್ಪಾದಿಸಿದ ಉತ್ಪನ್ನಗಳನ್ನು ಮಾರುಕಟ್ಟೆಗೆ ಹೋಗಿ ಮಾರಾಟ ಮಾಡಿ ಲಾಭವನ್ನು ಗಳಿಸುವರು. ಕೆಲವು ಸಲ ನಷ್ಟವನ್ನು ಅನುಭವಿಸುವರು. ಹಳೆಯ ಗಾದೆಮಾತಿನಂತೆ ರೈತರು ಮಳೆಯೊಂದಿಗೆ ಆಡುವ ಜೂಜಾಟ ಮಾತ್ರವಲ್ಲದೆ ರೈತರು ಇಂದಿನ ಮಾರುಕಟ್ಟೆಯಲ್ಲಿ ಪರದಾಟ ಎನ್ನುವಂತಾಗಿದೆ. ಅದಕ್ಕಾಗಿ ಸರಕಾರವು ಹಲವು ಯೋಜನೆಗಳನ್ನು ರೈತರಿಗೆ ಮಾರುಕಟ್ಟೆಯಲ್ಲಿ ಅನುಕೂಲವಾಗಲೆಂದು ರೂಪಿಸಲಾಗಿದೆ.

ಸ್ಟ್ರಕ್ಚರ್ ಆಫ್ ರೂರಲ್ ಮಾರ್ಕೆಟ್ ಫಾರ್ ಅಚಿವೀಂಗ್ ವರ್ಟಿಕಲ್ ಕೋಅರ್ಡಿನೆಶನ್ ಇನ್ ದಿ ಇಂಡಿಯನ್ ಫುಡ್ ಚೈನ್ ಎನ್ನುವ ಅಧ್ಯಯನದಲ್ಲಿ ಸ್ಯಾಡಿಪನ್ ರೈ ಭಾರತೀಯ ಆಹಾರ ಮಾರುಕಟ್ಟೆಯು ಆತ್ಯಂತ ವಿಶಾಲವಾಗಿದೆ. ಅದರಲ್ಲಿ ಕೊಳ್ಳುವವರಿಗೂ ಮತ್ತು ಮಾರುವವರಿಗೂ ಮಧ್ಯ ಮಧ್ಯವರ್ತಿಗಳ ದೊಡ್ಡ ಹಿಂಡೇ ಕಾರ್ಯ ನಿರ್ವಹಿಸುತ್ತಿರುತ್ತದೆ. ಕೃಷಿ ಹಿಡುವಳಿಯಲ್ಲಿ ಈ ಮಧ್ಯವರ್ತಿಗಳ ಪಾತ್ರ ಅಧಿಕವಾಗಿರುವುದರಿಂದ ಆಹಾರ ಉತ್ಪಾದನೆಯ ಗುಣಮಟ್ಟಕ್ಕಿಂತಲೂ ಆಹಾರ ಸರಕುಗಳ ಬೆಲೆ ಹೆಚ್ಚಳಕ್ಕೆ ಕಾರಣವಾಗಿರುವ ಅಂಶವನ್ನು ವಿಶ್ಲೇಷಿಸು ತ್ತಾರೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಯುನೈಟೆಡ್ ಕಿಂಗ್‌ಡಮ್, ಅಮೆರಿಕ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಾದ ಥೈಲ್ಯಾಂಡ್ ಇಂಡೋನೇಶ್ಯಾದಂತಹ ರಾಷ್ಟ್ರಗಳು ಆಹಾರ ಉತ್ಪಾದನೆಯ ಅಭಿವೃದ್ಧಿಯಲ್ಲಿ ಬೀಜ ಕಂಪನಿಗಳು ಬಂಡವಾಳ ಹೂಡುವುದರ ಮೂಲಕ ಮಹತ್ವದ ಪಾತ್ರವನ್ನು ವಹಿಸುತ್ತಿವೆ.

ಮೇಲಿನ ಅಧ್ಯಯದಲ್ಲಿ ಹೇಗೆ ರೈತರು ವಿವಿಧ ರೀತಿಯ ಶುಲ್ಕಗಳನ್ನು ನೇರವಾಗಿ ಮತ್ತು ಪರೋಕ್ಷವಾಗಿ ಮಾರುಕಟ್ಟೆಯಲ್ಲಿ ಭರಿಸಬೇಕಾಗುತ್ತದೆ ಎನ್ನುವುದನ್ನು ತಿಳಿಸಿದ್ದಾರೆ. ಈ ಮಾಹಿತಿಗೆ ಪೂರಕವಾಗಿ ಕೆಳಗಿನ ಕೋಷ್ಟಕ–46ರಲ್ಲಿ ರೈತರಿಗೆ ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ಮಾರಾಟ ಮಾಡಿದಾಗ ಯಾವ ರೀತಿ ಶುಲ್ಕ ಭರಿಸಬೇಕಾಗುತ್ತದೆ ಎಂದಾಗ ಹೊಸಳ್ಳಿ ಗ್ರಾಮದಲ್ಲಿ ತೂಕದ ಶುಲ್ಕವೆಂದು ಶೇ.41.67ರಷ್ಟು ರೈತರು, ಶೇ.25ರಷ್ಟು ರೈತರು ಹಮಾಲಿ

ಶುಲ್ಕ, ಶೇ.1.67ರಷ್ಟು ರೈತರು ವರ್ಗೀಕರಣ ಶುಲ್ಕ, ಶೇ.16.67ರಷ್ಟು ರೈತರು ಸಾರಿಗೆ ಶುಲ್ಕ, ಶೇ.8.33ರಷ್ಟು ಮತ್ತು ಉತ್ಪನ್ನಗಳನ್ನು ಆವರಣದಲ್ಲಿ ಒಣಗಿಸಲು ಯಾವುದೇ ಶುಲ್ಕವಿರುವುದಿಲ್ಲ ಎನ್ನುವ ಮಾಹಿತಿ ನೀಡಿದ್ದಾರೆ. ಮಾರುಕಟ್ಟೆಯಲ್ಲಿ ಇತರೆ ಶುಲ್ಕ ಶೇ.6.67ರಷ್ಟು ಇದೆ ಎನ್ನುವ ವಿವರಗಳು ದೊರೆತಿವೆ. ಹೊನ್ನಳ್ಳಿ ಗ್ರಾಮದಲ್ಲಿ ತೂಕದ ಶುಲ್ಕವೆಂದು ಶೇ.26.67ರಷ್ಟು ರೈತರು, ಶೇ.25ರಷ್ಟು ರೈತರು ಹಮಾಲಿ ಶುಲ್ಕ, ಶೇ.5ರಷ್ಟು ರೈತರು ವರ್ಗೀಕರಣ ಶುಲ್ಕ, ಶೇ.25ರಷ್ಟು ರೈತರು ಸಾರಿಗೆ ಶುಲ್ಕ, ಶೇ.3.33ರಷ್ಟು ಮತ್ತು ಉತ್ಪನ್ನಗಳನ್ನು ಆವರಣದಲ್ಲಿ ಒಣಗಿಸಲು ಶೇ.3.33 ಶುಲ್ಕವಿದ್ದು, ಮಾರುಕಟ್ಟೆಯಲ್ಲಿ ಇತರೆ ಶುಲ್ಕ ಶೇ.11.67ರಷ್ಟು ಶುಲ್ಕವಿರುತ್ತದೆ ಎಂದು ರೈತರು ತಿಳಿಸಿದ್ದಾರೆ. ಒಟ್ಟಾರೆ ಮಾರುಕಟ್ಟೆಯಲ್ಲಿ ರೈತರು ವಿವಿಧ ರೀತಿಯ ಶುಲ್ಕಗಳನ್ನು ಭರಿಸುತ್ತಾರೆ. ರೈತರಿಗೆ ಮಾರುಕಟ್ಟೆಯಲ್ಲಿ ಉತ್ಪನ್ನಗಳು ಮಾರಾಟವಾದ ತಕ್ಷಣವೇ ಹಣ ನೀಡುತ್ತಾರೆಯೇ ಎಂದು ರೈತರನ್ನು ಹೊಸಳ್ಳಿಯಲ್ಲಿ ಕೇಳಿದಾಗ, ಮಾರಾಟವಾದ ತಕ್ಷಣವೆ ಕೊಡುತ್ತಾರೆ ಎಂದು ಶೇ.54 ರಷ್ಟು ರೈತರು ಮತ್ತು ಶೇ.10ರಷ್ಟು ರೈತರು ಇಲ್ಲವೆಂದು ತಿಳಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ, ಮಾರಾಟವಾದ ತಕ್ಷಣವೆ ಕೊಡುತ್ತಾರೆ ಎಂದು ಶೇ.78.33ರಷ್ಟು ರೈತರು ಮತ್ತು ಶೇ.21.67ರಷ್ಟು ರೈತರು ಇಲ್ಲವೆಂದು ಹೇಳಿದ್ದಾರೆ.

**ಕೋಷ್ಟಕ–46**

**ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ಮಾರಾಟ ಮಾಡಿದಾಗ ಶುಲ್ಕ ಭರಿಸಬೇಕಾಗುವುದರ ವಿವರಗಳು**

| ಕ್ರ ಸಂ. | ಶುಲ್ಕ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ತೂಕದ ಶುಲ್ಕ | 25 | 41.67 | 16 | 26.67 |
| 2. | ಹಮಾಲಿ ಶುಲ್ಕ | 15 | 25.00 | 15 | 25.00 |
| 3. | ವರ್ಗೀಕರಣ ಶುಲ್ಕ | 1 | 1.67 | 3 | 5.00 |
| 4. | ಸಾರಿಗೆ ಶುಲ್ಕ | 10 | 16.67 | 15 | 25.00 |
| 5. | ದಾಸ್ತಾನು ಶುಲ್ಕ | 5 | 8.33 | 2 | 3.33 |
| 6. | ಉತ್ಪನ್ನ ಒಣಗಿಸುವ ಶುಲ್ಕ | 00 | 00 | 2 | 3.33 |
| 7. | ಇತರೆ | 4 | 6.67 | 7 | 11.67 |
| | ಒಟ್ಟು | 60 | 100 | 60 | 100 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಮುಂದಿನ ಕೋಷ್ಟಕ-47ರಲ್ಲಿ ಉತ್ಪನ್ನಗಳನ್ನು ಮಾರಾಟ ಮಾಡಿದ ತಕ್ಷಣ ಹಣ ನೀಡಿಲ್ಲ ಎಂಬುದಕ್ಕೆ ಕಾರಣಗಳೇನು ಎಂದು ಕೇಳಿದರೆ ಇದಕ್ಕೆ ಉತ್ತರವಾಗಿ ಹೊಸಳ್ಳಿ ಗ್ರಾಮದಲ್ಲಿ ಶೇ.8.33ರಷ್ಟು ರೈತರು ತಿಂಗಳ ನಂತರವೆಂದು, ಶೇ.58.33ರಷ್ಟು ರೈತರು ಸಾಲಕ್ಕೆ ವಜಾ ಮಾಡಿಕೊಳ್ಳುತ್ತಾರೆಂದು ಮತ್ತು ಶೇ.33.34ರಷ್ಟು ರೈತರು ಬಿಲ್‌ಗಳನ್ನು ನೀಡಿ ಕೆಲವು ದಿನಗಳ ನಂತರ ಕೊಡುವ ಪದ್ಧತಿಯೂ ಇದೆ ಎಂದು ರೈತರು ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.10ರಷ್ಟು ರೈತರು ತಿಂಗಳ ನಂತರವೆಂದು, ಶೇ.83.33ರಷ್ಟು ರೈತರು ಸಾಲಕ್ಕೆ ವಜಾ ಮಾಡಿಕೊಳ್ಳುತ್ತಾರೆಂದು ಮತ್ತು ಶೇ.6.67ರಷ್ಟು ರೈತರು ಬಿಲ್‌ಗಳನ್ನು ನೀಡಿ ಕೆಲವು ದಿನಗಳ ನಂತರ ಕೋಡುವ ಪದ್ಧತಿಯೂ ಇದೆ ಎನ್ನುವ ಮಾಹಿತಿಯನ್ನು ತಿಳಿಸಿದ್ದಾರೆ.

**ಕೋಷ್ಟಕ-47**

**ಉತ್ಪನ್ನಗಳನ್ನು ಮಾರಾಟ ಮಾಡಿದ ಮೇಲೆ ಮಾರಾಟಗಾರರು ರೈತರಿಗೆ ಹಣ ನೀಡಿದ ವಿವರಗಳು**

| ಕ್ರ ಸಂ. | ಹಣ ಸಂದಾಯ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಹೌದು | 54 | 90.00 | 47 | 78.33 |
| 2. | ಇಲ್ಲ | 6 | 10.00 | 13 | 21.67 |
| | ಒಟ್ಟು | 60 | 100 | 60 | 100 |
| | ಹಣ ಸಂದಾಯದ ವಿಧಾನ | | | | |
| 1. | ತಿಂಗಳ ನಂತರ | 5 | 8.33 | 6 | 10.00 |
| 2. | ಸಾಲಕ್ಕೆ ವಜಾ ಮಾಡುವುದು | 35 | 58.33 | 50 | 83.33 |
| 3. | ಚೀಟಿ(ಬಿಲ್)ಕೊಡುತ್ತಾರೆ | 20 | 33.34 | 4 | 6.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕೇತ್ರ ಕಾರ್ಯದಿಂದ ಪಡೆದ ಮಾಹಿತಿ

ಕೆಳಗಿನ ಕೋಷ್ಟಕ-48ರಲ್ಲಿ ಮಾರುಕಟ್ಟೆಯಲ್ಲಿ ಕಾರ್ಯಕರ್ತರು ಅನಧಿಕೃತ ಅಥವಾ ಹೆಚ್ಚು ಮಾರುಕಟ್ಟೆಯ ದರಗಳನ್ನು ವಸೂಲಿ ಮಾಡುತ್ತಿರುವರೇ ಎಂದಾಗ ಎರಡು ಗ್ರಾಮಗಳಲ್ಲಿಯೂ ಹೌದು ಎನ್ನುವ ಉತ್ತರವನ್ನು ನೀಡಿದ್ದಾರೆ. ಹೊಸಳ್ಳಿ ಗ್ರಾಮದಲ್ಲಿ ಶೇ.78.33ರಷ್ಟು ರೈತರು ಹೌದು ಎಂದು, ಶೇ.21.67ರಷ್ಟು ರೈತರು ಇಲ್ಲ ಎಂದು ಹೇಳಿದರೆ, ಹೊನ್ನಳ್ಳಿ ಗ್ರಾಮದಲ್ಲಿ ಶೇ.46.67ರಷ್ಟು ರೈತರು ಹೌದು ಎಂದು, ಶೇ.54.33ರಷ್ಟು ರೈತರು ಇಲ್ಲ ಎನ್ನುವ ಅಂಕಿ

ಅಂಶಗಳು ದೊರೆತಿರುತ್ತವೆ. ಹಣ ವಸೂಲಿಯು ವಿವಿಧ ರೂಪದಲ್ಲಿದ್ದು, ಮಾರುಕಟ್ಟೆಯಲ್ಲಿ ಕಾರ್ಯಕರ್ತರು ಖುಷಿಗೆ ಎಂದು, ಮಾಮೂಲಿ ಎಂದು ವಸೂಲಿ ಮಾಡುತ್ತಾರೆ ಎನ್ನುವ ವಿಷಯವನ್ನು ರೈತರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಂಚಿಕೊಂಡರು. ದಲ್ಲಾಳರು, ವರ್ತಕರು ರೈತರ ಹತ್ತಿರ ಹಣದ ರೂಪದಲ್ಲಿ ಅಥವಾ ಹುಟ್ಟುವಳಿ ರೂಪದಲ್ಲಿ ಏನನ್ನಾದರೂ ವಸೂಲಿ ಮಾಡುತ್ತಿರುವರೇ ಎಂದಾಗ ರೈತರು ಹೌದು ಎಂದು ಶೇ.31.67ರಷ್ಟು ಮತ್ತು ಇಲ್ಲವೆಂದು ಶೇ.68.33ರಷ್ಟು ರೈತರು ಹೊಸಳ್ಳಿ ಗ್ರಾಮದಲ್ಲಿ ಹೇಳಿದರೆ, ಹೊನ್ನಳ್ಳಿ ಗ್ರಾಮದಲ್ಲಿ ಹೌದು ಎಂದು, ಶೇ.33.34ರಷ್ಟು ರೈತರು, ಇಲ್ಲವೆಂದು ಶೇ.67.66ರಷ್ಟು ರೈತರು ತಮ್ಮ ಅಭಿಪ್ರಾಯವನ್ನು ತಿಳಿಸಿದರು.

**ಕೋಷ್ಟಕ-48**

**ಮಾರುಕಟ್ಟೆಯಲ್ಲಿ ಕಾರ್ಯಕರ್ತರು ಅನಧಿಕೃತವಾಗಿ ಹಣವಸೂಲಿ ಮಾಡುವುದರ ವಿವರಗಳು**

| ಕ್ರ. ಸಂ. | ಅನಧಿಕೃತ ಹಣ ವಸೂಲಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಹೌದು | 47 | 78.33 | 28 | 46.67 |
| 2. | ಇಲ್ಲ | 13 | 21.67 | 32 | 54.33 |
| | ಒಟ್ಟು | 60 | 100 | 60 | 100 |
| | ವಿವರ ಕೊಡಿ | | | | |
| 1. | ಖುಷಿಗೆ ಕೊಡಿ | 36 | 60.00 | 22 | 36.67 |
| 2. | ಮಾಮೂಲಿ ಕೊಡಿ | 24 | 40.00 | 38 | 63.33\ |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಪ್ರಶ್ನೆಗೆ ಪೂರಕವಾದ ಅಧ್ಯಯನದಲ್ಲಿ ಅಲಿ ಮತ್ತು ಕಪೂರ್, ದಿ ಪರ್‌ಸೆಪ್‌ಷನ್ಸ್ ಆಫ್ ಫಾರ್‌ಮರ್ಸ್ ಅಬೌಟ್ ರಿಸ್ಕ್ಸ್ ಇನ್ ಪ್ರೊಡಕ್ಷನ್ ಆಫ್ ಫ್ರೂಟ್ ಆ್ಯಂಡ್ ವೆಜಿಟೆಬಲ್ಸ್ (2008) ಅಧ್ಯಯನದಲ್ಲಿ ಉತ್ತರ ಪ್ರದೇಶದ ಆರು ಜಿಲ್ಲೆಗಳನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದು, ಅಧ್ಯಯನದಲ್ಲಿ ಉತ್ಪಾದನೆ ಮತ್ತು ಬೆಲೆಗಳಿಂದ ಮುಖ್ಯವಾಗಿ ತರಕಾರಿ ಬೆಳೆಗಳಿಗೆ ಮತ್ತು ಹಣ್ಣುಗಳಿಗೆ ಸಂಬಂಧಿಸಿದಂತೆ ಅನೇಕ ರೀತಿಯ ತೊಂದರೆಗಳು ಎದುರಾಗುತ್ತವೆ ಎನ್ನುವ ಅಂಶವನ್ನು ವಿಶ್ಲೇಷಿಸಿದ್ದಾರೆ. ಅಧ್ಯಯನದಲ್ಲಿ ಸಾರ್ವಜನಿಕವಾಗಿ ಸರ್ಕಾರದ ಮಧ್ಯಸ್ಥಿಕೆಯಿಂದ

ಮಾರಾಟಗಾರರಿಗೆ ಎದುರಾಗುವ ತೊಂದರೆಗಳನ್ನು ಸ್ವಲ್ಪ ಮಟ್ಟಿಗೆ ಕಡಿಮೆಗೊಳಿಸಬಹುದು ಅಂದರೆ ಸರಿಯಾದ ಸಮಯಕ್ಕೆ ಮಾಹಿತಿ ರವಾನೆ ಹಣಕಾಸಿನ ಸಾಲ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸುವುದು, ಮಾರುಕಟ್ಟೆಯಲ್ಲಿ ಬೆಲೆಗಳನ್ನು ಪ್ರೋತ್ಸಾಹಿಸುವುದರಿಂದ ವಿವಿಧ ರೀತಿಯ ಇನ್ಸ್‌ಶೂರೆನ್ಸ್ ಸ್ಕೀಮ್‌ಗಳನ್ನು ಬಿಡುಗಡೆ ಮಾಡುವುದರಿಂದ ಕನಿಷ್ಠ ರೈತರಿಗೆ(ಮಾರ್ಜಿನಲ್) ಸ್ವಲ್ಪ ಮಟ್ಟದ ಅನುಕೂಲವಾಗುತ್ತದೆ. ಇದರೊಂದಿಗೆ ರೈತರು ತಕ್ಕ ಮಟ್ಟಿಗೆ ಇವುಗಳ ಲಾಭವನ್ನು ಪಡೆಯಲು ಸಂಬಂಧಪಟ್ಟ ಅಧಿಕಾರಿಗಳು ಕಾಲಕಾಲಕ್ಕೆ ರೈತರಿಗೆ ಎದುರಾಗುವ ಸಮಸ್ಯೆಗಳನ್ನು ಅರಿತು ರೈತರಿಗೆ ಸ್ಪಂದಿಸಿ ಸಂಬಂಧಪಟ್ಟ ಸರ್ಕಾರದ ಅನುಕೂಲವನ್ನು ಮಾಡಬೇಕು ಎನ್ನುವುದಾಗಿದೆ.

ಮೇಲಿನ ಅಧ್ಯಯನಕ್ಕೆ ಪೂರಕವಾದ ಪ್ರಶ್ನೆಯನ್ನು ಕೆಳಗಿನ ಕೋಷ್ಟಕ–49ರಲ್ಲಿ ಹುಟ್ಟುವಳಿಗಳ ತೂಕವನ್ನು ಮಾಡುವಾಗ ಮಾರುಕಟ್ಟೆಯಲ್ಲಿ ಯಾವ ರೀತಿಯ ಕ್ರಮಗಳನ್ನು ಅನುಸರಿಸುತ್ತಾರೆಂದು ಕೇಳಿದಾಗ ಹೆಚ್ಚಿನ ರೈತರು ಹಿಂದೆಲ್ಲ ಹೆಚ್ಚಾಗಿ ನೇರವಾಗಿ ಹುಟ್ಟುವಳಿಗಳನ್ನೇ ತೂಕ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಹುಟ್ಟುವಳಿಗಳ ತೂಕದಲ್ಲಿಯೂ ಕೆಲವು ಬದಲಾವಣೆಗಳನ್ನು ಕಾಣಬಹುದಾಗಿದೆ. ನಾವು ನಮ್ಮ ಊರುಗಳಿಗೆ ಬರುವ ಏಜೆಂಟರಿಗೆ ಬೆಳೆದ ಉತ್ಪನ್ನಗಳನ್ನು ಮಾರಾಟ ಮಾಡಿದಾಗ, ಉತ್ಪನ್ನಗಳನ್ನು ಕೊಳ್ಳುವ ಏಜೆಂಟರಗಳು ಹುಟ್ಟುವಳಿಗಳು ಇರುವ ಚೀಲಗಳನ್ನೇ ತೂಕಕ್ಕೆ ಇಟ್ಟು ಹುಟ್ಟುವಳಿಗಳನ್ನು ಖರೀದಿಸುತ್ತಾರೆ ಮತ್ತು ಚೀಲದ ತೂಕವನ್ನು ಒಟ್ಟು ಮಾಡಿ ಕೊನೆಗೆ ಕಳೆಯುತ್ತಾರೆ. ಆದರೆ ಹೀಗೆ ಮಾಡುವಾಗ ಕೆಲವಷ್ಟು ಕೆ.ಜಿ.ಗಳ ತೂಕವನ್ನು ಏಜೆಂಟರಗಳು ಮರೆಮಾಚುತ್ತಾರೆ ಎನ್ನುವ ಹುಟ್ಟುವಳಿಗಳನ್ನು ಕೊಳ್ಳುವ ಏಜೆಂಟಗಳಿಂದ ರೈತರಿಗಾಗುವ ಅನ್ಯಾಯವನ್ನು ಸ್ವತಃ ರೈತರೇ ಹೇಳುತ್ತಾರೆ. ಮಾರುಕಟ್ಟೆಯಲ್ಲಿ ಶೇ.16.67ರಷ್ಟು ರೈತರು ಒಟ್ಟು ಚೀಲದ ತೂಕ ಕಳೆಯಲಾಗುತ್ತದೆ ಎಂದರೆ, ಶೇ.25ರಷ್ಟು ರೈತರು ತಕ್ಕಡಿಯ ಮತ್ತೊಂದು ಭಾಗದಲ್ಲಿ ಖಾಲಿ ಚೀಲ ಇಡಲಾಗುತ್ತದೆ ಎಂದು, ಶೇ.58.33ರಷ್ಟು ರೈತರು ನೇರವಾಗಿ ಹುಟ್ಟುವಳಿಗಳನ್ನೇ ತೂಕ ಮಾಡಲಾಗುತ್ತದೆ ಎನ್ನುವ ಮಾಹಿತಿಯನ್ನು ಹೊಸಳ್ಳಿಯಲ್ಲಿ ಹೇಳಿದರೆ, ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿ ಶೇ.16.67ರಷ್ಟು ರೈತರು ಒಟ್ಟು ಚೀಲದ ತೂಕ ಕಳೆಯಲಾಗುತ್ತದೆ ಎಂದರೆ, ಶೇ.15ರಷ್ಟು ರೈತರು ತಕ್ಕಡಿಯ ಮತ್ತೊಂದು ಭಾಗದಲ್ಲಿ ಖಾಲಿ ಚೀಲ ಇಡಲಾಗುತ್ತದೆ ಎಂದು, ಶೇ.68.33ರಷ್ಟು ರೈತರು ನೇರವಾಗಿ ಹುಟ್ಟುವಳಿಗಳನ್ನೇ ತೂಕ ಮಾಡಲಾಗುತ್ತದೆ ಎಂದು ಹೊನ್ನಳ್ಳಿ ಗ್ರಾಮದ ರೈತರು ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹೊನ್ನಳ್ಳಿಯ ಇನ್ನೊಬ್ಬ ರೈತರು ಮಾರುಕಟ್ಟೆಯಲ್ಲಿ ಹುಟ್ಟುವಳಿಗಳನ್ನು ಮಾರಾಟ ಮಾಡುವಾಗ ರೈತರು ಕೆಲವೊಂದು ಖರ್ಚುಗಳನ್ನು ಭರಿಸಬೇಕಾಗುತ್ತದೆ.

ಉದಾಹರಣೆಗೆ ತೂಕ ಮಾಡುವಾಗ ಬಾಜಿ ಎಂದು ಇಂತಿಷ್ಟು ಹುಟ್ಟುವಳಿಗಳನ್ನು ತೆಗೆದುಕೊಳ್ಳುತ್ತಾರೆ, ಹಮಾಲಿಗಳು ತಮಗೆ ಎಂದು ಒಂದಿಷ್ಟು ಕೆ.ಜಿ.ಯಷ್ಟು ಹುಟ್ಟುವಳಿಗಳನ್ನು ತೆಗೆದಿರಿಸಿಕೊಳ್ಳುತ್ತಾರೆ ಎಂದು ಹೇಳುತ್ತಾರೆ. ರೈತ ಭೀಮಾನಾಯ್ಕರ ಪ್ರಕಾರ ಕೃಷಿ ಮಾರುಕಟ್ಟೆಗೆ ಹೋಗಿ ಹುಟ್ಟುವಳಿಗಳನ್ನು ಮಾರಾಟ ಮಾಡಲು ದೊಡ್ಡ ರೈತರು ಮಾತ್ರವೇ ಕರೆಕ್ಟ್ ಎನ್ನುವ ತಮ್ಮ ಅನುಭವದ ಮಾತನ್ನು ಉತ್ಪನ್ನಗಳನ್ನು ಉತ್ಪಾದಿಸಿದ ಮೇಲೆ ಕೃಷಿ ಮಾರುಕಟ್ಟೆಯಲ್ಲಿ ಹೋಗಿ ಮಾರಾಟ ಮಾಡಿದರೆ ಲಾಭ ಪಡೆಯಬಹುದಾ ಅಥವಾ ಊರಿನಲ್ಲಿ ಬರುವ ಏಜೆಂಟ್‌ಗಳಿಗೆ ಮಾರಿದರೆ ಲಾಭ ಹೆಚ್ಚೇ ಎನ್ನುವ ಕುರಿತು ಮಾಹಿತಿಯನ್ನು ಹಂಚಿಕೊಂಡರು.

**ಕೋಷ್ಟಕ–49**

**ಮಾರುಕಟ್ಟೆಯಲ್ಲಿ ಉತ್ಪನ್ನಗಳನ್ನು ಮಾರಾಟ ಮಾಡುವ ಪದ್ಧತಿಯ ವಿವರಗಳು**

| ಕ್ರ ಸಂ. | ಹುಟ್ಟುವಳಿಯ ತೂಕ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಒಟ್ಟು ಚೀಲದ ತೂಕ ಕಳೆಯಲಾಗುತ್ತದೆ | 10 | 16.67 | 10 | 16.67 |
| 2. | ತಕ್ಕಡಿಯ ಮತ್ತೊಂದು ಭಾಗದಲ್ಲಿ ಖಾಲಿ ಚೀಲ ಇಡಲಾಗುತ್ತದೆ | 15 | 25.00 | 9 | 15.00 |
| 3. | ನೇರವಾಗಿ ಉತ್ಪನ್ನಗಳನ್ನು ತೂಕ ಮಾಡುತ್ತಾರೆ | 35 | 58.33 | 41 | 68.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

ಕೆಳಗಿನ ಕೋಷ್ಟಕ–50ರಲ್ಲಿ ರೈತರಿಗೆ ನೀಡುವ ಕೃಷಿ ಉತ್ಪನ್ನಗಳ ಅಡಮಾನ ಸಾಲ ಯೋಜನೆಯನ್ನು ಪಡೆದಿರುತ್ತೀರಾ ಎಂದಾಗ ಹೊಸಳ್ಳಿಯ ರೈತರು ನಮ್ಮ ತಂದೆಯವರ ಕಾಲದಲ್ಲಿ ತೆಗೆದು ಕೊಂಡಿದ್ದರು ಇತ್ತೀಚೆಗೆ ನಾವು ತೆಗೆದುಕೊಂಡಿಲ್ಲ, ಅದೆಲ್ಲ ತುಂಬಾ ರಿಸ್ಕ್ ಮೇಡಂ ಎನ್ನುತ್ತಿದ್ದಾರೆ. ರೈತ ಕಾರ್ತಿಕ್ ಗೌಡ. ಈ ಯೋಜನೆಯನ್ನು ಹೊಸಳ್ಳಿಯಲ್ಲಿ ಶೇ. 10.00ರಷ್ಟು ರೈತರು ಮಾತ್ರವೇ ಅಡಮಾನ ಸಾಲವನ್ನು ತೆಗೆದುಕೊಂಡಿರುವುದಾಗಿ ಮತ್ತು ಶೇ.90ರಷ್ಟು ರೈತರು ಇಲ್ಲ ಎನ್ನುವ ಅನಿಸಿಕೆಗಳನ್ನು ತಿಳಿಸಿದ್ದಾರೆ. ಹೊನ್ನಳ್ಳಿಯಲ್ಲಿ ಶೇ. 8.33ರಷ್ಟು ರೈತರು ಅಡಮಾನ ಸಾಲವನ್ನು ತೆಗೆದುಕೊಂಡಿದ್ದು, ಶೇ.91.67ರಷ್ಟು ರೈತರು ತಾವು

ಅಡಮಾನ ಸಾಲ ಯೋಜನೆಯಲ್ಲಿ ಸಾಲ ತೆಗೆದುಕೊಂಡಿರುವುದಿಲ್ಲವೆಂದು ಮತ್ತು ಕೆಲವರು ತಮಗೆ ಈ ಯೋಜನೆಯ ಮಾಹಿತಿಯೇ ತಿಳಿದಿಲ್ಲ ಎನ್ನುವ ವಿಚಾರವನ್ನು ಹೇಳಿದರು. ಕೃಷಿ ಅಡಮಾನ ಸಾಲವನ್ನು ಎಷ್ಟು ಪಡೆದಿರುತ್ತೀರಿ ಎಂದು ರೈತರನ್ನು ಕೇಳಿದಾಗ ಹೊಸಳ್ಳಿಯಲ್ಲಿ ಶೇ.91.67ರಷ್ಟು ಭಾಗ ಉತ್ಪನ್ನಗಳ ಮೌಲ್ಯದ ಶೇ.90ರಷ್ಟು, ಮತ್ತು ರೂ.200000.00 ಗರಿಷ್ಠ ಸಾಲವನ್ನು ಶೇ.8.33ರಷ್ಟು ರೈತರು ಪಡೆದಿರುತ್ತಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.98.33 ರಷ್ಟು ಭಾಗ ಉತ್ಪನ್ನಗಳ ಮೌಲ್ಯದ ಶೇ.90ರಷ್ಟು, ಮತ್ತು ರೂ.200000.00ಗರಿಷ್ಠ ಸಾಲವನ್ನು ಶೇ.1.67ರಷ್ಟು ರೈತರು ಪಡೆದಿರುತ್ತಾರೆ. ಮೇಲಿನ ಅಂಕಿ ಅಂಶಗಳನ್ನು ನೋಡಿದಾಗ, ಸರಕಾರದಿಂದ ಅನೇಕ ಯೋಜನೆಗಳಿವೆ. ಆದರೆ ರೈತರಿಗೆ ಎಷ್ಟೋ ಯೋಜನೆಗಳ ಕುರಿತು ಮಾಹಿತಿಯೇ ಇರುವುದಿಲ್ಲಾ ಎನ್ನುವ ಸಂಗತಿಯನ್ನು ಕ್ಷೇತ್ರಕಾರ್ಯ ಮಾಡಿ ಅಂಕಿ–ಅಂಶಗಳ ವಿಶ್ಲೇಷಣೆ ಮಾಡಿದ ಮೇಲೆ ತಿಳಿಯುತ್ತದೆ, ಸರಕಾರದಿಂದ ಕಾಲಕಾಲಕ್ಕೆ ಹೊಸ ಹೊಸ ಯೋಜನೆಗಳು ಬಿಡುಗಡೆಯಾಗುತ್ತಿವೆ. ಆದರೆ ಅವು ರೈತರಿಗೆ ತಲುಪುವಲ್ಲಿ ವಿಫಲವಾಗುತ್ತಿವೆ ಎನ್ನುವ ಅಂಶ ನನ್ನ ಅಧ್ಯಯನದಲ್ಲಿ ಬೆಳಕಿಗೆ ಬಂದಿದೆ.

**ಕೋಷ್ಟಕ–50**

**ರೈತರು ಕೃಷಿ ಉತ್ಪನ್ನ ಅಡಮಾನ ಸಾಲ ಯೋಜನೆಯ ವಿವರಗಳು**

| ಕ್ರ ಸಂ. | ಅಡಮಾನ ಸಾಲ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಪಡೆದಿರುತ್ತಾರೆ | 6 | 10.00 | 5 | 8.33 |
| 2. | ಪಡೆದಿರುವುದಿಲ್ಲ | 54 | 90.00 | 55 | 91.67 |
| | ಒಟ್ಟು | 60 | 100 | 60 | 100 |
| | ಸಾಲದ ಅವಧಿ | | | | |
| 1. | ಕನಿಷ್ಠ 90ದಿನ ಬಡ್ಡಿರಹಿತ | 55 | 91.67 | 59 | 98.33 |
| 2. | ಗರಿಷ್ಠ 180 ಬಡ್ಡಿ ಸಹಿತ | 5 | 8.33 | 1 | 1.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದ ಮೂಲಕ

ಪ್ರಸುತ ನಾಲ್ಕನೇ ಭಾಗದಲ್ಲಿ ರೈತರ ವಿಮೆ ಯೋಜನೆಯ ಕುರಿತು ಕೆಳಗಿನ ಕೋಷ್ಟಕ–51ರಲ್ಲಿ ಚರ್ಚಿಸಿದ್ದೇನೆ. ರೈತರಿಗೆ ವಿವಿಧ ರೀತಿಯ ವಿಮೆ ಸೌಲಭ್ಯಗಳನ್ನು ಸರಕಾರ ನೀಡುತ್ತಾ ಬಂದಿದೆ. ರೈತರಿಗಾಗಿ ಪ್ರತಿ ವರ್ಷ ಬಜೆಟ್ ಮಂಡನೆಯ ಸಮಯದಲ್ಲಿ ಹೆಚ್ಚಿನ ಆದ್ಯತೆ

ಕೊಟ್ಟು ಹೆಚ್ಚಿನ ಅನುದಾನವನ್ನು ಘೋಷಿಸುತ್ತಾರೆ, ವಿನಾ ರಾಜಕಾರಣಿಗಳಿಗೆ ಅನುದಾನ ಘೋಷಿಸುವಾಗ ಇರುವ ರೈತರ ಕುರಿತು ಮಹತ್ವ ನಂತರದ ದಿನಗಳಲ್ಲಿ ಅಷ್ಟಾಗಿ ಕಾಣುವುದಿಲ್ಲ. ಅಂದರೆ ಯೋಜನೆಗಳನ್ನು ರೂಪಿಸುವಾಗ ಮತ್ತು ಅನುದಾನವನ್ನು ಬಿಡುಗಡೆ ಮಾಡುವಾಗ ತುಂಬಾ ಜೋರಾಗಿಯೇ ರಾಜಕಾರಣಿಗಳು ಬೊಬ್ಬೆ ಹೊಡೆಯುತ್ತಾರೆ. ಅದೇ ಹುಮ್ಮಸ್ಸು ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ರಾಜಕಾರಣಿಗಳು ತಮ್ಮ ಶ್ರಮವನ್ನು ಹೆಚ್ಚು ಹಾಕುವುದಿಲ್ಲ ಎನ್ನುವುದಕ್ಕೆ ರೈತರ ವಿಮೆ ಯೋಜನೆಯ ನನ್ನ ಅಧ್ಯಯನದ ಈ ಅಂಕಿ ಅಂಶಗಳೇ ಸಾಕ್ಷಿಯಾಗಿವೆ. ಎರಡು ಗ್ರಾಮಗಳಲ್ಲಿ ತಲಾ 60 ರೈತರನ್ನು ಸಂದರ್ಶಿಸಿದಾಗ, ಸಂದರ್ಶನದಲ್ಲಿ ರೈತರಿಗೆ ಯೋಜನೆಗಳ ಲಾಭ ಪಡೆದಿರುತ್ತೀರಾ ಎಂದು ಕೇಳಿದಾಗ ಹೆಚ್ಚಿನ ಸಂಖ್ಯೆಯ ರೈತರು ನಮಗೆ ಈ ಯೋಜನೆ ಇದೆ ಎಂದು ಈಗ ತಿಳಿಯುತ್ತಿದೆ. ಇನ್ನು ಲಾಭದ ಮಾತೆಲ್ಲಿ ಮೇಡಂ ಎಂದು ನನಗೆ ಮರು ಪ್ರಶ್ನೆಯನ್ನು ಹಾಕಿದರು.

ಕೋಷ್ಟಕದಲ್ಲಿ ರೈತ ವಿಮೆ ಯೋಜನೆಗೆ ಸಂಬಂಧಿಸಿದಂತೆ, ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರ ಪಡೆದಿರುತ್ತೀರಾ ಎಂದರೆ ಕೇವಲ ಶೇ.5 ರಷ್ಟು ರೈತರು ಹೌದು ಎಂದು, ಶೇ.95ರಷ್ಟು ರೈತರು ಇಲ್ಲ ಎಂದು ಹೊಸಳ್ಳಿಯಲ್ಲಿ ಹೇಳಿದರೆ, ಹೊನ್ನಳ್ಳಿಯಲ್ಲಿ ಯಾವೊಬ್ಬ ರೈತರು ಈ ಯೋಜನೆಯ ಪ್ರಯೋಜನೆಯನ್ನು ಪಡೆದಿರುವುದಿಲ್ಲ ಎನ್ನುವ ಮಾಹಿತಿ ದೊರೆತಿದೆ. ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರವು ರೈತರು ವ್ಯವಸಾಯ ಮಾಡುವಾಗ ಆದ ಸಾವು ಮತ್ತು ಹೊಲದಲ್ಲಿರುವಾಗ ಆದ ದೇಹದ ವಿವಿಧ ಅಂಗಗಳ ವೈಫಲ್ಯದ ಕಾರಣಕ್ಕೆ ದೊರೆಯುತ್ತದೆ. ಈ ಯೋಜನೆಯಡಿಯಲ್ಲಿ ಶೇ.5 ಅಂದರೆ ಕೇವಲ ಮೂವರು ರೈತರು ಮಾತ್ರವೇ ಪರಿಹಾರ ಪಡೆದಿದ್ದಾರೆ. ಅದು ಅಂಗವಿಕಲತೆಯ ಕಾರಣಕ್ಕೆ ಹೊಸಳ್ಳಿಯಲ್ಲಿ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

**ಕೋಷ್ಟಕ–51**

**ರೈತ ಸಂಜೀವಿನಿ ವಿಮೆ ಯೋಜನೆಯ ವಿವರಗಳು**

| ಕ್ರ ಸಂ. | ಅನಧಿಕೃತ ಹಣ ವಸೂಲಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಪಡೆದಿರುತ್ತಾರೆ | 3 | 5.00 | 00 | 00 |
| 2. | ಪಡೆದಿರುವುದಿಲ್ಲ | 57 | 95.00 | 60 | 100 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆಯಲಾಗಿದೆ.

ಕೆಳಗಿನ ಕೋಷ್ಟಕ-52ರಲ್ಲಿ ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರವನ್ನು ಯಾವ ವಯಸ್ಸಿನಲ್ಲಿ ಪಡೆದಿರುತ್ತೀರಿ ಎಂದಾಗ ಇಬ್ಬರೂ 15 ವರ್ಷ ಮೇಲ್ಪಟ್ಟ, ಮತ್ತು ಒಬ್ಬರು 50 ವರ್ಷ ಮೇಲ್ಪಟ್ಟ ರೈತರು ಹೊಸಳ್ಳಿ ಗ್ರಾಮದವರಾಗಿದ್ದಾರೆ. ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರವನ್ನು ಯೋಜನೆಯಡಿಯಲ್ಲಿ ಒಬ್ಬರು 2 ಕೈಗಳು/ 2 ಕಾಲುಗಳಿಗೆ ರೂ.15000/-, ಒಬ್ಬರೂ 1 ಕೈ/1 ಕಾಲಿಗೆ ರೂ.7500/-, ಒಬ್ಬರೂ ಕಾಲೂ/ಕೈ ಬೆರಳುಗಳು ಮುರಿದಾಗ ರೂ.1500/-ರಂತೆ ಪ್ರತಿ ಬೆರಳುಗಳಿಗೆ ಪಡೆದಿದ್ದಾರೆ. ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರದ ಗರಿಷ್ಠ ಮೊತ್ತವೂ ಯಾವುದರ ಮೇಲೆ ನಿಗದಿಯಾಗುತ್ತದೆ ಎಂದು ರೈತರನ್ನು ಪ್ರಶ್ನಿಸಿದಾಗ, ಶೇ.46.66 ಎಂದು ವೈದ್ಯಾಧಿಕಾರಿಯ ಆಧಾರದ ಮೇಲೆಂದು, ಶೇ.20.00ರಷ್ಟು ರೈತರು ಸಮಿತಿಯ ಅಧ್ಯಕ್ಷರೆಂದು ಮತ್ತು ಶೇ.33.33ರಷ್ಟು ರೈತರು ಇಬ್ಬರೂ ಎನ್ನುವ ಮಾಹಿತಿಯನ್ನು ಸಂಡೂರಿನ ಹೊಸಳ್ಳಿಯಲ್ಲಿ ಹೇಳಿದರೆ, ಹೊನ್ನಳ್ಳಿ ಗ್ರಾಮದಲ್ಲಿ ಈ ಯೋಜನೆಯೇ ತಮಗೆ ಗೊತ್ತಿಲ್ಲ ಎನ್ನುವ ವಿಷಾದಕರ ಸಂಗತಿಯನ್ನು ಹೇಳಿದರು. ಒಟ್ಟಾರೆ ಈ ಯೋಜನೆಯ ಅಂಕಿ-ಅಂಶಗಳನ್ನು ನೋಡಿ ಉಪಯೋಗದ ಕುರಿತು ಚರ್ಚಿಸುವುದಾದರೆ, ನಾಮಮಾತ್ರಕ್ಕೆ ಯೋಜನೆಯನ್ನು ಸರಕಾರ ರೂಪಿಸಿದೆಯೇ ಹೊರತು ಅದರ ಕಾರ್ಯರೂಪದ ಕುರಿತು ಎಳ್ಳಷ್ಟು ಕ್ರಮ ಕೈಗೊಂಡಿಲ್ಲ ಎನ್ನುವುದು ಗೋಚರಿಸುತ್ತದೆ. ಹೊನ್ನಳ್ಳಿ ರೈತರು ಯೋಜನೆಯ ಕುರಿತು ಕೇಳಿ ಕೆಲವರು ದಿಗ್ಭ್ರಾಂತರಾದರು. ಕೆಲವರು ಆಶ್ಚರ್ಯಕರ ರೀತಿಯಲ್ಲಿ ರೈತರಿಗಾಗಿ ಇನ್ನೂ ಯಾವ ಯಾವ ಯೋಜನೆಗಳಿವೆ ಹೇಳಿ ಎಂದು ನನ್ನನ್ನೇ ಪ್ರಶ್ನೆ ಕೇಳಿದರೂ. ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರದ ಕುರಿತು ಎರಡು ಗ್ರಾಮಗಳಲ್ಲಿ ಎಲ್ಲ ರೈತರಿಗೆ ಅಷ್ಟಾಗಿ ಮಾಹಿತಿ ಇಲ್ಲದಿರುವುದು ಕಂಡುಬರುತ್ತದೆ.

**ಕೋಷ್ಟಕ-52**

**ರೈತ ಸಂಜೀವಿನಿ ವಿಮೆ ಯೋಜನೆಯನ್ನು ರೈತರು ಪಡೆದಿರುವ ವಯಸ್ಸಿನ ವಿವರ**

| ಕ್ರ ಸಂ. | ಅನಧಿಕೃತ ಹಣ ವಸೂಲಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | 15 ವರ್ಷದ ಮೇಲ್ಪಟ್ಟು | 2 | 3.33 | 00 | 00 |
| 2. | 50 ವರ್ಷದ ಮೇಲ್ಪಟ್ಟು | 1 | 1.67 | 00 | 00 |
| 3. | 80 ವರ್ಷದ ಒಳಗೆ | 00 | 00 | 00 | 00 |
| 4. | ಇಲ್ಲ | 57 | 95.00 | 60 | 100 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ: ಕ್ಷೇತ್ರಕಾರ್ಯದ ಮೂಲಕ**

## ಉಪಸಂಹಾರ

ಪ್ರಸುತ ಅಧ್ಯಾಯದಲ್ಲಿ ರೈತರ ಸಾಂಸ್ಕೃತಿಕ, ಆರ್ಥಿಕ, ಹಾಗೂ ರೈತರ ಆದ್ಯತೆಗಳನ್ನು, ರೈತರ ವಿದ್ಯಾಭ್ಯಾಸ, ಗ್ರಾಮಗಳಲ್ಲಿರುವ ಕುಟುಂಬಗಳ ಮೂಲ ಕಸುಬು ಇತ್ಯಾದಿಗಳನ್ನು ಮೊದಲ ಭಾಗದಲ್ಲಿ ಚರ್ಚಿಸುತ್ತಾ, ಕೃಷಿ ಮಾರುಕಟ್ಟೆಯ ಮೂಲ ಉದ್ದೇಶ, ಕೃಷಿ ಮಾರುಕಟ್ಟೆಯಿಂದ ರೈತರಿಗಾಗುವ ಅನುಕೂಲಗಳು ಮತ್ತು ರೈತರಿಗೆ ಕೃಷಿ ಮಾರುಕಟ್ಟೆಯ ಕುರಿತು ಇರುವ ಮಾಹಿತಿ ಮತ್ತು ಸಾಮಾನ್ಯ ತಿಳುವಳಿಕೆಯನ್ನು ಶೋಧಿಸಲಾಗಿದೆ. ಕೃಷಿ ಮಾರುಕಟ್ಟೆಯಲ್ಲಿರುವ, ರೈತರಿಗಾಗಿರುವ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರಿನ ವ್ಯವಸ್ಥೆ, ವಿಶ್ರಾಂತಿ ಗೃಹಗಳು, ಗಾಡಿಗಳನ್ನು ನಿಲ್ಲಿಸುವ ಸ್ಥಳ, ರೈತರು ಮಾರುಕಟ್ಟೆಗೆ ತಂದ ಹುಟ್ಟುವಳಿಗಳನ್ನು ಒಣಗಿಸಲು, ಹುಟ್ಟುವಳಿಗಳನ್ನು ಶೇಖರಿಸಲು, ಹುಟ್ಟುವಳಿಗಳನ್ನು ವರ್ಗೀಕರಿಸಲು ಮತ್ತು ಆವರಣದಲ್ಲಿ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲೂ ಇರುವ ತೂಕದ ಸೌಲಭ್ಯಗಳು, ಇತರೆ ಸೇವೆ ಸೌಲಭ್ಯಗಳಾದ ವಿವಿಧ ಮಾರುಕಟ್ಟೆಯ ಮಾಹಿತಿ ರವಾನೆಗೆ ಸಂಬಂಧಿಸಿದಂತೆ, ಮಾರುಕಟ್ಟೆಯ ಆವರಣದಲ್ಲಿ ಬ್ಯಾಂಕ್ ಸೇವೆ, ಅಂಚೆ ಕಛೇರಿಯ ಸೌಲಭ್ಯಗಳನ್ನು ಕ್ಷೇತ್ರ ಕಾರ್ಯದಿಂದ ಬಂದ ಮಾಹಿತಿಯೊಂದಿಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಹೊಸಳ್ಳಿ ಮತ್ತು ಹೊನ್ನಳ್ಳಿ ಎರಡು ಗ್ರಾಮಗಳನ್ನು ನೋಡುವುದಾದರೆ ಹೊಸಳ್ಳಿ ಗ್ರಾಮದಲ್ಲಿ ತೂಕಕ್ಕೆ ಸಂಬಂಧಪಟ್ಟಂತೆ ತುಂಬಾ ನಿಖರವಾದ ಮಾಹಿತಿಯನ್ನು ನೀಡಿರುತ್ತಾರೆ ಮತ್ತು ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದರ ಹಿಂದಿರುವ ಸಾಧಕ ಭಾಧಕಗಳನ್ನು, ಉದಾಹರಣೆ ಸಮೇತ ವಿವರಿಸಿದ್ದಾರೆ. ಇದೇ ಅಧ್ಯಾಯದಲ್ಲಿ ಮಾರುಕಟ್ಟೆ ಕುರಿತಂತೆ ಮಾಹಿತಿಯನ್ನು ಕಲೆ ಹಾಕುವಾಗ, ರೈತರಿಗೆ ಮಾರುಕಟ್ಟೆಯಲ್ಲಿ ದನಗಳನ್ನು, ಮಾರಾಟ ಮಾಡಲು ಪ್ರತ್ಯೇಕ ದನದ ಕೊಟ್ಟಿಗೆಯ ವುವಸ್ಥೆ ಇರುವುದಿಲ್ಲ ಎನ್ನುವ ಅಂಶ ಬೆಳಕಿಗೆ ಬಂದಿದೆ. ಹಾಗೆಯೇ ಹಿಂದಿನ ಕಾಲದಲ್ಲಿ ಹೆಚ್ಚಿನ ರೈತರು ದನಗಳ ವ್ಯಾಪಾರಕ್ಕಾಗಿ ಮಾರುಕಟ್ಟೆಗೆ ಬರುತ್ತಿದ್ದರು. ಆದರೆ ಈಗ ದನಗಳ ಸಂಖ್ಯೆಯೇ ಕಡಿಮೆಯಾಗಿದೆ ಹಾಗೂ ದನಗಳ ಮಾರಾಟ ಮಾಡಬೇಕಾದರೆ ತಮ್ಮ ಊರುಗಳಲ್ಲಿಯೇ ಮಾರಾಟ ಮಾಡಿಕೊಳ್ಳುತ್ತಾರೆ ಎನ್ನುವ ಸಂಗತಿಯು ಮೇಲಿನ ಭಾಗದಲ್ಲಿ ಚರ್ಚಿಸಿದ್ದೇನೆ. ಅಧ್ಯಾಯದ ಕೊನೆಯ ಭಾಗದಲ್ಲಿ ರೈತರಿಗಾಗಿರುವ ಅಡಮಾನ ಸಾಲದ ಯೋಜನೆಗಳನ್ನು, ವಿಮೆ ಯೋಜನೆಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಕೃಷಿ ಮಾರುಕಟ್ಟೆಯ ಕುರಿತು ಕ್ಷೇತ್ರಕಾರ್ಯದಿಂದ ಬಂದ ಅಂಕಿ ಅಂಶಗಳನ್ನು ವಿಶ್ಲೇಷಿಸಿದ ಮೇಲೆ, ತಿಳಿದುಬರುವುದೇನೆಂದರೆ, ರೈತರಿಗಾಗಿ ಸರಕಾರದಿಂದ ಪ್ರತಿ ವರ್ಷವೂ ವಿವಿಧ ಅಭಿವೃದ್ಧಿ ಯೋಜನೆಗಳ ಮಹಾಪೂರವೇ ಹರಿದುಬರುತ್ತದೆ. ಆದರೆ

ಯೋಜನೆಗಳು ರೈತರನ್ನು ತಲುಪುವಲ್ಲಿ ಮಂದಗತಿಯಲ್ಲಿವೆಯೇ ಎನ್ನುವ ಅನುಮಾನ ಈ ಅಧ್ಯಯನದಿಂದ ಹುಟ್ಟಿಕೊಳ್ಳುತ್ತದೆ. ಎಷ್ಟೋ ರೈತರಿಗೆ ಇರುವ ಯೋಜನೆಗಳ ವಿವರವೇ ತಿಳಿದಿಲ್ಲ, ಯೋಜನೆಯ ವಿವರ ಮತ್ತು ಪ್ರಯೋಜನೆ ತಿಳಿದಿದ್ದರೂ ಕೆಲವೇ ರೈತರಿಗೆ ಮಾತ್ರವೇ ಎನ್ನುವ ವಿಚಾರವೂ ನನ್ನ ಅಧ್ಯಯನದಲ್ಲಿ ಬೆಳಕಿಗೆ ಬಂದಿದೆ.

**ಕೊನೆಟಿಪ್ಪಣಿಗಳು**

1. ಶರಣಪ್ಪ ಎಸ್., ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳು, *ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು*, ಪ್ರಕಟಣೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿ, ಬಳ್ಳಾರಿ, 2013, ಪು.ಸಂ.88–97.
2. ಅದೇ, 2011ರ ಜನಗಣತಿಯ ವಿವರ ಪು.ಸಂ1–38.
3. ಅದೇ, ಕೃಷಿ ಇಲಾಖೆಯ ಅಂಕಿ ಅಂಶಗಳ ವಿವರ, ಪು.ಸಂ.48–87.
4. ಸಂಡೂರು ತಾಲೂಕು ಕಛೇರಿಯಲ್ಲಿ ರೈತರಿಗಿರುವ ಅನೂಕೂಲಗಳ ಮಾಹಿತಿ, ತಾಲೂಕು ಕಛೇರಿಯ ಅಧಿಕಾರಿಗಳಿಂದ ಸರ್ಕಾರದ ಯೋಜನೆಗಳ ಮಾಹಿತಿಯನ್ನು ಕಲೆ ಹಾಕಲಾಗಿದೆ, 2012–13 ಸಂಡೂರು.
5. ಬಳ್ಳಾರಿ ತಾಲೂಕು ಕಛೇರಿಯಲ್ಲಿ ರೈತರಿಗಿರುವ ಜಿಲ್ಲಾ ಮಟ್ಟದಲ್ಲಿರುವ ಯೋಜನೆಗಳ ಮಾಹಿತಿ, ಜಿಲ್ಲಾ ತಾಲೂಕು ಕಛೇರಿಯಿಂದ ಮಾಹಿತಿಯನ್ನು ಪಡೆದುಕೊಂಡಿದ್ದೇನೆ, 2012–13, ಬಳ್ಳಾರಿ.
6. ಸಂಡೂರು ತಾಲೂಕು ಕಛೇರಿ, ರೈತರಿಗೆ ಪಾಣಿ ಮತ್ತು ಭರ ಪರಿಹಾರ ವಿತರಿಸುವುದರ ಕುರಿತು, ಸಂಡೂರಿನ ವಿಲೇಜ್ ಅಕೌಂಟೆಂಟ್‌ರಿಂದ ದ್ವಿತೀಯ ಮಾಹಿತಿ ಪಡೆದಿದ್ದೇನೆ, 2012–13 ಸಂಡೂರು.
7. ಹಗರಿಬೊಮ್ಮನಹಳ್ಳಿ ಕೃಷಿ ಮಾರುಕಟ್ಟೆ ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು. http://maratavahini.kar.nic.in.
8. ಹಗರಿಬೊಮ್ಮನಹಳ್ಳಿ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು. www.agmarknet.nic.in
9. ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು ಮಾಹಿತಿ ಸಂಗ್ರಹಣೆ.ತಿತಿತಿ.ಟ್ಞಟ.ಟಿಛಿ.ಎಟ
10. ಸಂಡೂರಿನ ಕೃಷಿ ಇಲಾಖೆ, ಕೃಷಿ ಬೀಜ ವಿತರಣೆ, ಗೊಬ್ಬರ ವಿತರಣೆ, www.agmarknet.nic.in

11. ಬಳ್ಳಾರಿ ಜಿಲ್ಲಾ ತೋಟಗಾರಿಕೆ ಇಲಾಖೆ, ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು. www.nhm.nic.in

12. ಬಳ್ಳಾರಿ ಜಿಲ್ಲೆಯ ಕೃಷಿ ಇಲಾಖೆ, ರೈತರಿಗೆ ಕೃಷಿ ಸಲಕರಣೆಗಳು ಮತ್ತು ಬೀಜ ವಿತರಿಸುವುದರ ಕುರಿತು, www.agmarknet.nic.in.

13. ಬಳ್ಳಾರಿಯ ಕೃಷಿ ಮಾರುಕಟ್ಟೆ, ಮಾರುಕಟ್ಟೆಯಲ್ಲಿರುವ ರೈತರಿಗಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಮಾರಾಟ ಮಾಡಲಿಕ್ಕಿರುವ ಅನುಕೂಲಗಳು. ಬಳ್ಳಾರಿ ಕೃಷಿ ಮಾರುಕಟ್ಟೆಯ ಅಧಿಕಾರಿಗಳಿಂದ ಪ್ರಕಟಿತ ಪುಸ್ತಕಗಳನ್ನು ಪಡೆದುಕೊಂಡಿದ್ದೇನೆ, 2012–13, ಬಳ್ಳಾರಿ.

14. ಕೂಡ್ಲಿಗಿ ತೋಟಗಾರಿಕೆ ಇಲಾಖೆ, ವಿವಿಧ ತೋಟಗಾರಿಕೆ ಯೋಜನೆಗಳ ಮಾಹಿತಿಯನ್ನು ಅಧಿಕಾರಿಗಳು ಕೊಟ್ಟ ದ್ವಿತೀಯ ಮಾಹಿಯನ್ನು ಕ್ರೋಡೀಕರಿಸಿದ್ದೇನೆ, ಕೂಡ್ಲಿಗಿ.

15. ಪಂಕಜ್ ಅರೋರ, ಇನ್ನೋವೇಶನ್ ಇನ್ ರೂರಲ್ ಮಾರ್‌ಕೆಟಿಂಗ್ http://www.economicsdiscussion.net, 2012.

16. ಸ್ಟ್ರಕ್ಚರ್ ಆಫ್ ರೂರಲ್ ಮಾರ್ಕೆಟ್ ಫಾರ್ ಅಚೀವಿಂಗ್ ವರ್ಟಿಕಲ್ ಕೋಅರ್ಡಿನೇಶನ್ ಇನ್ ದಿ ಇಂಡಿಯನ್ ಫುಡ್ ಚೈನ್ ಬೈ ಸ್ಯಾಡಿಪನ್ ರೈ, https//www.icar.in., 2011.

17. ಮಾರ್ಕೆಟ್: ಡ್ರೈವೆನ್ ಇನ್ನೋವೇಶನ್ ಫಾರ್ ರೂರಲ್ ಪೆನಟ್ರೇಶನ್, ಸೂಭೊ ಚಟ್ಟೋಪಾಧ್ಯಾಯ ಮತ್ತು ಎ.ಕೆ.ಸರ್ಕಾರ್, https//www.icar.in., ಸೆ.2011.

18. ರೂರಲ್ ಮಾರ್ಕೆಟ್ ರಿಸರ್ಚ್, http://www.economicsdiscussion.net, 2012

19. ಎಸ್.ಎನ್.ದೀಪಕ್, *ಮಾರ್ಕೆಟ್ ಸ್ಟ್ರೇಟಜಿಸ್ ಫಾರ್ ರೂರಲ್ ಮಾರ್ಕೆಟಿಂಗ್*. https//www.allthatgrows.in., 2010

20. ಅಜಯ್ ನೋಟ್, ಲೇಬರ್ ಮಾರ್‌ಕೆಟ್ ಇಶ್ಯೂಸ್ ಇನ್ ಇಂಡಿಯಾ, ದಿ ಹಿಂದೂ ದಿನಪತ್ರಿಕೆ, ಸಂಚಿಕೆ 23, ಸಂಪುಟ223, ಜನವರಿ, 4 2016 ಪು.ಸಂ.8.

## ಅಧ್ಯಾಯ–5

# ತೋಟಗಾರಿಕೆ ಕೃಷಿ ಮಾರುಕಟ್ಟೆಯ ಯೋಜನೆಗಳು

ಪೀಠಿಕೆ

ತೋಟಗಾರಿಕೆ ಇಲಾಖೆಯ ಯೋಜನೆಗಳ ವಿವರಗಳು

ರಾಷ್ಟ್ರೀಯ ತೋಟಗಾರಿಕೆ ಯೋಜನೆಗಳ ವಿವರಗಳು

ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಗಳ ವಿವರಗಳು

ರೈತರು ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಬಳಸುವ ರಸ್ತೆ ಮತ್ತು ವಾಹನಗಳ ವಿವರಗಳು

ರೈತರಿಗಿರುವ ಕೃಷಿ ಸಾಲದ ಮೂಲಗಳ ವಿವರಗಳು

ರೈತರಿಗೆ ಬೆಳೆ ನಷ್ಟವಾಗಿರುವ ನೀತಿ ನಿಯಮಗಳ ವಿವರಗಳು

ರೈತರಿಗೆ ಬೆಳೆ ಪರಿಹಾರದ ವಿವರಗಳು

# ಅಧ್ಯಾಯ–5

# ತೋಟಗಾರಿಕೆ ಕೃಷಿ ಮಾರುಕಟ್ಟೆಯ ಯೋಜನೆಗಳು

**ಪೀಠಿಕೆ**

ಅಧ್ಯಾಯ ನಾಲ್ಕರಲ್ಲಿ ಕೃಷಿ ಮಾರುಕಟ್ಟೆಯ ನೀತಿ ನಿಯಮಗಳ ಪಾಲನೆಯನ್ನು, ರೈತರ ಸಾಂಸ್ಕೃತಿಕ, ಆರ್ಥಿಕ ಹಿನ್ನೆಲೆಯನ್ನು, ರೈತರಿಗೆ ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಇರುವ ವಿವಿಧ ತೆರನಾದ ರೈತ ಪರ ಕಾರ್ಯಕ್ರಮಗಳನ್ನು ಅಧ್ಯಯನಿಸಿರುತ್ತೇನೆ. ಮೇಲಿನ ಅಧ್ಯಾಯದಲ್ಲಿ ನೋಡುವುದಾದರೆ ಅಧ್ಯಯನಕ್ಕೆ ಒಳಪಡಿಸಿದ ಗ್ರಾಮಗಳಲ್ಲಿ, ರೈತರಿಗೆ ಅನೇಕ ಯೋಜನೆಯ ಪರಿಚಯವಿದೆ. ಆದರೆ ಯೋಜನೆಗಳ ಸಂಪೂರ್ಣ ಪ್ರಯೋಜನವನ್ನು ಪಡೆಯುವಲ್ಲಿ ರೈತರು ವಿಫಲರಾಗಿದ್ದಾರೆ ಎನ್ನುವುದು ಮೇಲ್ನೋಟಕ್ಕೆ ಕಾಣಬರುತ್ತದೆ. ಯೋಜನೆಗಳಲ್ಲಿ ಕೆಲವೊಂದು ಯೋಜನೆಗಳನ್ನು ಮಾತ್ರ ಹೊರತುಪಡಿಸಿ, ಎಲ್ಲ ಯೋಜನೆಗಳಿಗೆ ಹೊಸಹಳ್ಳಿಯಲ್ಲಿ ಅತಿಹೆಚ್ಚು ರೈತರು ಸರಿಯಾದ ಉತ್ತರಗಳನ್ನು ನೀಡಿದ್ದಾರೆ(ಯೋಜನೆಗಳ ಕುರಿತು ತಿಳಿದು ಕೊಂಡಿದ್ದಾರೆ). ಹೊನ್ನಳ್ಳಿ ಗ್ರಾಮದಲ್ಲಿ ಕೆಲವೊಂದು ಯೋಜನೆಗಳನ್ನು ಹೊರತುಪಡಿಸಿದರೆ ರೈತರು ನಿಖರವಾದ ಉತ್ತರಗಳನ್ನೇ ನೀಡಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ತೋಟಗಾರಿಕೆ ಇಲಾಖೆಯ ಯೋಜನೆಗಳ ವಿವರಗಳನ್ನು, ಇಲಾಖೆಯ ಕಾರ್ಯವೈಖರಿಯನ್ನು, ಇಲಾಖೆಯಿಂದ ಯಾವ ಯಾವ ರೈತರು ಯೋಜನೆಗಳ ಅನುಕೂಲವನ್ನು ಪಡೆಯಬಹುದು, ಮತ್ತು ಪಡೆಯುತ್ತಿದ್ದಾರೆ. ರಾಷ್ಟ್ರೀಯ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ, ಹೀಗೆ ತೋಟಗಾರಿಕೆ ಕೃಷಿಗೆ ಸಂಬಂಧಿಸಿದಂತೆ ರೈತರಿಗೆ ಇರುವ ವಿವಧ ಸವಲತ್ತುಗಳನ್ನು ಮತ್ತು ವಿವಿಧ ಸವಲತ್ತುಗಳು ರೈತರನ್ನು ಎಷ್ಟರ ಮಟ್ಟಿಗೆ ತಲುಪಿವೆ ಎನ್ನುವ ವಿಶ್ಲೇಷಣೆಯನ್ನು ಕ್ಷೇತ್ರ ಕಾರ್ಯದಿಂದ ಬಂದ ಅಂಕಿ ಅಂಶಗಳ ಮೂಲಕ ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಾಯವನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಂಡಿದ್ದು, ಮೊದಲನೆಯದು ತೋಟಗಾರಿಕೆ ಇಲಾಖೆಯ ವಿವರಗಳು, ರಾಷ್ಟ್ರೀಯ ಸಮಗ್ರ ತೋಟಗಾರಿಕೆ ಅಭಿವೃದ್ಧಿ

ಯೋಜನೆಯನ್ನು, ಎರಡನೆಯ ಭಾಗದಲ್ಲಿ ರೈತರು ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಇರುವ ವಿವರದ ಕುರಿತು, ಕೃಷಿ ಸಾಲದ ಮೂಲಗಳು ಮತ್ತು ಬೆಳೆ ನಷ್ಟವಾಗಿರುವ ನೀತಿ ನಿಯಮಗಳ ಕುರಿತ ಮಾಹಿತಿಯ ವಿವರಗಳಿವೆ.

## ಭಾಗ–ಒಂದು

ಪ್ರಸ್ತುತ ಭಾಗದಲ್ಲಿ ರೈತರಿಗಾಗಿ ಇರುವ ವಿವಧ ಕೃಷಿಯ ಯೋಜನೆಗಳಲ್ಲಿ, ತೋಟಗಾರಿಕೆ ಇಲಾಖೆಯ ಯೋಜನೆಗಳನ್ನು, ಅದರಲ್ಲೂ ರಾಷ್ಟ್ರೀಯ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯನ್ನು ಮೊದಲನೆ ಭಾಗದಲ್ಲಿ ಚರ್ಚಿಸಿದ್ದೇನೆ. ಮೊದಲೆಲ್ಲ, ಗ್ರಾಮಗಳೆಂದರೆ ರೈತ ಕುಟುಂಬ, ಕೃಷಿಯನ್ನೇ ಮೂಲಕಸುಬಾಗಿ ಮಾಡಿಕೊಂಡಿರುವವರನ್ನು ಕಾಣುತ್ತಿದ್ದೆವು. ಆದರೆ ಈ ಗ್ರಾಮಗಳಲ್ಲಿ ಕೃಷಿಯನ್ನು ಮಾತ್ರವೇ ನಂಬಿ ಬದುಕುವವರು ಕಡಿಮೆಯಾಗಿದ್ದಾರೆ. ಹೆಚ್ಚಿನ ರೈತರು ಬದುಕುವುದಕ್ಕಾಗಿ ನಗರಗಳಿಗೆ ಕೂಲಿ ಕೆಲಸಕ್ಕೆ ವಲಸೆ ಹೋಗುತ್ತಿದ್ದಾರೆ. ರೈತರು ವಲಸೆ ಹೋಗಲು ಕಾರಣವನ್ನು ನೋಡುವುದಾದರೆ, ಕೃಷಿಯನ್ನೇ ನಂಬಿ ಸಂಪೂರ್ಣವಾಗಿ ಒಂದು ಇಡಿ ಕುಟುಂಬ ಬದುಕುವುದು ಇಂದಿನ ದಿನಮಾನಗಳಲ್ಲಿ ಅಸಾಧ್ಯವೇ ಸರಿ. ಇದನ್ನೆಲ್ಲಾ ಗಮನಕ್ಕೆ ತೆಗೆದುಕೊಂಡು ಸರಕಾರವು ಹಳ್ಳಿಗಳಲ್ಲಿಯೇ ರೈತರು ವಾಸ ಮಾಡಬೇಕು ಮತ್ತು ಅವರಿಗೆ ಉದ್ಯೋಗವೂ ದೊರೆಯಬೇಕು ಎನ್ನುವ ನಿಟ್ಟಿನಲ್ಲಿ ಕೃಷಿಯಲ್ಲಿ ಹೊಸತೇನಾದರೂ ತರಬೇಕೆಂದು ತೋಟಗಾರಿಕೆ ಕೃಷಿಯನ್ನು ಹೆಚ್ಚೆಚ್ಚು ಅಭಿವೃದ್ಧಿಪಡಿಸುತ್ತಿದ್ದಾರೆ. ಒಂದು ಅಂದಾಜಿನ ಪ್ರಕಾರ, ತುಂಬಾ ಹಿಂದೆಯೇ ಅಂದರೆ ಮೊಘಲ್ ರಾಜರ ಕಾಲದಲ್ಲಿಯೇ ತೋಟಗಾರಿಕೆಯನ್ನು ರೈತರು ಅಳವಡಿಸಿಕೊಂಡಿದ್ದರು. ರೇವ್ ವಿಲಿಯಮ್ ಕ್ಯಾರ್ರೇ ಒಂದು ಇಂಗ್ಲೀಷ್ ಬ್ಯಾಪ್ಟಿಸ್ಟ್ ಮಿಷನರಿಯು 1820ರಲ್ಲಿ ಅಗ್ರೀ–ಹಾರ್ಟಿಕಲ್ಚರಲ್ ಸೊಸೈಟಿಯನ್ನು ಭಾರತದಲ್ಲಿ ಪ್ರಾರಂಭ ಮಾಡಿದರು. ಈ ಸಂಸ್ಥೆಯು ತೋಟಗಾರಿಕೆ ಕೃಷಿಯನ್ನು ದೇಶದಲ್ಲಿ ಹೆಚ್ಚೆಚ್ಚು ಅಭಿವೃದ್ಧಿ ಪಡಿಸುವಲ್ಲಿ ನಿರತವಾಗಿತ್ತು.

ತೋಟಗಾರಿಕೆ ಕೃಷಿ ಎಂದರೆ, ಇಂಗ್ಲೀಷ್ ಪದ ಹಾರ್ಟಿಕಲ್ಚರ್‌ನ್ನು ಬಿಡಿಸಿ ಬರೆದರೆ ಹಾರ್ಟ್ ಎಂದರೆ ಕಲೆ ಮತ್ತು ಕಲ್ಚರ್ ಎಂದರೆ ವಿಶೇಷ ರೀತಿಯಾಗಿ ಪ್ರಸ್ತುತ ಪಡಿಸುವುದು ಎನ್ನುವುದಾಗಿದೆ. ತೋಟಗಾರಿಕೆ ಕೃಷಿ ಎಂದರೆ ಯಾವ ಕೃಷಿಯು ಕಲೆ ಮತ್ತು ವಿಜ್ಞಾನವನ್ನು ಹೊಂದಿದೆಯೋ ಅಂತಹ ಕೃಷಿಯನ್ನು ತೋಟಗಾರಿಕೆ ಕೃಷಿ ಎಂದು ಹೇಳುತ್ತೇವೆ ಎನ್ನುವ ಅಂಶವನ್ನು ಒಂದು ಸಂಶೋಧನಾ ಸಂಸ್ಥೆ ವ್ಯಾಖ್ಯಾನಿಸಿದೆ(https//www.allthatgrows.in). ಭಾರತ ದೇಶದಲ್ಲಿ ಸಂಶೋಧನ ಸಂಸ್ಥೆಯಾದ ದಿ ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್

ರಿಸರ್ಚ್ (ಐ.ಸಿ.ಎ.ಆರ್.) ಸೆಪ್ಟೆಂಬರ್ 5 1967ರಂದು ದೆಹಲಿಯಲಿ ತೋಟಗಾರಿಕೆಗೆ ಸಂಬಂಧಿಸಿ ದಂತೆ ಮೊದಲಿಗೆ ಪ್ರಾರಂಭವಾಯಿತು. ಈ ಸಂಸ್ಥೆಯೂ ಕೃಷಿಗೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯ ಗಳನ್ನು ತರೆದು, ಕೃಷಿ ಸಂಶೋಧನೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾ ಬಂದಿದೆ(https// www.icar.in).

ಮುಂದಿನ ಕೋಷ್ಟಕದಲ್ಲಿ ತೋಟಗಾರಿಕೆಗೆ ಕೃಷಿಗೆ ಸಂಬಂಧಿಸಿದಂತೆ, ಮಾಹಿತಿಯನ್ನು ಕಲೆ ಹಾಕಿದ್ದೇನೆ. ಅವುಗಳ ಅಂಕಿ ಅಂಶಗಳ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಮಾಡಲಾಗಿದೆ. ಕೋಷ್ಟಕ-53ರಲ್ಲಿ ಸಂಡೂರಿನ ಹೊಸಹಳ್ಳಿ ಗ್ರಾಮದಲ್ಲಿ, ಸರ್ಕಾರಿ ತೋಟಗಾರಿಕೆ ಯೋಜನೆಗಳ ಬಗೆಗೆ ಮಾಹಿತಿ ತಿಳಿದಿದೆಯೇ? ಎಂದರೆ ಶೇ.68.33ರಷ್ಟು ರೈತರು(ಸಂದರ್ಶನದಲ್ಲಿ ಒಟ್ಟು 41) ಹೌದು ಎನ್ನುವ ಉತ್ತರವನ್ನೇ ನೀಡಿದ್ದಾರೆ. ಶೇ.31.67ರಷ್ಟು ರೈತರು ಇಲ್ಲ ಎನ್ನುವ ಹೇಳಿಕೆಯನ್ನು ನೀಡಿದರೆ, ಹೊನ್ನಳ್ಳಿ ಗ್ರಾಮದಲ್ಲಿ ಶೇ.100ರಷ್ಟು ರೈತರು ತಮಗೆ ತೋಟಗಾರಿಕೆ ಯೋಜನೆಯ ಕುರಿತು ತಿಳಿದಿದೆ ಎನ್ನುವ ಮಹತ್ತರವಾದ ಮಾಹಿತಿಯನ್ನು ನೀಡಿದ್ದಾರೆ. ಹೊಸಹಳ್ಳಿ ಗ್ರಾಮದಲ್ಲಿ ತೋಟಗಾರಿಕೆ ಯೋಜನೆಯ ಕುರಿತು ಗೊತ್ತಿದೆಯಾದರೆ ಯಾವ ಯಾವ ಯೋಜನೆಗಳೆಂದು ಕೇಳಿದಾಗ? ಶೇ.31.67ರಷ್ಟು ಜಿಲ್ಲಾವಲಯ ಯೋಜನೆ, ಶೇ.40 ರಷ್ಟು ರಾಜ್ಯವಲಯ ಯೋಜನೆ, ಶೇ11.67ರಷ್ಟು ರೈತರು ಕೇಂದ್ರವಲಯ ಯೋಜನೆಗಳೆಂದು ಮತ್ತು ಶೇ.16.67ರಷ್ಟು ರೈತರು ತಮಗೆ ಎಲ್ಲ ಯೋಜನೆಗಳ ಮಾಹಿತಿಯೂ ಗೊತ್ತಿದೆ ಎನ್ನುವ ಅಂಶವನ್ನು ಹೇಳುತ್ತಾ, ಜಿಲ್ಲಾವಾರು ಯೋಜನೆಯಲ್ಲಿ ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆ ಯೋಜನೆ ಯನ್ನು ಶೇ.3.33ರಷ್ಟು, ಪ್ರಚಾರ ಮತ್ತು ಸಾಹಿತ್ಯ ಯೋಜನೆಯಡಿಯಲ್ಲಿ ಶೇ.1.67ರಷ್ಟು, ಶೀತಲ ಗೃಹಗಳಿಗೆ ಯಾವುದೇ ರೈತರು ಪ್ರಯೋಜನೆಯನ್ನು ಪಡೆದಿರುವುದಿಲ್ಲ. ರೈತರಿಗೆ ತರಬೇತಿ ಯೋಜನೆಯಡಿಯಲ್ಲಿ ಶೇ.6.67ರಷ್ಟು ರೈತರು ಮತ್ತು ಹನಿ ನೀರಾವರಿ ಅಡಿಯ ಯೋಜನೆಯಲ್ಲಿ ಶೇ.88.33ರಷ್ಟು ರೈತರು ಪ್ರಯೋಜನ ಪಡೆದಿದ್ದಾರೆ.

ಇನ್ನು ರಾಜ್ಯವಾರು ಯೋಜನೆಯಲ್ಲಿ ಹೊಸಹಳ್ಳಿಯಲ್ಲಿ ಶೇ.38.33ರಷ್ಟು ರೈತರು ಬೆಳೆಗಳ ರೋಗ ಮತ್ತು ಕೀಟ ನಿಯಂತ್ರಣಕ್ಕೆ, ಶೇ.50ರಷ್ಟು ರೈತರು ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಗೆ, ಶೇ.1.67ರಷ್ಟು ರೈತರು ಮಧುವನ ಮತ್ತು ಜೇನುಸಾಕಣೆಯ ಯೋಜನೆಗೆ ಮತ್ತು ಶೇ.10ರಷ್ಟು ರೈತರು ವಿಸ್ತರಣೆ ಮತ್ತು ತರಬೇತಿ ಯೋಜನೆಗೆ ಪ್ರಯೋಜನವನ್ನು ಪಡೆದಿರುತಾರೆ. ಅಲ್ಲದೆ ಕೋಷ್ಟಕ-55ರಲ್ಲಿ ಮೇಲಿನ ಪ್ರಶ್ನೆಗಳಿಗೆ ಹೊನ್ನಳ್ಳಿ ಗ್ರಾಮದ ರೈತರ ಪ್ರತಿಕ್ರಿಯೆಯನ್ನು ನೋಡುವುದಾದರೆ, ತೋಟಗಾರಿಕೆ ಯೋಜನೆಯ ಕುರಿತು ಗೊತ್ತಿದೆಯಾದರೆ ಯಾವ ಯಾವ ಯೋಜನೆಗಳೆಂದು ಕೇಳಿದಾಗ? ಶೇ.15ರಷ್ಟು ಜಿಲ್ಲಾವಲಯ ಯೋಜನೆಗಳೆಂದು, ಶೇ.43.34ರಷ್ಟು

ರಾಜ್ಯವಲಯ ಯೋಜನೆಗಳೆಂದು, ಶೇ.33.33ರಷ್ಟು ರೈತರು ಕೇಂದ್ರವಲಯ ಯೋಜನೆಗಳೆಂದು, ಮತ್ತು ಶೇ.8.33ರಷ್ಟು ರೈತರು ತಮಗೆ ಎಲ್ಲ ಯೋಜನೆಗಳ ಮಾಹಿತಿಯೂ ಗೊತ್ತಿದೆ ಎನ್ನುವ ಅಂಶವನ್ನು ಹೇಳುತ್ತಾ ಹೊನ್ನಳ್ಳಿ ಗ್ರಾಮದಲ್ಲಿ ಜಿಲ್ಲಾವಾರು ಯೋಜನೆಯಲ್ಲಿ ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆ ಯೋಜನೆಯನ್ನು, ಪ್ರಚಾರ ಮತ್ತು ಸಾಹಿತ್ಯ ಯೋಜನೆಯಡಿಯಲ್ಲಿ ಶೀತಲಗೃಹಗಳ ಯೋಜನೆಗೆ ಯಾವುದೇ ರೈತರು ಪ್ರಯೋಜನೆಯನ್ನು ಪಡೆದಿರುವುದಿಲ್ಲ, ರೈತರಿಗೆ ತರಬೇತಿ ಯೋಜನೆಯಡಿಯಲ್ಲಿ ಶೇ.15ರಷ್ಟು ರೈತರು ಮತ್ತು ಹನಿ ನೀರಾವರಿ ಯೋಜನೆಯಲ್ಲಿ ಶೇ.85ರಷ್ಟು ರೈತರು ಪ್ರಯೋಜನ ಪಡೆದಿದ್ದಾರೆ.

ರಾಜ್ಯವಾರು ಯೋಜನೆಯಲ್ಲಿ ಹೊಸಹಳ್ಳಿಯಲ್ಲಿ ಶೇ.25ರಷ್ಟು ರೈತರು ಬೆಳೆಗಳ ರೋಗ ಮತ್ತು ಕೀಟ ನಿಯಂತ್ರಣಕ್ಕೆ, ಶೇ.65ರಷ್ಟು ರೈತರು ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಗೆ, ಶೇ.5ರಷ್ಟು ರೈತರು ಮಧುವನ ಮತ್ತು ಜೇನುಸಾಕಣೆಯ ಯೋಜನೆಗೆ ಮತ್ತು ಶೇ.5ರಷ್ಟು ರೈತರು ವಿಸ್ತರಣೆ ಮತ್ತು ತರಬೇತಿ ಯೋಜನೆಗೆ ಪ್ರಯೋಜನವನ್ನು ಪಡೆದಿದ್ದಾರೆ. ಈ ಯೋಜನೆಗಳಿಗೆ ಸಂಬಂಧಿಸಿದಂತೆ ರೈತರೊಬ್ಬರನ್ನು ಸಂದರ್ಶಿಸಿದ ವಿವರ ಇಂತಿದೆ.

**ಕೋಷ್ಟಕ–53**

**ತೋಟಕಾರಿಕೆ ಇಲಾಖೆಯ ಯೋಜನೆಯ ಮಾಹಿತಿಯ ವಿವರಗಳು**

| ಕ್ರ ಸಂ. | ಯೋಜನೆಗಳ ಮಾಹಿತಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಇದೆ | 41 | 68.33 | 60 | 100 |
| 2. | ಇಲ್ಲ | 19 | 31.67 | 00 | 00 |
| | ಒಟ್ಟು | 60 | 100 | 60 | 100 |
| | ಯೋಜನೆಗಳ ವಿವರ | | | | |
| 1. | ಜಿಲ್ಲಾವಲಯ ಯೋಜನೆ | 19 | 31.67 | 9 | 15 |
| 2. | ರಾಜ್ಯವಲಯ ಯೋಜನೆ | 24 | 40.00 | 26 | 43.34 |
| 3. | ಕೇಂದ್ರದ ಯೋಜನೆಗಳು | 7 | 11.67 | 20 | 33.33 |
| 4. | ಎಲ್ಲವೂ | 10 | 16.67 | 5 | 8.33 |
| | ಒಟ್ಟು | 60 | 100 | 60 | 100 |
| | ಜಿಲ್ಲಾ ಯೋಜನೆಗಳ ಪ್ರಯೋಜನ | | | | |

| | | | | | |
|---|---|---|---|---|---|
| 1 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆ ಯೋಜನೆ | 2 | 3.33 | 00 | 00 |
| 2 | ಪ್ರಚಾರ ಮತ್ತು ಸಾಹಿತ್ಯ ಯೋಜನೆ | 1 | 1.67 | 00 | 00 |
| 3 | ಶೀತಲ ಗೃಹಗಳಿಗೆ ವಿದ್ಯುತ್ ಸಹಾಯ ಧನ ಯೋಜನೆ | 00 | 00 | 00 | 00 |
| 4 | ರೈತರಿಗೆ ತರಭೇತಿ ಯೋಜನೆ | 4 | 6.67 | 9 | 15 |
| 5 | ಹನಿ ನೀರಾವರಿ | 52 | 88.33 | 51 | 85 |
| | ಒಟ್ಟು | 60 | 100 | 60 | 100 |
| | ರಾಜ್ಯವಾರು ಯೋಜನೆಗಳ ಪ್ರಯೋಜನೆ | | | | |
| 1 | ಬೆಳೆಗಳ ರೋಗ ಮತ್ತು ಕೀಟ ನಿಯಂತ್ರಣ | 23 | 38.33 | 15 | 25 |
| 2 | ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ | 30 | 50.00 | 39 | 65.00 |
| 3 | ಮಧುವನ ಮತ್ತು ಜೇನು ಸಾಕಣೆ ಯೋಜನೆ | 1 | 1.67 | 3 | 5.00 |
| 4 | ವಿಸ್ತರಣೆ ಮತ್ತು ತರಬೇತಿ ಯೋಜನೆ. | 6 | 10 | 3 | 5.00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಸಂಡೂರು ತಾಲೂಕಿನ ತಾರಾನಗರ ಗ್ರಾಮದ ಸಣ್ಣ ರೈತರಾದ ಶ್ರೀಯುತ ಕುಮಾರಸ್ವಾಮಿ, ವಯಸ್ಸು-55 ವರ್ಷ, ಇವರನ್ನು ದಿನಾಂಕ 18/8/2013ರಂದು ಸಂದರ್ಶಿಸಿದಾಗ ಅಧ್ಯಯನಕ್ಕೆ ಪೂರಕವಾದ ಪ್ರಶ್ನೆಗಳನ್ನು ವಿಂಗಡಿಸಿಕೊಂಡು ಕೇಳಿದಾಗ, ಅದರಲ್ಲಿ ಮೊದಲನೆಯದಾಗಿ ಸರ್ಕಾರಿ ಯೋಜನೆಗಳ ಪ್ರಯೋಜನಗಳು ಮತ್ತು ರೈತರಿಗೆ ಆಗುವ ಅನೂಕೂಲ ಮತ್ತು ಅವು ರೈತರಿಗೆ ತಲುಪುವುದನ್ನು ಚರ್ಚಿಸಿದಾಗ, ನಾನು ಕೃಷಿ ಮಾಡುತ್ತಿರುವುದು ಕಳೆದ 40

ವರ್ಷಗಳಿಂದ, ಅಂದಿನಿಂದಲೂ ಸರ್ಕಾರವು ರೈತರಿಗಾಗಿ ಅನೇಕ ತರಹದ ಯೋಜನೆಗಳನ್ನು ರೂಪಿಸುತ್ತಲೇ ಇದೆ. ಕಾಲಕಾಲಕ್ಕೆ ರೂಪಿಸಿದ ಯೋಜನೆಗಳು ಒಂದು ವಿಧದಲ್ಲಿ ಹೇಳಬೇಕಾದರೆ ರೈತರಿಗೆ ತುಂಬಾ ಅನೂಕೂಲವಾಗಿವೆ. ಇಲ್ಲಿ ಮುಖ್ಯವಾಗಿ ಹೇಳಬೇಕಾದ ಅಂಶವೆಂದರೆ ಯೋಜನೆಗಳನ್ನು ರೂಪಿಸುವುದು ಮಾತ್ರವಲ್ಲ, ಅವುಗಳನ್ನು ರೈತರಿಗೆ ತಲುಪಿಸುವಂತೆ ಮಾಡುವುದು, ಹಾಗೂ ಯೋಜನೆಗಳ ಕಾರ್ಯವೈಖರಿಗಳ ಬಗ್ಗೆ ರೈತರನ್ನು ಜಾಗೃತಗೂಳಿಸಬೇಕು ಎನ್ನುವುದನ್ನು ಹೇಳುತ್ತಾ, ರೈತನು ನನ್ನ ವಿಷಯದಲ್ಲಿ ಹೇಳುವುದಾದರೆ ನಾನು ಸರ್ಕಾರದ ಯೋಜನೆಗಳ ಉಪಯೋಗ ಪಡೆದಿರುತ್ತೇನೆ.

ಯೋಜನೆಯ ಪ್ರಯೋಜನದ ಮಾಹಿತಿ ಹೇಳಬೇಕಾದರೆ ನನ್ನ ಹೊಲದಲ್ಲಿ ಬೆಳೆದ ಮೆಕ್ಕೆಜೋಳ ಬೆಳೆಯೂ ಕಾಡುಪ್ರಾಣಿಯಾದ ಕರಡಿ ಹಾವಳಿಯಿಂದ 2006 ರಲ್ಲಿ ನಾಶವಾದ ಹಿನ್ನೆಲೆಯಲ್ಲಿ ಅದಕ್ಕೆ ಸಂಬಂಧಪಟ್ಟ ಇಲಾಖೆಯಾದ ಬಳ್ಳಾರಿಯ ಅರಣ್ಯ ಇಲಾಖೆಗೆ ದೂರು ನೀಡಿದ ಸಂದರ್ಭದಲ್ಲಿ, ಅಧಿಕಾರಿಗಳು ಮೊದಲಿಗೆ ಸರಿಯಾದ ಮಾಹಿತಿ ನೀಡದೆ ಈ ತರಹದ ಪ್ರಾಣಿಗಳ ಹಾವಳಿಗೆ, ಹೆಚ್ಚಿನ ಪರಿಹಾರ ಇರುವುದಿಲ್ಲ, ಸುಮ್ಮನೆ ಯಾಕೆ ನಿಮ್ಮ ಸಮಯ ವ್ಯರ್ಥ ಮಾಡುತ್ತೀರಿ ಎಂದರು. ಆದರೂ ನಾನು ಬಿಡದೆ ಅನೇಕ ಬಾರಿ ಇಲಾಖೆಗೆ ಹೋಗಿ ಬಂದು ಮಾಡಿದೆ. ಆಗ ಅಧಿಕಾರಿಗಳು ನಿಮಗಾದ ಬೆಳ ನಷ್ಟಕ್ಕೆ 3500.ರೂ ಬರುತ್ತದೆ ಎಂದು ಹೇಳಿದರು. ಅದಕ್ಕೆ ನಾನು ಒಪ್ಪದೆ ನನಗೆ ಆದ ನಷ್ಟವು ಹೆಚ್ಚು ಎಂದು ಕೇಳಿದಾಗ, ನಿಮಗೆ ಬೇಕಾದರೆ ಇದನ್ನು ತೆಗೆದುಕೊಳ್ಳಿ ಇಲ್ಲವಾದರೆ head officeಗೆ ಹೋಗಿ ಎಂದರು. ಅದರಂತೆ ನಾನು ಪರಿಹಾರಕ್ಕಾಗಿ ಬೆಂಗಳೂರಿನ ಕಛೇರಿಗೆ ಭೇಟಿ ನೀಡಿದೆ. ಸುಮಾರು 1–3(2006–2008) ವರ್ಷಗಳ ಕಾಲ ಬೆಂಗಳೂರಿಗೆ ಹೋಗಿ ಬಂದು ಮಾಡಿದೆ. ಕೊನೆಗೂ ನನಗೆ ಪರಿಹಾರ ಧನವಾಗಿ 27500 ರೂ.ಗಳು ಕೊಟ್ಟರು, ಎಂದು ಹೇಳುತ್ತಾ ಹೀಗೆ ಕಾನೂನುಗಳು ತುಂಬಾ ಇರುತ್ತವೆ, ಆದರೆ ಅವುಗಳ ತಿಳುವಳಿಕೆ ಅನೇಕ ರೈತರಿಗೆ ಇಲ್ಲದಿರುವುದೇ ಅವುಗಳ ಸದ್ಬಳಕೆಗೆ ಸಾಧ್ಯವಾಗುತ್ತಿಲ್ಲ. ಹಾಗಾಗಿ ಸರ್ಕಾರವು ಕೇವಲ ಯೋಜನೆಗಳನ್ನು ರೂಪಿಸುವುದಲ್ಲದೆ, ಅವು ರೈತರಿಗೆ ಎಷ್ಟರಮಟ್ಟಿಗೆ ತಲುಪುತ್ತಿವೆ ಹಾಗೂ ಆ ನಿಟ್ಟಿನಲ್ಲಿ ಸರ್ಕಾರವು ರೈತರಿಗೆ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ನಿಯೋಜಿಸಬೇಕು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು.

ಹಾಗೆಯೇ ಅಧ್ಯಯನದ ಮುಂದಿನ ಪ್ರಶ್ನೆಯನ್ನು ಮಾರುಕಟ್ಟೆಗೆ ಸಂಬಂಧಿಸಿದಂತೆ ಕೇಳಿದಾಗ, ಈ ಭಾಗದಲ್ಲಿ ಹೆಚ್ಚಾಗಿ ರೈತರು ಮೆಕ್ಕೆಜೋಳ, ಈರುಳ್ಳಿ, ಜೋಳ, ಬೆಳೆಯುತ್ತಾರೆ. ನಾನು ಹೆಚ್ಚಾಗಿ ಈರುಳ್ಳಿಯನ್ನು ಬೆಳೆಯುತ್ತೇನೆ. ಈ ಭಾಗದಲ್ಲಿ ಬೆಳೆಯುವ ಈರುಳ್ಳಿಗೆ

ದೇಶದಲ್ಲಿ ಹೆಚ್ಚಿನ ಬೇಡಿಕೆ ಇದೆ ಎನ್ನುತ್ತಾ, ನಮ್ಮ ಊರಿನಲ್ಲಿ ಹಾಗೂ ಊರಿನ ಹತ್ತಿರದಲ್ಲಿ ಸೂಕ್ತ ಮಾರುಕಟ್ಟೆಯ ಕೊರತೆ ಇರುವುದರಿಂದ ಬೆಳೆದಿರುವ ಯಾವುದೇ ಉತ್ಪನ್ನಗಳನ್ನು ನಾವು ಮಾರುಕಟ್ಟೆಗೆ ಹೋಗಿ ಮಾರುವುದು, ಹೆಚ್ಚಿನ ವೆಚ್ಚವಾಗುತ್ತದೆ. ಅಂದರೆ ಸಾರಿಗೆಯ ವೆಚ್ಚ, ಹಮಾಲಿಗಳ ವೆಚ್ಚ, ದಾಸ್ತಾನು ಸಂಗ್ರಹಣೆಯ ವೆಚ್ಚ ಹಾಗೂ ವಸತಿಯ, ಊಟ ಉಪಚಾರದ ವೆಚ್ಚಗಳೆಲ್ಲವೂ ತಗಲುತ್ತದೆ. ಇದರಿಂದಾಗಿ ಈ ಭಾಗದ ಅನೇಕ ರೈತರು ನಮ್ಮ ಊರಿಗೆ ಬಂದು ಕೊಂಡುಕೊಳ್ಳುವ ದಲ್ಲಾಳಿಗಳಿಗೆ ಉತ್ಪನ್ನಗಳನ್ನು ಮಾರಾಟ ಮಾಡುತ್ತಾರೆ. ರೈತರು ಇದರಿಂದ ಉತ್ಪನ್ನಗಳನ್ನು ಬೇರೆ ಊರಿಗೆ ಹೋಗಿ ಮಾರಾಟ ಮಾಡಲು ತಗಲುವ ವೆಚ್ಚಗಳಾದ ಸಾರಿಗೆ, ಹಮಾಲಿ, ಸಂಗ್ರಹಣೆ, ವಸತಿ ವೆಚ್ಚಗಳ ಹೊರೆಯನ್ನು ಕಡಿಮೆ ಮಾಡ ಬಹುದಾಗಿದೆ. ಹಾಗೆಯೇ ಅನೇಕ ರೈತರು ಅವಿದ್ಯಾವಂತರಾಗಿರುವುದರಿಂದ, ಅವರು ಪಟ್ಟಣಗಳಿಗೆ ಹೋಗಿ ಮಾರಾಟ ಮಾಡುವಷ್ಟು ತಿಳಿವಳಿಕೆಯನ್ನು ಹೊಂದಿರುವುದಿಲ್ಲ. ಈ ಕಾರಣಗಳಿಂದಲೂ ದಲ್ಲಾಳಿಗಳು ಬಂದು ಕೊಂಡುಕೊಳ್ಳುವುದು ಕೆಲವು ರೈತರಿಗೆ ಅನುಕೂಲಕರವೇ ಆಗಿದೆ ಎಂದು ಹೇಳುತ್ತಾ, ಊರಿನಲ್ಲೇ ದಲ್ಲಾಳಿಗಳಿಗೆ ಮಾರುವುದರಿಂದ ಆಗುವ ನಷ್ಟದ ಮನವರಿಕೆ ಇರುವುದಿಲ್ಲ ಅಂದರೆ ಕೊಂಡುಕೊಳ್ಳುವ ಸಂದರ್ಭದಲ್ಲಿ ರೈತರಿಗೆ ದಲ್ಲಾಳಿಗಳು ಮಾಡುವ ತೂಕದಲ್ಲಿಯ ಮೋಸ, ಕಡಿಮೆ ಬೆಲೆ ನಿಗದಿ(ಅಂದರೆ, ಸಾರಿಗೆ, ಬಾಜಿ, ಹಮಾಲಿ ಕೂಡಿಸಿ) ವಂಚನೆ ಹೀಗೆ ರೈತರ ಉತ್ಪನ್ನಗಳನ್ನು ರೈತರ ಹೊಲಗಳಲ್ಲಿಯೇ ಕೊಂಡುಕೊಂಡು ಮಾರುಕಟ್ಟೆಯಲ್ಲಿ ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಾರೆ ಎನ್ನುವ ಮಾಹಿತಿಯ ಜೊತೆಗೆ ರೈತರು ದಲ್ಲಾಳಿಗಳಿಗೆ ಮಾರಾಟ ಮಾಡಲು ಇನ್ನೊಂದು ಮುಖ್ಯ ಕಾರಣವೆಂದರೆ, ರೈತರು ಉತ್ಪನ್ನಗಳನ್ನು ಬೆಳೆಯಲು ಅನೇಕ ಖರ್ಚುಗಳನ್ನು ಭರಿಸಿರುತ್ತಾರೆ. ಇದಕ್ಕಾಗಿ ಸಾಲ ಸೋಲವನ್ನು ಮಾಡಿರುತ್ತಾರೆ. ಈ ಕಾರಣಗಳಿಂದಲೂ ಅನೇಕ ರೈತರು ತಮ್ಮ ಊರಿನಲ್ಲೇ ಬಂದು ಕೊಂಡುಕೊಳ್ಳುವ ದಲ್ಲಾಳಿಗಳಿಗೆ ಉತ್ಪನ್ನಗಳನ್ನು ಮಾರಾಟ ಮಾಡುತ್ತಾರೆ.

ಮುಂದಿನ ಪ್ರಶ್ನೆ ಬೆಂಬಲ ಬೆಲೆ ಕುರಿತಾಗಿದ್ದು, ಅದಕ್ಕೆ ಕುಮಾರಸ್ವಾಮಿಯವರು, ಬೆಂಬಲ ಬೆಲೆ ಘೋಷಿಸಿದ ಸರ್ಕಾರವು, ಉತ್ಪನ್ನಗಳ ಸಂಗ್ರಹಕ್ಕೆ ಸರಿಯಾದ ಸಂಗ್ರಹಣೆ ಕೊಠಡಿಗಳನ್ನು ನಿರ್ಮಿಸಿ, ಮಾರುಕಟ್ಟೆಯಲ್ಲಿ ಉತ್ಪನ್ನಗಳ ಕೊರತೆ ಉಂಟಾಗಿ, ಬೆಲೆ ಹೆಚ್ಚಾದಾಗ, ಸರ್ಕಾರವು ಸಂಗ್ರಹಿಸಿಟ್ಟ ಉತ್ಪನ್ನಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿ ಬೆಲೆ ಏರಿಕೆಯನ್ನು ತಡೆಯಬೇಕು ಎಂದು, ಇದರಿಂದ ರೈತರು ಮತ್ತು ಗ್ರಾಹಕರಿಗೆ ಆಗುವ ನಷ್ಟನ್ನು ತಪ್ಪಿಸಬಹುದೆಂದು ವೈಜ್ಞಾನಿಕವಾಗಿ ವಿವರಿಸಿದರು. ಬಿತ್ತನೆ ಬೀಜದ ವಿಚಾರವಾಗಿ ಅನೇಕ ಸಲ ಕಲಬೆರಕೆ ಅಥವಾ ಬೀಜ ಮಿಶ್ರಣಗಳ ಕಾರಣದಿಂದ, ಹೊಲಗಳಿಗೆ ಬೀಜಗಳನ್ನು ಹಾಕಿ, ಗೊಬ್ಬರ ಹಾಕಿದರೂ ಬೆಳೆ ಬರದ ಘಟನೆಗಳನ್ನು ವಿವರಿಸುತ್ತಾ, ಅದರ ಪರಿಹಾರವನ್ನು ಅಧಿಕಾರಿಗಳು ಸರಿಯಾಗಿ

ರೈತರಿಗೆ ವಿತರಿಸುವುದಿಲ್ಲ ಎಂದು ತಿಳಿಸಿದರು. ಈ ವರ್ಷದಲ್ಲಿ ಹತ್ತಿ ಮತ್ತು (ಪೈನರ್-7) ಮೆಕ್ಕೆಜೋಳದಲ್ಲಿ ಇಂತಹ ಘಟನೆಗಳು ಹೆಚ್ಚು ಎಂದರು.

ಕೆಳಗಿನ ಕೋಷ್ಟಕ-54ರಲ್ಲಿ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯ ಫಲಾನುಭವಿ ಗಳಾಗಿದ್ದರೆ ಯಾವ ಬೆಳೆಗಳಿಗೆ ಪಡೆದಿದ್ದೀರಾ ಎಂದಾಗ ಹೊಸಹಳ್ಳಿ ಗ್ರಾಮದಲ್ಲಿ ಹಣ್ಣುಗಳಿಗೆ ಶೇ.63.33ರಷ್ಟು, ಹೂವುಗಳಿಗೆ ಶೇ.3.33ರಷ್ಟು, ತರಕಾರಿಗಳಿಗೆ ಶೇ.18ರಷ್ಟು ಮತ್ತು ಇತರೆ ಶೇ.3.33ರಷ್ಟು ರೈತರು ಪ್ರಯೋಜನೆಯನ್ನು ಪಡೆದರೆ, ಹೊನ್ನಳ್ಳಿ ಗ್ರಾಮದಲ್ಲಿ ಹಣ್ಣುಗಳಿಗೆ ಶೇ.3.33ರಷ್ಟು, ಹೂವುಗಳಿಗೆ ಶೇ.11.67ರಷ್ಟು, ತರಕಾರಿಗಳಿಗೆ ಶೇ.83.33ರಷ್ಟು ಮತ್ತು ಇತರೆ ಶೇ.1.67ರಷ್ಟು ರೈತರು ಪ್ರಯೋಜನೆಯನ್ನು ಪಡೆದಿರುತ್ತಾರೆ. ಎನ್.ಎಚ್.ಎಂ. ವಿಷಯಕ್ಕೆ ಪೂರಕವಾಗಿ ಇಲಾಖೆಯ ಅಧಿಕಾರಿಗಳ ಮಾಹಿತಿಯನ್ನು ಇಲ್ಲಿ ಚರ್ಚಿಸಿದ್ದೇನೆ, ದಿನಾಂಕ 17/05/2013ರಂದು ಹಗರಿಬೊಮ್ಮನಹಳ್ಳಿಯ ಸಹಾಯಕ ತೋಟಗಾರಿಕೆ ಇಲಾಖೆಯ S.Nagara AHO (assistant horticulture officer)ರನ್ನು ಸಂದರ್ಶಿಸಿದಾಗ, ಅವರು ತೋಟಗಾರಿಕೆ ಇಲಾಖೆಯಿಂದ ರೈತರಿಗೆ ದೊರೆಯುವ ಸೌಲಭ್ಯಗಳ ಕುರಿತು ತಿಳಿಸಿದರು. ಅದರಲ್ಲಿ ರಾಷ್ಟ್ರೀಯ ತೋಟಗಾರಿಕೆ ಅಭಿವೃದ್ಧಿ(NHM national horticulture mission)ಸಮಗ್ರ ತೋಟಗಾರಿಕೆ ಅಭಿವೃದ್ಧಿ ಎನ್ನುವ ಎರಡು ಯೋಜನೆಗಳ ವಿವರ ನೀಡಿದರು. ಈ ಯೋಜನೆಗಳು ದೇಶದಾದ್ಯಂತ ಇದ್ದು, ಆಯಾಯ ರಾಜ್ಯಗಳ ಹವಾಗುಣಗಳಿಗೆ ತಕ್ಕಂತೆ ಬೆಳೆಗಳನ್ನು ಬೆಳೆದು ಅಭಿವೃದ್ಧಿ ಪಡಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಉದಾ-ಕರ್ನಾಟಕದಲ್ಲಿ ಬಿಜಾಪುರದಲ್ಲಿ ರೈತರು ಹೆಚ್ಚು ದ್ರಾಕ್ಷಿ, ದಾಳಿಂಬೆ, ನಿಂಬೆಯಂತಹ ಬೆಳೆಗಳನ್ನು ಈ ಯೋಜನೆಯಡಿಯಲ್ಲಿ ಬೆಳೆಯುತ್ತಾರೆ. ಹಾಗೆಯೇ ಈ ಬೆಳೆಗಳು ಅಲ್ಲಿಯ ಹವಾಗುಣಕ್ಕೆ ಹೊಂದಿಕೆಯಾಗಿರುತ್ತವೆ.

ಅಂತೆಯೇ ನಮ್ಮ ಜಿಲ್ಲೆ ಬಳ್ಳಾರಿಯಲ್ಲಿ ಹೆಚ್ಚಾಗಿ ಓಊಒ ಅಡಿಯಲ್ಲಿ ಹೆಚ್ಚಾಗಿ ಹಣ್ಣಿನ ಬೆಳೆಗಳಿಗೆ ಮತ್ತು ಆಹಾರ ಬೆಳೆಗಳಿಗೆ subsidy ದೊರೆಯುತ್ತದೆ, ಈ ಭಾಗದಲ್ಲಿ ಹೆಚ್ಚಾಗಿ ಹಣ್ಣುಗಳಲ್ಲಿ ಬಾಳೆ, ದಾಳಿಂಬೆ, ಸಪೋಟ, ಮಾವು, ಪಪ್ಪಾಯ ಬೆಳೆಗಳಿಗೆ ಹೆಚ್ಚಿನ ರೈತರ ಬೇಡಿಕೆ ಇದೆ ಎಂದು ನಾಗರಾಜ ಅವರು ತಿಳಿಸಿದರು. ಹಾಗೆಯೇ ಹಣಕಾಸಿನ ಬಗ್ಗೆ, ಅಂದರೆ ಹೇಗೆ ರೈತರಿಗೆ ಈ ಯೋಜನೆಯಡಿಯಲ್ಲಿ ದೊರೆಯುವ subsidy ಸಮಯಕ್ಕೆ ದೊರೆಯುತ್ತವೆ. ಎನ್ನುವ ಪ್ರಶ್ನೆಗೆ subsidy ಉಪಯೋಗ ಪಡೆದುಕೊಂಡ ರೈತರು, ಬ್ಯಾಂಕ್ ಖಾತೆಯನ್ನು ಹೊಂದಿರಬೇಕು. ಅವರು ಪಡೆದ subsidy ಹಣ ನೇರವಾಗಿ ರೈತರ ಖಾತೆಗೆ ಸಮವಾಗಿರುತ್ತದೆ. ಪ್ರತಿ ವರ್ಷವು ಜಿಲ್ಲೆಯಾದ್ಯಂತ ಒಂದು ನಿರ್ದಿಷ್ಟ ಗುರಿಯನ್ನು ಹೊಂದಿರುತ್ತದೆ. ಅಂದರೆ ಎಷ್ಟು ಹಣವನ್ನು ರೈತರಿಗೆ ಯೋಜನೆಗಳ ಅಡಿಯಲ್ಲಿ subsidyಯನ್ನು ಕೊಡಬೇಕು ಎಂಬುದನ್ನು ಅದರಂತೆಯೇ ರೈತರ ಬೇಡಿಕೆಯ ಅನುಗುಣವಾಗಿ ಪ್ರತಿ ವರ್ಷವೂ ಗುರಿಯನ್ನು ಬದಲಾಯಿಸುತ್ತಾ

ಹೋಗುತ್ತಾರೆ ಎನ್ನುವ ಮಾಹಿತಿಯನ್ನು ತಿಳಿಸಿದರು. ಹಗರಿಬೊಮ್ಮನಹಳ್ಳಿಯ ತಾಲ್ಲೂಕಿನಲ್ಲಿ ಈ ಯೋಜನೆಗಳ ಫಲಾನುಭವಿಗಳು ಅನೇಕರಿದ್ದು, ರೈತರ, subsidyಯಲ್ಲಿ ಅನೇಕ ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಮುಖ್ಯವಾಗಿ ಪಪ್ಪಾಯ, ದಾಳಿಂಬೆ, ಬಾಳೆ ಬೆಳೆಗಳಿಗೆ ಹೆಚ್ಚಿನ ರೈತರು ಈ ಯೋಜನೆಗಳ ಅಡಿಯಲ್ಲಿ ಸಾಲ ತೆಗೆದುಕೊಂಡಿದ್ದಾರೆ. ಅನೇಕ ರೈತರು ಈ ಯೋಜನೆಗಳು ತುಂಬಾ ಉಪಯುಕ್ತವಾಗಿವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ರೈತರು ಬೆಳೆದ ಉತ್ಪನ್ನಗಳನ್ನು ಎರಡು ಮಾರ್ಗಗಳ ಮುಖಾಂತರ ಮಾರಲಾಗುವುದು. ಅದರಲ್ಲಿ ಮೊದಲನೆಯದು ರೈತರಿಂದ ನೇರವಾಗಿ consumers, ಎರಡನೆಯದು ರೈತರಿಂದ ಮಧ್ಯವರ್ತಿಗಳು, ನಂತರ ಬಳಕೆದಾರರು. ಬಹುಮುಖ್ಯವಾಗಿ ಅವರು ಅನೇಕ ರೈತರು ತೋಟಗಾರಿಕೆ ಇಲಾಖೆಯಡಿಯಲ್ಲಿರುವ ಯೋಜನೆಗಳ ಲಾಭ ಪಡೆದಿದ್ದಾರೆ. ಉಪಯೋಗ ಪಡೆದಿರುವಂತಹ ರೈತರು ಯೋಜನೆಗಳ ಕುರಿತು ಹಾಗೆಯೇ ಸಿಬ್ಬಂದಿಯ ಕುರಿತು ಒಳ್ಳೆಯ ಆಭಿಪ್ರಾಯವನ್ನು ವ್ಯಕ್ತಪಡಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ರೈತ ಬಸವರಾಜ ಅವರನ್ನು ಪ್ರಶ್ನಿಸಿದಾಗ, ಅವರು ತೋಟಗಾರಿಕೆ ಇಲಾಖೆಯ ಯೋಜನೆಗಳ ಪ್ರಯೋಜನವನ್ನು ಪಡೆದಿದ್ದು, ಯೋಜನೆಗಳಾದ ಎನ್.ಎಚ್.ಎಂ. ಮತ್ತು ಅರ್.ಕೆ.ವಿ.ವೈ ರೈತರಿಗೆ ಅನುಕೂಲವಾಗಿವೆ ಆದರೂ ಹೆಚ್ಚಿನ ರೈತರಿಗೆ ಸರಿಯಾದ ಮಾಹಿತಿ ದೋರೆಯದೆ ವಂಚಿತರಾಗುತ್ತಿದ್ದಾರೆ ಎಂದು ಯೋಜನೆ ಗಳನ್ನು ಗ್ರಾಮೀಣ ಮಟ್ಟಕ್ಕೆ ತಲುಪಿಸುವಲ್ಲಿ ಸಂಬಂಧಪಟ್ಟ ಇಲಾಖೆಗಳು ಇನ್ನು ಹೆಚ್ಚಿನ ಕ್ರಮಗಳನ್ನು ಕೈಗೊಳ್ಳಬೇಕೆನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು.

**ಕೋಷ್ಟಕ–54**

**ಸಮಗ್ರ ತೋಟಗಾರಿಕೆ ಕೃಷಿ ಯೋಜನೆಯ ವಿವರ**

| ಕ್ರ ಸಂ. | ಸಮಗ್ರ ತೋಟಗಾರಿಕೆ ಯೋಜನೆಗಳು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಹಣ್ಣುಗಳು | 38 | 63.33 | 2 | 3.33 |
| 2 | ಹೂವುಗಳು | 2 | 3.33 | 7 | 11.67 |
| 3 | ತರಕಾರಿಗಳು | 18 | 30.00 | 50 | 83.33 |
| 4 | ಇತರೆ | 2 | 3.33 | 1 | 1.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದ ಮೂಲಕ ಪಡೆದ ಮಾಹಿತಿ

ಕೋಷ್ಟಕ-55ರಲ್ಲಿ ಎನ್.ಎಚ್.ಎಂ. ಯೋಜನೆಯಡಿಯಲ್ಲಿ ಹನಿ ನೀರಾವರಿಗೆ ಎಷ್ಟು ಹೆಕ್ಟೇರ್‌ಗೆ ಧನಸಹಾಯದ ಪ್ರಯೋಜನೆಯನ್ನು ಪಡೆದಿರುತ್ತೀರಿ ಎಂದಾಗ ಗರಿಷ್ಠ ಎರಡು ಹೆಕ್ಟೇರ್‌ಗೆ ಧನಸಹಾಯವನ್ನು ಶೇ.8.33ರಷ್ಟು ರೈತರು ಎರಡು ಹೆಕ್ಟೇರ್‌ಗಿಂತ ಕಡಿಮೆ ಧನ ಸಹಾಯವನ್ನು ಶೇ.13.33ರಷ್ಟು ರೈತರು ಮತ್ತು ಪ್ರಯೋಜನೆ ಪಡೆಯದ ರೈತರು ಶೇ.78.33ರಷ್ಟು ರೈತರು ಹೊಸಳ್ಳಿಯಲ್ಲಿ ಇದ್ದರೆ, ಹೊನ್ನಳ್ಳಿ ಗ್ರಾಮದಲ್ಲಿ ಗರಿಷ್ಠ ಎರಡು ಹೆಕ್ಟೇರ್ ಧನ ಸಹಾಯವನ್ನು ಶೇ.10ರಷ್ಟು ರೈತರು, ಎರಡು ಹೆಕ್ಟೇರ್‌ಗಿಂತ ಕಡಿಮೆ ಧನಸಹಾಯವನ್ನು ಶೇ.6.67ರಷ್ಟು ರೈತರು, ಮತ್ತು ಪ್ರಯೋಜನೆ ಪಡೆಯದ ರೈತರು ಶೇ.83.33ರಷ್ಟು ರೈತರು ಎನ್ನುವ ಅಂಕಿ ಅಂಶಗಳು ದೊರೆತಿವೆ. ಇದೇ ಯೋಜನೆಯಡಿಯಲ್ಲಿ ಯಾವ ವರ್ಗದಡಿಯಲ್ಲಿ ಪ್ರಯೋಜನೆಯನ್ನು ಪಡೆದಿರುತ್ತೀರಿ ಎಂದರೆ ಹೊಸಹಳ್ಳಿಯಲ್ಲಿ ಶೇ.5ರಷ್ಟು ರೈತರು, ಪ.ಜಾ/ ಪ.ಪಂ.ಶೇ.90ರಷ್ಟು, ಶೇ.18.33ರಷ್ಟು ಸಣ್ಣ/ಅತಿ ಸಣ್ಣ ರೈತರಿಗೆ ಶೇ.50ರಷ್ಟು, ಶೇ.1.67ರಷ್ಟು ದೊಡ್ಡ ರೈತರಿಗೆ ಶೇ.40ರಷ್ಟು, ಮತ್ತು, ಯೋಜನೆಯ ಪ್ರಯೋಜನೆಯನ್ನು ಶೇ.76.67ರಷ್ಟು ರೈತರು ಪಡೆದಿರುವುದಿಲ್ಲಾವೆಂದು ಹೇಳಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.43.33ರಷ್ಟು ರೈತರು, ಪ.ಜಾ/ಪ.ಪಂ.ಶೇ.90ರಷ್ಟು, ಶೇ.3.33ರಷ್ಟು ಸಣ್ಣ/ಅತಿ ಸಣ್ಣ ರೈತರಿಗೆ ಶೇ.50ರಷ್ಟು, ದೊಡ್ಡ ರೈತರಿಗೆ ಶೇ.40ರಷ್ಟು ಯಾರು ಪ್ರಯೋಜನೆಯನ್ನು ತೆಗೆದುಕೊಂಡಿಲ್ಲ ಮತ್ತು ಈ ಯೋಜನೆಯ ಪ್ರಯೋಜನೆಯನ್ನು ಶೇ.56.67ರಷ್ಟು ರೈತರು ಪಡೆದಿಲ್ಲವೆಂದು ಹೇಳಿರುತ್ತಾರೆ.

ಇದೇ ಯೋಜನೆಯ ಕುರಿತು ರೈತರನ್ನು ತೋಟಗಾರಿಕೆ ಬೆಳೆಗಳಿಗೆ ಕೊಡುವ ಸಹಾಯಧನದ ಕುರಿತು ಕೂಡ್ಲಿಗಿ ತಾಲೂಕಿನ, ಭೀಮಸಮುದ್ರದ ಶರಣಬಸಪ್ಪ(2013) ಎನ್ನುವ ರೈತರನ್ನು ಪ್ರಶ್ನಿಸಿದಾಗ, ಶರಣಬಸಪ್ಪನವರು ಪಪ್ಪಾಯಿ ಬೆಳೆಯನ್ನು ತೋಟಗಾರಿಕೆ ಬೆಳೆಗಳಡಿಯಲ್ಲಿ ಬೆಳೆಯುತ್ತಿದ್ದು, ಅವರು ಬೆಳೆಗಳಿಗೆ ಸಹಾಯಧನ ಕೊಡುವುದರ ಕುರಿತು ಈ ರೀತಿಯಾಗಿ ಉತ್ತರಿಸಿದರು,. ಸರ್ಕಾರವು ಪ್ರೋತ್ಸಾಹಧನ ಕೊಡುತ್ತಿರುವುದು ರೈತರಿಗೆ ಅನುಕೂಲಕರವಾಗಿದೆ. ಅದರಲ್ಲೂ ಈ ಭಾಗದ ರೈತರಿಗೆ ಯಾವುದೇ ನೀರಾವರಿ ಯೋಜನೆಗಳ ಆಸರೆ ಇರುವುದಿಲ್ಲ. ಆದ್ದರಿಂದ ರೈತರು ಕೃಷಿಗೆ ಕೊಳವೆ ಬಾವಿಗಳು ಮತ್ತು ಮಳೆಯ ಮೇಲೆಯೇ ಆಧಾರವಾಗಿರುತ್ತಾರೆ ಎಂದು ತಿಳಿಸಿದರು. ಆದರೆ ತಾವು ಬೆಳೆದ ಪಪ್ಪಾಯಿ ಬೆಳೆಗಳಿಗೆ ಕಳೆದ ವರ್ಷ ಬರಬೇಕಾಗಿದ್ದ ಪ್ರೋತ್ಸಾಹಧನ ಇದುವರೆಗೂ ಇಲಾಖೆಯಿಂದ ಬಂದಿಲ್ಲ. ಅದರೆ ಸರ್ಕಾರವು ಈ ವರ್ಷ ಮತ್ತೆ ತೋಟಗಾರಿಕೆ ಬೆಳೆಗಳಡಿಯಲ್ಲಿ ಪ್ರೋತ್ಸಾಹಧನ ನಿಗದಿಪಡಿಸಿದೆ.

ಇನ್ನೊಬ್ಬ ರೈತ ಕೂಡ್ಲಿಗಿ ತಾಲೂಕಿನ ಚಿರಿಬಿ ಗ್ರಾಮದಲ್ಲಿ ಈರಣ್ಣ(2014) ಎನ್ನುವ ಸಣ್ಣ ರೈತರನ್ನು ತೋಟಗಾರಿಕೆ ಇಲಾಖೆಯ ಮತ್ತು ಇಲಾಖೆಯ ಯೋಜನೆಗಳ ಕುರಿತು ಕೇಳಿದಾಗ ಈರಣ್ಣನವರು ಈ ಕೆಳಗಿನಂತೆ ಪ್ರತಿಕ್ರಿಯಿಸಿದರು. ತೋಟಗಾರಿಕೆ ಇಲಾಖೆಯು ಅನೇಕ ರೈತಪರ ಯೋಜನೆಗಳನ್ನು ಬಿಡುಗಡೆ ಮಾಡುತ್ತದೆ. ಅದರಲ್ಲೂ ರೈತರಿಗೆ ಪ್ರೋತ್ಸಾಹಧನದಲ್ಲಿ ನೀಡುತ್ತಿರುವ ಟ್ರ್ಯಾಕ್ಟರ್‌ಗಳಿಂದ ಉಪಯೋಗವಾಗಿದೆ. ಬೇಕಾದಾಗ ಟ್ರ್ಯಾಕ್ಟರನ್ನು ತಮ್ಮ ಹೊಲಗಳ ಕೆಲಸಕ್ಕೆ ಬಳಸಿಕೊಳ್ಳುವುದು, ಬಿಡುವಿನ ವೇಳೆಯಲ್ಲಿ ಬಾಡಿಗೆಗೆ ಟ್ರ್ಯಾಕ್ಟರ್‌ಗೆ ಹೊಗುತ್ತೇನೆ ಇದರಿಂದ ನನಗೆ ಮತ್ತು ನಮ್ಮ ಕುಟುಂಬಕ್ಕೆ ಉಪಯೋಗವಾಗಿದೆ ಎಂದು ತಿಳಿಸಿದರು. ಮತ್ತೊಬ್ಬ ರೈತ ಕೊಟ್ಟೂರಿನ ಗಿರೀಶ್(2014)ಎಂಬುವವರನ್ನು ತೋಟಗಾರಿಕೆ ಇಲಾಖೆಯ ಮತ್ತು ಇಲಾಖೆಯ ಯೋಜನೆಗಳು, ಹೇಗೆ ಕಾರ್ಯ ನಿರ್ವಹಿಸುತ್ತವೆ ಮತ್ತು ಅವುಗಳಿಂದ ಎಲ್ಲ ಭಾಗದ ರೈತರಿಗೆ ಅನೂಕೂಲವಾಗಿದೆಯೇ ಎನ್ನುವ ನನ್ನ ಪ್ರಶ್ನೆಗೆ, ಯೋಜನೆಗಳು ರೈತರಿಗರ ಅನುಕೂಲವೆ, ಆದರೆ ಸರ್ಕಾರವು ಎಲ್ಲ ಭಾಗದ ರೈತರಿಗೆ ಏಕರೂಪದ ಯೋಜನೆಗಳನ್ನು ಜಾರಿಗೊಳಿಸುವುದು ಸೂಕ್ತವಲ್ಲ ಎಂದು ಹೇಳುತ್ತಾ, ನಾನು 2. ಹೆಕ್ಟೇರ್‌ನಲ್ಲಿ ಸಪೋಟ ಬೆಳೆಯುತ್ತಿದ್ದೇನೆ. ಆದರೆ ಇಲಾಖೆಯು ನಿಗದಿಪಡಿಸಿರುವುದು, ಕೇವಲ 1 ಹೆಕ್ಟೇರ್‌ಗೆ ಮಾತ್ರ. ಅದು 11.00 ಸಾವಿರ ರೂ.ಗಳು ಆಗಿರುತ್ತದೆ ಎಂದು ತಮ್ಮ ಅಳಲನ್ನು ರೈತರು ವ್ಯಕ್ತಪಡಿಸಿದರು.

**ಕೋಷ್ಟಕ–55**

**ರಾಷ್ಟ್ರೀಯ ತೋಟಗಾರಿಕೆ ಕೃಷಿ ಯೋಜನೆಯಡಿಯಲ್ಲಿ ಹನಿ ನೀರಾವರಿಯ ವಿವರ**

| ಕ್ರ. ಸಂ. | ಧನಸಹಾಯದ ಪ್ರಯೋಜನೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಗರಿಷ್ಟ 2 ಹೆಕ್ಟೇರ್‌ಗೆ | 5 | 8.33 | 6 | 10.00 |
| 2. | 2 ಹೆಕ್ಟೇರ್‌ಗಿಂತ ಕಡಿಮೆ | 8 | 13.33 | 4 | 6.67 |
| 3. | ಇಲ್ಲ | 47 | 78.33 | 50 | 83.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಮುಂದಿನ ಕೋಷ್ಟಕ–56ರಲ್ಲಿ ಕೇಂದ್ರ ವಲಯ ಯೋಜನೆಗಳ ಪ್ರಯೋಜನ ಪಡೆದಿರುತ್ತೀರಾ ಎಂದಾಗ ಹೊಸಹಳ್ಳಿಯಲ್ಲಿ ಶೇ.16.67ರಷ್ಟು ರೈತರು ಹನಿನೀರಾವರಿ ಯೋಜನೆಗೆಂದು, ಶೇ. 10ರಷ್ಟು ರೈತರು ರಾಷ್ಟ್ರೀಯ ತೋಟಗಾರಿಕೆ ಮಿಷನ್‌ನಲ್ಲಿ, ಶೇ.8.33ರಷ್ಟು ರೈತರು ಪುಷ್ಪ

ಬೆಳೆಗಳು, ರಕ್ಷಿತ ಬೇಸಾಯ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ ಯೋಜನೆಗಳಿಗೆ ಯಾವುದೇ ರೈತರೂ ಪ್ರಯೋಜನೆ ಪಡೆದಿಲ್ಲ. ಶೇ.16.67ರಷ್ಟು ರೈತರು ಸಮಗ್ರ ಪೋಷಕಾಂಶ ಹಾಗೂ ಸಮಗ್ರ ಪೀಡೆ ನಿರ್ವಹಣೆಗೆ, ಶೇ.10ರಷ್ಟು ರೈತರು ಸಾವಯವ ಕೃಷಿಗೆ, ಮತ್ತು ಶೇ.45ರಷ್ಟು ರೈತರು ಕೊಯ್ಲೋತ್ತರ ನಿರ್ವಹಣೆಗೆ ಪ್ರಯೋಜನ ಪಡೆದಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಶೇ.13.33ರಷ್ಟು ರೈತರು ಹನಿ ನೀರಾವರಿ ಯೋಜನೆಗೆಂದು, ಶೇ.6.67ರಷ್ಟು ರೈತರು ರಾಷ್ಟ್ರೀಯ ತೋಟಗಾರಿಕೆ ಮಿಷನ್‌ನಲ್ಲಿ, ಶೇ.18.33 ರಷ್ಟು ರೈತರು ಪುಷ್ಪ ಬೆಳೆಗಳು, ರಕ್ಷಿತ ಬೇಸಾಯ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ, ಕೊಯ್ಲೋತ್ತರ ನಿರ್ವಹಣೆ ಯೋಜನೆಗಳಿಗೆ ಯಾವುದೇ ರೈತರೂ ಪ್ರಯೋಜನೆ ಪಡೆದಿಲ್ಲ. ಶೇ.10ರಷ್ಟು ರೈತರು ಸಮಗ್ರ ಪೋಷಕಾಂಶ ಹಾಗೂ ಸಮಗ್ರ ಪೀಡೆ ನಿರ್ವಹಣೆಗೆ, ಶೇ.51.67ರಷ್ಟು ಸಾವಯವ ಕೃಷಿಗೆ ಪ್ರಯೋಜನ ಪಡೆದಿದ್ದಾರೆ ಎನ್ನುವ ಅಂಕಿ ಅಂಶಗಳು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

**ಕೋಷ್ಟಕ–56**

**ಕೇಂದ್ರ ಯೋಜನೆಯಡಿಯಲ್ಲಿ ಪ್ರಯೋಜನ ಪಡೆದವರ ವಿವರ**

| ಕ್ರ ಸಂ. | ಕೇಂದ್ರ ಯೋಜನೆಗಳ ಪ್ರಯೋಜನೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಹನಿ ನೀರಾವರಿ ಯೋಜನೆ | 10 | 16.67 | 8 | 13.33 |
| 2. | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 6 | 10 | 4 | 6.67 |
| 3. | ಪುಷ್ಪ ಬೆಳೆಗಳು | 5 | 8.33 | 11 | 18.33 |
| 4. | ರಕ್ಷಿತ ಬೇಸಾಯ | 0 | 00 | 0 | 00 |
| 5. | ಸಮಗ್ರ ಪೋಷಕಾಂಶ ಹಾಗೂ ಸಮಗ್ರ ಪೀಡೆ ನಿರ್ವಹಣೆ | 10 | 16.67 | 6 | 10 |
| 6. | ಸಾವಯವ ಕೃಷಿ | 6 | 10 | 31 | 51.67 |
| 7. | ಮಾನವ ಸಂಪನ್ಮೂಲ ಅಭಿವೃದ್ಧಿ | 0 | 00 | 0 | 00 |
| 8. | ಕೊಯ್ಲೋತ್ತರ ನಿರ್ವಹಣೆ | 27 | 45 | 0 | 00 |
| | ಒಟ್ಟು | 60 | 100 | 60 | 100 |

ಮಾಹಿತಿಯ ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

ಲೀಸಾ ಮಾರ್ಶೈ ವಾಸ್ಕೋ ಆಲ್ಟರ್‌ನೇಟಿವ್ ವಿಡ್ ಮ್ಯಾನೇಜ್‌ಮೆಂಟ್ ಪ್ರಾಕ್ಟೀಸ್ ಎಪೆಕ್ಟ್ಸ್ ಆನ್ ವಿಡ್ ಕಂಟ್ರೋಲ್ ಗ್ರಾಪ್ರೈನ್ ಪರ್‌ಫಾರ್‌ಮೆನ್ಸ್, ಅಂಡ್ ಸಾಯಿಲ್ ಕ್ವಾಲಿಟಿ ಇನ್ ಆ್ಯನ್ ಎಸ್ಟಾಬ್ಲಿಷ್ಡ್ ಅಧ್ಯಯನದಲ್ಲಿ ದ್ರಾಕ್ಷಿ ಬೆಳೆಯನ್ನು ಬೆಳೆಯುವಾಗ ರೈತರಿಗೆ ಎದುರಾಗುವ ಕಳೆಯ ವಿಷಯವಾಗಿ ಮತ್ತು ಮಣ್ಣಿನ ಫಲವತ್ತತೆಯ ಅಧ್ಯಯನವನ್ನು ಐವಾನ್ ಪ್ರದೇಶಕ್ಕೆ ಸೀಮಿತಗೊಳಿಸಿ ಅಧ್ಯಯನವನ್ನು ಕೈಗೊಂಡಿರುತ್ತದೆ. ಅಧ್ಯಯನದ ಉದ್ದೇಶವಾಗಿ ಕಳೆಯನ್ನು ಹೇಗೆ ಕಡಿಮೆಗೊಳಿಸುವುದು ಮತ್ತು ಮಣ್ಣಿನ ಫಲವತ್ತತೆಯನ್ನು ಹೇಗೆ ಹೆಚ್ಚಿಸುವುದರ ಜೊತೆಗೆ ದ್ರಾಕ್ಷಿ ಬೆಳೆಗಾರರ ವರ್ತನೆ ಮತ್ತು ದ್ರಾಕ್ಷಿ ಕಳೆಯ ಬಗೆಗೆ ರೈತರಿಗೆ ಇರುವ ಅರಿವನ್ನು ಕ್ಷೇತ್ರ ಕಾರ್ಯದ ಮೂಲಕ ಅಧ್ಯಯನಿಸುವುದಾಗಿದೆ. ಅಧ್ಯಯನದಲ್ಲಿ ಕಂಡುಕೊಂಡಿರುವ ಅಂಶವೆಂದರೆ ಕಾಲಕಾಲಕ್ಕೆ ಕಳೆಯನ್ನು ಕಡಿಮೆಗೊಳಿಸುವುದು, ಅದಕ್ಕಾಗಿ ಮಣ್ಣಿನ ಪರಿಕ್ಷೆ ಮಾಡಿಸಿ ಬೇಕಾದ ಕ್ರಿಮಿನಾಶಕಗಳನ್ನು ಸಿಂಪಡಿಸುವುದು, ಈ ರೀತಿ ಮಾಡುವುದರಿಂದ ಉತ್ಪನ್ನವನ್ನು ಹೆಚ್ಚಿಸ ಬಹುದೆಂದು ಹೇಳಿದ್ದಾರೆ.

ಕೆಳಗಿನ ಕೋಷ್ಟಕ–57ರಲ್ಲಿ, ಮೇಲಿನ ಕೋಷ್ಟಕಕ್ಕೆ ಸಂಬಂಧಿಸಿದಂತೆ, ಹಣ್ಣಿನ ಬೆಳೆಗಳಿಗೆ ಎಷ್ಟು ಧನಸಹಾಯ ಪಡೆದಿರುವಿರಿ ಎಂದರೆ ಹೊಸಹಳ್ಳಿ ಗ್ರಾಮದಲ್ಲಿ 0–3 ಹೆಕ್ಟೇರ್‌ಗೆ ಶೇ.16.67ರಷ್ಟು ರೈತರು, 3–6 ಹೆಕ್ಟೇರ್‌ಗೆ ಶೇ.1.67ರಷ್ಟು ರೈತರು ಮತ್ತು ಶೇ.81.67ರಷ್ಟು ರೈತರು(ಉಳಿದ ಎಲ್ಲ 49) ಇಲ್ಲ ಎನ್ನುವ ಮಾಹಿತಿಯನ್ನು ಒದಗಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ 0–3 ಹೆಕ್ಟೇರ್‌ಗೆ ಶೇ.3.33ರಷ್ಟು ರೈತರು, 3–6 ಹೆಕ್ಟೇರ್‌ಗೆ ಶೇ.3.33ರಷ್ಟು ರೈತರು ಮತ್ತು ಶೇ.93.33ರಷ್ಟು ರೈತರು(ಉಳಿದ ಎಲ್ಲ 49) ಇಲ್ಲ ಎನ್ನುವ ಮಾಹಿತಿಯನ್ನು ನೀಡಿದ್ದಾರೆ. ಹೂ/ತರಕಾರಿ ಬೆಳಗಳಿಗೆ ಎಷ್ಟು ಹೆಕ್ಟೇರ್‌ಗೆ ಧನ ಸಹಾಯ ಪಡೆದಿರುತ್ತಾರೆಂದು ರೈತರನ್ನು ಸಂದರ್ಶನದಲ್ಲಿ ಕೇಳಿದಾಗ, ಹೊಸಳ್ಳಿಯಲ್ಲಿ ಮೊದಲ ಮೂರು ಹೆಕ್ಟೇರ್‌ಗೆ ಶೇ.90ರಷ್ಟೆಂದು ಗ್ರಾಮದಲ್ಲಿಯ ಶೇ.8.33ರಷ್ಟು ರೈತರು, ಉಳಿದ ಮೂರು ಹೆಕ್ಟೇರ್‌ಗೆ ಶೇ.50 ರಷ್ಟೇಂದು ಗ್ರಾಮದಲ್ಲಿಯ ಶೇ3.33ರಷ್ಟು ರೈತರು ಮತ್ತು ಪ್ರತಿವರ್ಷದ ಮಾರ್ಗಸೂಚಿಯ ಅನುಸಾರ ಶೇ.88.33ರಷ್ಟು ರೈತರು ಯೋಜನೆಯ ಪ್ರಯೋಜನೆಯ ಕುರಿತು ತಿಳಿಸಿದ್ದಾರೆ. ಹಾಗೇಯೇ ಹೊನ್ನಳ್ಳಿ ಗ್ರಾಮದಲ್ಲಿ ಮೊದಲ ಮೂರು ಹೆಕ್ಟೇರ್‌ಗೆ ಶೇ.90ರಷ್ಟೆಂದು ಗ್ರಾಮದಲ್ಲಿಯ ಶೇ.93.33ರಷ್ಟು ರೈತರು, ಉಳಿದ ಮೂರು ಹೆಕ್ಟೇರ್‌ಗೆ ಶೇ.50ರಷ್ಟೆಂದು ಗ್ರಾಮದಲ್ಲಿಯ ಶೇ.3.33ರಷ್ಟು ರೈತರು, ಮತ್ತು ಪ್ರತಿ ವರ್ಷದ ಮಾರ್ಗಸೂಚಿಯ ಅನುಸಾರ ಶೇ.1.67ರಷ್ಟು ರೈತರು ಯೋಜನೆಯ ಪ್ರಯೋಜನೆಯನ್ನು ಪಡೆಯುತ್ತಿದ್ದಾರೆ. ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಮತ್ತು ಯೋಜನೆಯ ಕುರಿತು ಇಲಾಖೆಯ ಅಧಿಕಾರಿಯೊಡನೆ ಚರ್ಚಿಸಿದ ಮಾಹಿತಿ ಈ ರೀತಿಯಾಗಿದೆ.

**ಕೋಷ್ಟಕ–57**

**ಹಣ್ಣಿನ ಬೆಳೆಗಳಿಗೆ ಧನಸಹಾಯದ ವಿವರ**

| ಕ್ರ ಸಂ. | ಧನಸಹಾಯ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | 0–3 ಹೆಕ್ಟೇರ್‌ಗೆ | 10 | 16.67 | 2 | 3.33 |
| 2. | 3–6 ಹೆಕ್ಟೇರ್‌ಗೆ | 1 | 1.67 | 2 | 3.33 |
| 3. | ಇಲ್ಲ | 49 | 81.67 | 56 | 93.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ದಿನಾಂಕ 22/06/2013 ರಂದು ತೋಟಗಾರಿಕೆ ಇಲಾಖೆ ಬಳ್ಳಾರಿಯ ಅಧಿಕಾರಿಯೊಂದಿಗೆ ಚರ್ಚಿಸಿದಾಗ(Technicle assistant officer) ಮಲ್ಲಿಕಾರ್ಜುನ್ ಅವರು, ತೋಟಗಾರಿಕೆ ಇಲಾಖೆ ಅಡಿಯಲ್ಲಿ ರೈತರಿಗೆ ದೊರೆಯುತ್ತಿರುವ ಸೌಲಭ್ಯಗಳ ಕುರಿತು ಮಾಹಿತಿ ನೀಡಿದರು. ಅದರಲ್ಲಿಯೂ ಅವರು ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಗೆ(RKVY)ಸಂಬಂಧಪಟ್ಟ ಅಧಿಕಾರಿ ಯಾಗಿದ್ದರಿಂದ, ಈ ಯೋಜನೆಯಡಿಯಲ್ಲಿ ರೈತರಿಗೆ ಹನಿನೀರಾವರಿ ಯೋಜನೆ, ಶೈತ್ಯಾಗಾರ ವ್ಯವಸ್ಥೆ, ತೋಟಗಾರಿಕೆ ಉತ್ಪನ್ನಗಳ ಸಂಸ್ಕರಣೆ ಕಾರ್ಯಕ್ರಮಗಳಿದ್ದು, ಶೈತ್ಯಾಗಾರಗಳಿಗೆ ಸಂಬಂಧಪಟ್ಟಂತೆ ಹೇಳುತ್ತಾ, ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 16 ಶೈತ್ಯಾಗಾರಗಳಿದ್ದು ಅದರಲ್ಲಿ 14 ಶೈತ್ಯಾಗಾರಗಳು ಕಾರ್ಯ ನಿರ್ವಹಿಸುತ್ತಿದ್ದು, ಈ ಶೈತ್ಯಾಗಾರಗಳನ್ನು ನಡೆಸಲು ಸರಕಾರವು ಸಬ್ಸಡಿಯನ್ನು ನೀಡುತ್ತಿದ್ದು, ಸಬ್ಸಡಿಯು ಈ ರೀತಿಯಲ್ಲಿರುತ್ತದೆ. 1 ಯುನಿಟ್‌ಗೆ 1.ರೂ ಯಂತೆ ಪ್ರತಿವರ್ಷವು 3 ತಿಂಗಳುಗಳ ಕಾಲ, ಯಾವ ಶೈತ್ಯಾಗಾರವು ತೋಟಗಾರಿಕೆ ಯೋಜನೆಯಡಿಯಲ್ಲಿ ಬೆಳೆದ ಉತ್ಪನ್ನಗಳನ್ನು ಸಂಗ್ರಹಿಸುವುದೋ ಅಂತಹ ಶೈತ್ಯಾಗಾರಗಳಿಗೆ ಮೊದಲ ಆದ್ಯತೆಯನ್ನು ಕೊಡಲಾಗುವುದು ಮತ್ತು ಶೈತ್ಯಾಗಾರಗಳು ತೋಟಗಾರಿಕೆ ಇಲಾಖೆಗೆ ವಿದ್ಯುತ್ ಬಿಲ್, ಲೆಡ್ಜರ್ ಬುಕ್ಕನ್ನು ಸಬ್ಸಿಡಿ ಪಡೆಯಲು ಸಲ್ಲಿಸಬೇಕಾಗುತ್ತದೆ. ಅದರ ಆಧಾರದ ಮೇಲೆ ಇಲಾಖೆಯು ಪ್ರತಿ ಯುನಿಟ್‌ಗೆ ಒಂದು ರೂ.ಯಂತೆ ನೀಡುತ್ತದೆ. ಹಾಗೆಯೇ ತೋಟಗಾರಿಕೆ ಬೆಳೆಗಳಿಗೆ ಸಿಗುವ ಸಬ್ಸಿಡಿಯ ಕುರಿತಾಗಿ ಕೇಳಿದ ಪ್ರಶ್ನೆಗೆ, ಈ ಅಧಿಕಾರಿಯೂ ಹಣ್ಣಿನ ಬೆಳೆಗಳಿಗೆ 1 ಎಕರೆ ಭೂಮಿಗೆ ರೂ.10,000ದಂತೆ ಮೊದಲನೇ ವರ್ಷ ರೂ.2000 ದಂತೆ ಎರಡನೇ ವರ್ಷ ಮತ್ತು ರೂ.2000ದಂತೆ ಮೂರನೇ ವರ್ಷ ಸಬ್ಸಿಡಿಯನ್ನು ನೀಡಲಾಗುತ್ತದೆ ಎಂದು ತಿಳಿಸಿದರು. ತೋಟಗಾರಿಕೆ ಇಲಾಖೆಯ ಅಂಗಸಂಸ್ಥೆಯಾಗಿವ ಹಾಪ್‌ಕಾಮ್ಸ್‌ನ ಕುರಿತಾಗಿ

ತಿಳಿಸುತ್ತಾ ಈ ಸಂಸ್ಥೆಯು ರೈತರಿಗೆ ಮಾರುಕಟ್ಟೆಯನ್ನು ಒದಗಿಸುತ್ತದೆ. ರೈತರು ತೋಟಗಾರಿಕೆ ಇಲಾಖೆಯ ಯೋಜನೆಯಡಿಯಲ್ಲಿ ಬೆಳೆದ ಬೆಳೆಗಳಿಗೆ ಇದು ನೇರ ಮಾರುಕಟ್ಟೆಯಾಗಿರುತ್ತದೆ. ರೈತರು(hopcoms)ಹಾಪ್‌ಕಾಮ್ಸನಲ್ಲಿಯಾದರೂ ಮಾರಬಹುದು ಅಥವಾ ನೇರವಾಗಿ ಮಾರುಕಟ್ಟೆ ಯಲ್ಲಿಯಾದರೂ ಮಾರಬಹುದು ಎನ್ನುವ ವಿಷಯವನ್ನು ತಿಳಿಸಿದರು. ಸರ್ಕಾರವು ಜಿಲ್ಲಾವಾರು ತೋಟಗಾರಿಕೆ ಇಲಾಖೆಗಳಿಗೆ, ಪ್ರತಿ ವರ್ಷ ಇಂತಿಷ್ಟು ಹಣಕಾಸು ಬಿಡುಗಡೆ ಯೋಜನೆಯನ್ನು ಹೊಂದಿರುತ್ತದೆ. ಸರಕಾರವು ಹಣದ ಬಿಡುಗಡೆಯನ್ನು, ಜಿಲ್ಲಾವಾರು ತೋಟಗಾರಿಕೆ ಇಲಾಖೆಗಳ ಕಳುಹಿಸಿದ ವರದಿ(proposal)ಯ ಆಧಾರದ ಮೇಲೆ ನಿರ್ಧರಿಸುತ್ತದೆ. ಈ ಕರಡುಪ್ರತಿಯನ್ನು ಅಧಿಕಾರಿಗಳು ರೈತರ ಬೇಡಿಕೆಗಳ ಅನುಸಾರ ಪ್ರತಿ ವರ್ಷವು ಸಿದ್ಧ ಪಡಿಸಿ ಸರಕಾರಕ್ಕೆ ಸಲ್ಲಿಸು ತ್ತಾರೆ ಎನ್ನುವ ಮಾಹಿತಿಯೊಂದಿಗೆ ಇಲಾಖೆಯು ಸದಾ ರೈತಪರ ಯೋಜನೆಗಳನ್ನು ಜಾರಿಗೆ ತಂದು ಅನುಷ್ಠಾನಗೊಳಿಸುವಲ್ಲಿ ಕಾರ್ಯನಿರತರಾಗಿದ್ದೇವೆಂದು ತಿಳಿಸಿದರು.

ಕೋಷ್ಟಕ–58ರಲ್ಲಿ ಹನಿ ನೀರಾವರಿ ಯೋಜನೆಯ ಪ್ರಯೋಜನೆ ಪಡೆಯಲು ರೈತರು ಬಳಸಿಕೊಂಡ ನೀರಿನ ಮೂಲ ಯಾವುದು ಎಂದಾಗ ಸ್ವಂತ ನೀರಾವರಿ ಸೌಲಭ್ಯ ಶೇ.81.67ರಷ್ಟು ರೈತರು, ಪಕ್ಕದ ರೈತರಿಂದ ನೀರಾವರಿ ಸೌಲಭ್ಯ ಶೇ.8.33ರಷ್ಟು ರೈತರು, ಮತ್ತು ಯಾವುದೂ ಇಲ್ಲವೆಂದು ಶೇ.8.33ರಷ್ಟು ರೈತರು ಹೊಸಳ್ಳಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದರು. ಹೊನ್ನಳ್ಳಿ ಗ್ರಾಮದಲ್ಲಿ ಸ್ವಂತ ನೀರಾವರಿ ಸೌಲಭ್ಯ ಶೇ.48.33ರಷ್ಟು ರೈತರು, ಪಕ್ಕದ ರೈತರಿಂದ ನೀರಾವರಿ ಸೌಲಭ್ಯ ಶೇ.11.67 ರಷ್ಟು ರೈತರು, ಮತ್ತು ಯಾವೂದು ಇಲ್ಲವೆಂದು ಶೇ.40ರಷ್ಟು ರೈತರು ಅಭಿಪ್ರಾಯ ವ್ಯಕ್ತಪಡಿಸಿದ ಅಂಕಿ–ಅಂಶಗಳು ದೊರೆತಿವೆ. ಮುಂದಿನ ಪ್ರಶ್ನೆಯು ಎನ್.ಎಚ್.ಎಂ. ಅಡಿಯಲ್ಲಿ ನಿಖರ ಬೇಸಾಯ ಪದ್ಧತಿಯಲ್ಲಿ ಬಾಳೆ ಬೆಳೆಗೆ ಧನಸಹಾಯ ಪಡೆದಿರುತ್ತೀರಾ ಎನ್ನುವ ಪ್ರಶ್ನೆಗೆ ಹೊಸಳ್ಳಿಯಲ್ಲಿ ಹೌದು ಎಂದು ಶೇ.5ರಷ್ಟು ರೈತರು ತಮಗೆ ಯೋಜನೆಯ ಪ್ರಯೋಜನವಾಗಿದೆ ಮತ್ತು ಯೋಜನೆಯನ್ನು ಪ.ಪಂ. ಹಾಗೂ ಹಿಂದುಳಿದ ವರ್ಗದಡಿಯಲ್ಲಿ ಯೋಜನೆಯ ಸದ್ಬಳಕೆಯನ್ನು ರೈತರು ಮಾಡಿಕೊಂಡಿರುವುದಾಗಿ ಗ್ರಾಮದಲ್ಲಿ ತಿಳಿಸಿದರು.

ಮೇಲಿನ ಯೋಜನೆಯಲ್ಲಿ ಹೊನ್ನಳ್ಳಿ ಗ್ರಾಮದಲ್ಲಿ ಯಾವೊಬ್ಬ ರೈತರು ಪ್ರಯೋಜನೆಯನ್ನು ಪಡೆದುಕೊಂಡಿರುವುದಿಲ್ಲ ಎಂದು ತಮ್ಮ ಅನಿಸಿಕೆ ವ್ಯಕ್ತಪಡಿಸಿದರು. ರೈತರನ್ನು ನೀವು ಬೆಳೆದ ಉತ್ಪನ್ನಗಳನ್ನು ಹೇಗೆ ಸಂರಕ್ಷಿಸಿಡುತ್ತೀರಿ ಎಂದು ಕೇಳಿದಾಗ ಹೊನ್ನಳ್ಳಿಯ ರೈತನೊಬ್ಬ, ಇನ್ನೆಲ್ಲಿ ಮೇಡಂ ನಮ್ಮ ಮನೆಗಳಲ್ಲಿಯೇ, ಈ ಊರಿನಲ್ಲೇನಾದರೂ ಸರಕಾರ ಗೋದಾಮುಗಳನ್ನು ಕಟ್ಟಿಸಿದೆಯೇನು? ಎಂದು ನನಗೆ ಮರುಪ್ರಶ್ನೆಯನ್ನು ಹಾಕಿದರು. ಎರಡು ಗ್ರಾಮಗಳಲ್ಲಿ ನೋಡುವುದಾದರೆ, ಹೆಚ್ಚಾಗಿ ತಮ್ಮ ಮನೆಗಳಲ್ಲಿಯೇ ಸಂರಕ್ಷಿಸಿಡುತ್ತಾರೆ, ಇಲ್ಲವೇ ಆದಷ್ಟು

ಬೇಗ ಮಾರುಕಟ್ಟೆಗೆ ಹೋಗಿ ಉತ್ಪನ್ನಗಳನ್ನು ಬಂದ ಬೆಲೆಗೆ ಬರಲಿ ಎಂದು ಮಾರಾಟ ಮಾಡಿ ಬರುತ್ತಾರೆ. ಇದೇ ತೆರನಾದ ಉತ್ತರಗಳು ಹೆಚ್ಚಾಗಿ ಎರಡು ಗ್ರಾಮಗಳಲ್ಲಿಯೂ ಕಂಡುಬಂದಿವೆ.

**ಕೋಷ್ಟಕ–58**

**ತೋಟಗಾರಿಕೆ ಬೆಳೆಗಳಿಗೆ ಬಳಸಿಕೊಂಡಿರುವ ನೀರಾವರಿ ಮೂಲಗಳ ವಿವರ**

| ಕ್ರ ಸಂ. | ನೀರಿನ ಮೂಲ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಸ್ವಂತ ನೀರಾವರಿ ಸೌಲಭ್ಯ | 49 | 81.67 | 29 | 48.33 |
| 2. | ಪಕ್ಕದ ರೈತರಿಂದ ನೀರಾವರಿ ಸೌಲಭ್ಯ | 5 | 8.33 | 7 | 11.67 |
| 3. | ಯಾವುದೂ ಇಲ್ಲ | 6 | 10.00 | 24 | 40.00 |
| | ಒಟ್ಟು | 60 | 100 | 60 | 100 |
| | ಧನಸಹಾಯ ಪಡೆದಿರುತ್ತೀರಾ | | | | |
| 1. | ಹೌದು | 3 | 5.00 | 00 | 00 |
| 2. | ಇಲ್ಲ | 57 | 95.00 | 60 | 100 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

ಎ ಸ್ಟಡಿ ಆನ್ ಪ್ರೈಸ್ ಟ್ರೆಂಡ್ ಇಂಟಿಗ್ರೇಶನ್ ಆಫ್ ಹೋಲ್‌ಸೇಲ್ ಮಾರ್ಕೆಟ್ ಫಾರ್ ಆನಿಯನ್ ಇನ್ ಮೆಟ್ರೋ ಸಿಟೀಸ್ ಆಫ್ ಇಂಡಿಯಾ (2012) ಈ ಅಧ್ಯಯನದಲ್ಲಿ ಲೇಖಕರು ಕೇವಲ ಮಾರ್ಚ್ ಮತ್ತು ಏಪ್ರಿಲ್‌ನಲ್ಲಿ ಈರುಳ್ಳಿ ಬೆಳೆಯಲ್ಲಾಗುವ ವ್ಯತ್ಯಾಸಗಳನ್ನು ಮೆಟ್ರಿಕ್ ನಗರಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಅಧ್ಯಯನಕ್ಕೆ ಮುಂಬಯಿ, ಬೆಂಗಳೂರು, ಕೊಲ್ಕತ್ತಾ, ಅಹಮದಾಬಾದ್ ಮತ್ತು ದೆಹಲಿಯನ್ನು ಆಯ್ದುಕೊಂಡಿದ್ದು ಈರುಳ್ಳಿ ಬೆಲೆಯಲ್ಲಿ ತಿಂಗಳಿಗೆ ಒಂದು ಮೆಟ್ರಿಕ್‌ಗೆ ರೂ.6 ಮತ್ತು ರೂ.4 ಹೆಚ್ಚಳವಾಗಿದೆ. ಹಾಗೆಯೇ ಅಹಮದಾಬಾದ್ ಮುಂಬಯಿ, ಮತ್ತು ಕೊಲ್ಕತ್ತಾದಲ್ಲಿ ಪ್ರತಿ ಮೆಟ್ರಿಕ್ ಟನ್‌ಗೆ ರೂ. 6, ರೂ. 10 ರೂ 2/ ಮೆಟ್ರಿಕ್ ಟನ್ ಕಡಿಮೆಯಾಗಿದೆ ಎನ್ನುವ ಅಂಶವನ್ನು ತಿಳಿಸಿದ್ದಾರೆ. ಇದಕ್ಕೆ ಪೂರಕವಾದ ತೋಟಗಾರಿಕೆ ಮಾರುಕಟ್ಟೆಯ ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

ಮುಂದಿನ ಕೋಷ್ಟಕದಲ್ಲಿ-59ರಲ್ಲಿ ರೈತರನ್ನು ಬೆಳೆದ ಹುಟ್ಟುವಳಿಗಳನ್ನು ಎಲ್ಲಿ ಮಾರಾಟ ಮಾಡಿತ್ತೀರಿ, ಹೊಸಳ್ಳಿಯಲ್ಲಿ ನಮ್ಮ ಊರಿನಲ್ಲಿಯೇ ಎಂದು ಶೇ.35ರಷ್ಟು ರೈತರು, ತಾಲೂಕುವಾರು/ ಜಿಲ್ಲಾವಾರೆಂದು ಶೇ.40ರಷ್ಟು, ಅಂತರ್‌ರಾಜ್ಯಗಳಲ್ಲಿ ಎಂದು ಶೇ.25ರಷ್ಟು ಮತ್ತು ಅಂತರ್ ದೇಶಗಳಲ್ಲಿ ಯಾವೊಬ್ಬ ರೈತರು ಇರುವುದಿಲ್ಲಾ. ಹೊನ್ನಳ್ಳಿ ಗ್ರಾಮದಲ್ಲಿ ನಮ್ಮ ಊರಿನಲ್ಲಿಯೇ ಎಂದು ಶೇ.25ರಷ್ಟು ರೈತರು, ತಾಲೂಕುವಾರು/ಜಿಲಾವಾರೆಂದು ಶೇ.60ರಷ್ಟು, ಅಂತರ್‌ರಾಜ್ಯಗಳಲ್ಲಿ ಎಂದು ಶೇ.15 ರಷ್ಟು, ಮತ್ತು ಅಂತರ್‌ದೇಶಗಳಲ್ಲಿ ಈ ಹಳ್ಳಿಯ ಯಾವೊಬ್ಬ ರೈತರು ಇರುವುದಿಲ್ಲ. ಹೀಗೆ ಸಂದರ್ಶನದಲ್ಲಿ ರೈತರು ತಾವು ಬೆಳೆದ ಉತ್ಪನ್ನಗಳನ್ನು ಹೆಚ್ಚಾಗಿ ತಮ್ಮ ಊರುಗಳಲ್ಲಿಯೇ ಮಾರಾಟ ಮಾಡುತ್ತಾರೆ ಎನ್ನುವ ಉತ್ತರಗಳೇ ಬಂದಿವೆ. ಇದಕ್ಕೆ ಮೇಲಿನ ಭಾಗದಲ್ಲಿ ಕಾರಣ ಸಹಿತ ಯಾಕೆ ರೈತರು ಕೃಷಿ ಮಾರುಕಟ್ಟೆಗೆ ಹೆಚ್ಚಾಗಿ ಹೋಗುವುದಿಲ್ಲ ಎನ್ನುವುದನ್ನು ಉದಾಹರಣೆಯೊಂದಿಗೆ ಚರ್ಚಿಸಿರುದ್ದೇನೆ. ಮತ್ತು ಕೆಲವು ರೈತರ ಅಭಿಪ್ರಾಯವನ್ನು ನಮೂದಿಸಿ ರುತ್ತೇನೆ.

**ಕೋಷ್ಟಕ-59**

**ರೈತರು ತೋಟಗಾರಿಕೆ ಬೆಳೆದ ಉತ್ಪನ್ನಗಳನ್ನು ಮಾರಾಟ ಮಾಡುವುದರ ವಿವರ**

| ಕ್ರ ಸಂ. | ಉತ್ಪನ್ನಗಳ ಮಾರಾಟ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ನಮ್ಮ ಊರಿನಲ್ಲಿಯೆ | 20 | 33.33 | 15 | 25.00 |
| 2. | ತಾಲೂಕುವಾರು/ಜಿಲ್ಲಾವಾರು | 24 | 40.00 | 35 | 58.33 |
| 3. | ಅಂತರ್‌ರಾಜ್ಯಗಳಲ್ಲಿ | 15 | 25.00 | 9 | 15.00 |
| 4. | ಅಂತರ್‌ರಾಷ್ಟ್ರೀಯವಾಗಿ | 1 | 1.67 | 1 | 1.67 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ಭಾಗ-ಎರಡು**

ಮೇಲಿನ ಭಾಗದಲ್ಲಿ ತೋಟಗಾರಿಕೆ ಕೃಷಿಯೆಂದರೇನು, ತೋಟಗಾರಿಕೆ ಕೃಷಿಯ ಯೋಜನೆಗಳಾವವು, ತೋಟಗಾರಿಕೆ ಯೋಜನೆಗಳಿಂದ ರೈತರಿಗಾಗುತ್ತಿರುವ ಪ್ರಯೋಜನಗಳನ್ನು ಚರ್ಚಿಸಿದ್ದೇನೆ. ಪ್ರಸ್ತುತ ಭಾಗದಲ್ಲಿ ರೈತರು ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು

ಬಳಸುವ ಸೌಲಭ್ಯಗಳನ್ನು ಕ್ಷೇತ್ರಕಾರ್ಯದಿಂದ ಬಂದ ಮಾಹಿತಿಯೊಂದಿಗೆ ವಿಶ್ಲೇಷಿಸಲಾಗಿದೆ. ಕೋಷ್ಟಕ 60ರಲ್ಲಿ ರೈತರು ಕೃಷಿ ಉತ್ಪನ್ನಗಳನ್ನು ಮರುಕಟ್ಟೆಗೆ ಸಾಗಿಸಲು ಬಳಸುವ ವಿಧಾನಗಳಾವುವು ಎಂದಾಗ, ಹೊಸಳ್ಳಿಯಲ್ಲಿ ಸ್ವಂತ ವಾಹನವೆಂದು ಶೇ.10ರಷ್ಟು ರೈತರು, ಖಾಸಗಿ ವಾಹನವೆಂದು ಶೇ.78.33ರಷ್ಟು ರೈತರು ಮತ್ತು ಇತರೆ ವಾಹನಗಳೆಂದು ಶೇ.11.67 ರಷ್ಟು ರೈತರು ಹೇಳಿದ್ದಾರೆ. ಮುಂದಿನ ಪ್ರಶ್ನೆಯಲ್ಲಿ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಬಳಸುವ ವಾಹನಗಳು ಯಾವುವು ಎಂದಾಗ ಮೂರು ಚಕ್ರ ವಾಹನವೆಂದು ಶೇ.13.33ರಷ್ಟು ರೈತರು, ನಾಲ್ಕು ಚಕ್ರ ವಾಹನವೆಂದು ಶೇ.83.33ರಷ್ಟು ರೈತರು, ರೈಲು ಮಾರ್ಗವೆಂದು ಶೇ.3.33ರಷ್ಟು ರೈತರು, ದ್ವಿಚಕ್ರ ವಾಹನವನ್ನು ಯಾರೂ ಬಳಸುವುದಿಲ್ಲ ಯಾಕೆಂದರೆ ನಾವು ಹೆಚ್ಚಾಗಿ ಬೆಳೆಯುವ ವಾಣಿಜ್ಯ ಉತ್ಪನ್ನಗಳನ್ನು ದ್ವಿಚಕ್ರ ವಾಹನದಲ್ಲಿ ಸಾಗಿಸಲು ಸಾಧ್ಯವಿಲ್ಲ ಎನ್ನುವ ವಿವರಣೆಯನ್ನು ರೈತರು ಹೊಸಳ್ಳಿಯಲ್ಲಿ ನೀಡಿದರು. ಈ ಮೇಲಿನ ಪ್ರಶ್ನೆಗಳನ್ನೇ ಹೊನ್ನಳ್ಳಿ ಗ್ರಾಮದಲ್ಲಿ ಕೇಳಿದಾಗ ಈ ಕೆಳಗಿನಂತೆ ಅಂಕಿ-ಅಂಶಗಳಿವೆ ಸ್ವಂತ ವಾಹನವೆಂದು ಶೇ.16.67ರಷ್ಟು ರೈತರು, ಖಾಸಗಿ ವಾಹನವೆಂದು ಶೇ.81.66ರಷ್ಟು ರೈತರು, ಮತ್ತು ಇತರೆ ವಾಹನಗಳೆಂದು ಶೇ.1.67ರಷ್ಟು ರೈತರು ಹೇಳಿದ್ದಾರೆ.

**ಕೋಷ್ಟಕ–60**

**ಉತ್ಪನ್ನಗಳನ್ನು ಸಾಗಿಸಲು ರೈತರು ಬಳಸುವ ವಾಹನಗಳ ವಿವರ**

| ಕ್ರ. ಸಂ. | ವಾಹನಗಳ ಬಳಕೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಸ್ವಂತ ವಾಹನ | 06 | 10.00 | 10 | 16.67 |
| 2 | ಖಾಸಗಿ ವಾಹನ | 47 | 78.33 | 49 | 81.67 |
| 3 | ಇತರೆ | 07 | 11.67 | 01 | 1.66 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಮೇಲಿನ ಕೋಷ್ಟಕಕ್ಕೆ ಪೂರಕವಾದ ಮುಂದಿನ ಪ್ರಶ್ನೆಯಲ್ಲಿ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಬಳಸುವ ವಾಹನಗಳು ಯಾವುವು ಎಂದಾಗ ಕೋಷ್ಟಕ–61ರಲ್ಲಿ ದ್ವಿಚಕ್ರ ವಾಹನವೆಂದು ಶೇ.18.33ರಷ್ಟು ರೈತರು, ಮೂರು ಚಕ್ರ ವಾಹನವೆಂದು ಶೇ.13.33ರಷ್ಟು

ರೈತರು, ನಾಲ್ಕು ಚಕ್ರ ವಾಹನವೆಂದು ಶೇ.63.33ರಷ್ಟು ರೈತರು ಮತ್ತು ರೈಲು ಮಾರ್ಗವನ್ನು ಯಾವ ರೈತರು ಬಳಸುತ್ತಿಲ್ಲ ಎನ್ನುವ ವಿಚಾರವು ಸಂದರ್ಶನದಲ್ಲಿ ಬೆಳಕಿಗೆ ಬಂದಿದೆ. ಇಲ್ಲಿ ಬಂದ ಅಂಕಿ-ಅಂಶಗಳು, ಸಂದರ್ಶನದ ಸಮಯದಲ್ಲಿ ರೈತರು ತಮ್ಮದೇ ಆದ ಅನಿಸಿಕೆಯನ್ನು ಈ ರೀತಿಯಾಗಿ ತಿಳಿಸಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ರೈತರು ಹೆಚ್ಚಾಗಿ ಹೂ ಮತ್ತು ತರಕಾರಿಗಳನ್ನು ಬೆಳೆಯುತ್ತಿದ್ದು ಈ ಗ್ರಾಮವು ನಗರ ಮಾರುಕಟ್ಟೆಗೆ ಅಂದರೆ ಬಳ್ಳಾರಿ ಕೃಷಿ ಮಾರುಕಟ್ಟೆಗೆ ತುಂಬಾ ಹತ್ತಿರವಾಗಿರುವುದರಿಂದ ನಾವು ಬೆಳೆದ ಉತ್ಪನ್ನಗಳನ್ನು ಅಂದಿನ ದಿನವೆ ನಮ್ಮ ಸ್ವಂತ ವಾಹನಗಳಲ್ಲಿ(ವಾಹನ ಇದ್ದವರು) ಇಲವೇ ಖಾಸಗಿ ವಾಹನಗಳಲ್ಲಿ ಮಾರುಕಟ್ಟೆಗೆ ಹೋಗಿ ಮಾರಾಟ ಮಾಡುವುದಾಗಿ ರೈತರು ಹೇಳಿಕೊಂಡಿದ್ದಾರೆ.

ಕೋಷ್ಟಕ-61ರಲ್ಲಿ ಮಾರುಕಟ್ಟೆಗೆ ಉತ್ಪನ್ನಗಳನ್ನು ಸಾಗಿಸಲು ಇರುವ ದೂರವೆಷ್ಟು ಮತ್ತು ಒಂದು ವೇಳೆ ಉತ್ಪನ್ನಗಳನ್ನು ರೈಲಿನಲ್ಲಿ ಸಾಗಿಸುವುದಾದರೆ, ರೈಲ್ವೇ ನಿಲ್ದಾಣಕ್ಕೂ ಇರುವ ದೂರವೆಷ್ಟು ಎಂದಾಗ ಹೊಸಳ್ಳಿ ಗ್ರಾಮದಲ್ಲಿ 0–10 ಕಿ.ಮೀ ಎಂದು ಶೇ8.33ರಷ್ಟು ರೈತರು, 10–20 ಕಿ.ಮೀ ಎಂದು ಶೇ.41.67ರಷ್ಟು ರೈತರು, 30 ಕಿ.ಮೀ.ಗಿಂತ ಜಾಸ್ತಿ ಎಂದು ಶೇ.50ರಷ್ಟು ರೈತರು ಹೇಳಿದರೆ, ರೈಲ್ವೆ ನಿಲ್ದಾಣಕ್ಕೆ ಇರುವ ದೂರವು 10–20 ಕಿ.ಮೀ.ನಷ್ಟು ಎಂದು ಶೇ.50ರಷ್ಟು ರೈತರು ಹಾಗೂ 20 ಕಿ.ಮೀ.ಗಿಂತ ಜಾಸ್ತಿ ಎಂದು ಶೇ.50ರಷ್ಟು ರೈತರು ಸಂಡೂರಿನ ಹೊಸಳ್ಳಿ ಗ್ರಾಮದಲ್ಲಿ ತಿಳಿಸಿದ್ದಾರೆ, ಇದೇ ಪ್ರಶ್ನೆಯನ್ನು ಬಳ್ಳಾರಿ ತಾಲೂಕಿನ ಹೊನ್ನಳ್ಳಿಯಲ್ಲಿ ರೈತರಿಗೆ ಕೇಳಿದಾಗ ಈ ಕೆಳಗಿನಂತೆ ಉತ್ತರವು ದೊರೆತಿದೆ. 0–10 ಕಿ.ಮೀ ಎಂದು ಶೇ.18.33ರಷ್ಟು ರೈತರು, 10–20 ಕಿ.ಮೀ ಎಂದು ಶೇ.13.33ರಷ್ಟು ರೈತರು ಹಾಗೂ 30 ಕಿ.ಮೀ.ಗಿಂತ ಜಾಸ್ತಿ ಎಂದು ಶೇ.68.33ರಷ್ಟು ರೈತರು ಹೇಳಿದರೆ, ರೈಲ್ವೇ ನಿಲ್ದಾಣಕ್ಕೆ ಇರುವ ದೂರವೂ 10–20 ಕಿ.ಮೀ.ನಷ್ಟು ಎಂದು ಎಲ್ಲ ಶೇ.100ರಷ್ಟು ರೈತರು, ತಮಗಿರುವ ಸಾರಿಗೆ ಅನುಕೂಲದ ಕುರಿತು ಮಾತನಾಡಿದ್ದಾರೆ.

ಕೋಷ್ಟಕ-61

ರೈತರು ಉತ್ಪನ್ನಗಳನ್ನು ಸಾಗಿಸಲು ಬಳಸುವ ವಾಹನಗಳ ವಿಧಗಳ ವಿವರ

| ಕ್ರ ಸಂ. | ವಾಹನಗಳ ವಿಧಗಳು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ದ್ವಿಚಕ್ರ ವಾಹನ | 00 | 00 | 11 | 18.33 |
| 2. | ಮೂರುಚಕ್ರ ವಾಹನ | 08 | 13.33 | 08 | 13.33 |
| 3. | ನಾಲ್ಕುಚಕ್ರ ವಾಹನ | 50 | 83.33 | 38 | 63.33 |
| 4. | ರೈಲುಮಾರ್ಗ | 02 | 3.33 | 00 | 00 |
| | ಒಟ್ಟು | 60 | 100 | 60 | 100 |
| | ಮಾರುಕಟ್ಟೆಗೆ ಇರುವ ದೂರವೆಷ್ಟು | | | | |
| 1. | 0–10ಕಿಮಿ | 5 | 8.33 | 11 | 18.33 |
| 2. | 10–20ಕಿಮಿ | 25 | 41.67 | 8 | 13.33 |
| 3. | 30ಕ್ಕಿಂತ ಹೆಚ್ಚು | 30 | 50.00 | 38 | 68.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೆಳಗಿನ ಕೋಷ್ಟಕ-62ರಲ್ಲಿ ಕೃಷಿ ಉತ್ಪನ್ನಗಳನ್ನು ನೇರವಾಗಿ ಮಾರುಕಟ್ಟೆಗೆ ಸಾಗಿಸಲು ಬಳಸುವ ರಸ್ತೆ ಮಾರ್ಗ ಯಾವುದು ಮತ್ತು ಉತ್ಪನ್ನಗಳನ್ನು ಸಾಗಿಸುವ ಮಾರ್ಗ ಸುಸಜ್ಜಿತ ವಾಗಿದೆಯೇ ಎಂದು ಆಯ್ದ ಕ್ಷೇತ್ರಗಳಲ್ಲಿ ರೈತರನ್ನು ಕೇಳಿದಾಗ, ಕಚ್ಚಾರಸ್ತೆ/ ಕಾಡುದಾರಿ ಎಂದು ಶೇ.3.33, ಡಾಂಬರೂ ರಸ್ತೆ ಎಂದು ಶೇ.76.67 ಮತ್ತು ರಾಷ್ಟ್ರೀಯ ಹೆದ್ದಾರಿ ಎಂದು ಶೇ.20ರಷ್ಟು ರೈತರು ಹೊಸಹಳ್ಳಿಯಲ್ಲಿ ಹೇಳಿದರೆ, ರಸ್ತೆ ಸುಸಜ್ಜಿತವಾಗಿದೆಯೇ ಎನ್ನುವುದಕ್ಕೆ, ಶೇ.75ರಷ್ಟು ರೈತರು ಹೌದು, ಎಂದು ಶೇ.25ರಷ್ಟು ರೈತರು ಇಲ್ಲ ಎನ್ನುವ ಹೇಳಿಕೆಗಳನ್ನು ನೀಡಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿ ಕಚ್ಚಾರಸ್ತೆ/ ಕಾಡುದಾರಿ ಎಂದು ಯಾರು ಹೇಳಿರುವುದಿಲ್ಲ. ಡಾಂಬರು ರಸ್ತೆ ಎಂದು ಶೇ.38.33 ಮತ್ತು ರಾಷ್ಟ್ರೀಯ ಹೆದ್ದಾರಿ ಎಂದು ಶೇ.61.67ರಷ್ಟು ರೈತರು ಹೇಳಿದರೆ, ರಸ್ತೆ ಸುಸಜ್ಜಿತವಾಗಿದೆಯೇ ಎನ್ನುವುದಕ್ಕೆ ಶೇ.83.33 ರಷ್ಟು ರೈತರು ಹೌದು ಎಂದು, ಶೇ.11.67ರಷ್ಟು ರೈತರು ಸುಸಜ್ಜಿತವಾಗಿಲ್ಲ ಎನ್ನುವ ಸಂಗತಿಯನ್ನು ತಿಳಿಸಿದ್ದಾರೆ. ಎಷ್ಟೋ ಹಳ್ಳಿಗಳಲ್ಲಿ ಇಂದಿಗೂ ಸರಿಯಾದ ರಸ್ತೆ ವ್ಯವಸ್ಥೆ ಇರುವುದಿಲ್ಲ.

## ಕೋಷ್ಟಕ-62

### ಉತ್ಪನ್ನಗಳನ್ನು ಸಾಗಿಸಲು ರೈತರು ಬಳಸುವ ರಸ್ತೆಗಳ ವಿವರ

| ಕ್ರ ಸಂ. | ರಸ್ತೆಯ ವಿಧ ಪ್ರಯೋಜನೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಕಚ್ಚಾರಸ್ತೆ/ಕಾಡುದಾರಿ | 2 | 3.33 | 00 | 00 |
| 2. | ಡಾಂಬರು ರಸ್ತೆ | 46 | 76.67 | 23 | 38.33 |
| 3. | ರಾಷ್ಟ್ರೀಯ ಹೆದ್ದಾರಿ | 12 | 20.00 | 37 | 61.67 |
| | ಒಟ್ಟು | 60 | 100 | 60 | 100 |
| | ಸಾರಿಗೆ ವ್ಯವಸ್ಥೆ | | | | |
| 1. | ಸುಸಜ್ಜಿತವಾಗಿದೆ | 45 | 75.00 | 53 | 83.33 |
| 2. | ಸುಸಜ್ಜಿತವಾಗಿಲ್ಲ | 15 | 25.00 | 07 | 11.67 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರ \ಕಾರ್ಯದ ಮೂಲಕ

ಎರಡನೆ ಭಾಗದ ಕೋಷ್ಟಕಗಳಲ್ಲಿ ಕೃಷಿ ಸಾಲದ ಮೂಲಗಳು ಮತ್ತು ಬೆಳೆ ನಷ್ಟವಾಗಿರುವ ನೀತಿ ನಿಯಮಗಳ ವಿವರವನ್ನು ವಿಶ್ಲೇಷಿಸಲಾಗಿದೆ. ರೈತರು ಕೃಷಿಯಲ್ಲಿ ವಿವಿಧ ರೀತಿಯ ಖರ್ಚುಗಳನ್ನು ಭರಿಸಬೇಕಾಗುತ್ತದೆ. ಅಂದರೆ ಬೀಜ, ಗೊಬ್ಬರ, ಕ್ರಿಮಿನಾಶಕ, ಹೊಲದಲ್ಲಿ ಕಳೆ ಕೀಳಿಸುವುದು, ಬೆಳೆದ ಉತ್ಪನ್ನಗಳ ಕಟಾವು ಮಾಡುವುದು, ಹುಟ್ಟುವಳಿಗಳನ್ನು ಸ್ವಚ್ಛಗೊಳಿಸುವುದು, ಬೆಳೆದ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸುವುದು ಹೀಗೆ ಪ್ರತಿ ಹಂತದಲ್ಲಿಯೂ ರೈತರು ಹಣವನ್ನು ವ್ಯಯಿಸಬೇಕಾಗುತ್ತದೆ. ಅದಕ್ಕಾಗಿ ಕೆಲವರು ಸ್ವಂತ ಬಂಡವಾಳವನ್ನು ಕೃಷಿಯ ಮೇಲೆ ಹೂಡುತ್ತಾರೆ. ಇನ್ನು ಕೆಲವರೂ ತಮಗೆ ಬೇಕಾದವರ(ನೆಂಟರು, ಸ್ನೇಹಿತರ) ಹತ್ತಿರ ಸಾಲ ಪಡೆದು ಕೃಷಿಯಲ್ಲಿ ಹಣವನ್ನು ತೊಡಗಿಸುತ್ತಾರೆ. ಮತ್ತೆ ಕೆಲವು ರೈತರು ಬ್ಯಾಂಕ್‌ಗಳಲ್ಲಿ ಹಣವನ್ನು ಸಾಲ ತೆಗೆದು ವ್ಯವಸಾಯ ಮಾಡುತ್ತಾರೆ. ಒಟ್ಟಾರೆ ರೈತರು ಕೃಷಿಯಲ್ಲಿ ಹಣವನ್ನು ಹೂಡುತ್ತಾರೆ. ತಮ್ಮನ್ನು ಕೃಷಿ ಕೆಲಸದಲ್ಲಿ ನಿರಂತರವಾಗಿ ತೊಡಗಿಸಿಕೊಂಡಿರುತ್ತಾರೆ. ನಿರಂತರವಾಗಿ ಕೃಷಿಯಲ್ಲಿ ಕೆಲಸ ಮಾಡಿ ಉತ್ಪನ್ನಗಳನ್ನು ಉತ್ಪಾದಿಸಿ ಮಾರುಕಟ್ಟೆಗೆ ಹೋಗಿ ಮಾರಾಟ ಮಾಡಿ, ಹಣವನ್ನು ಗಳಿಸುತ್ತಾರೆ. ಇದು ಕೃಷಿಯನ್ನು ಮಾಡುವ ಪದ್ಧತಿಯಾದರೆ, ಇದರ ಮಧ್ಯ ರೈತರು ಹಣವನ್ನು ಗಳಿಸಲೂಬಹುದು, ಗಳಿಸದೆ ಇರಬಹುದು. ಅಂದರೆ ಉತ್ಪನ್ನಗಳನ್ನು

ಮಾರುಕಟ್ಟೆಯಲ್ಲಿ ಮಾರಾಟ ಮಾಡಿದಾಗ ತಾವು ಕೃಷಿಗಾಗಿ ಹಾಕಿದ ಬಂಡವಾಳದಷ್ಟು, ಉತ್ಪನ್ನಗಳ ಮೇಲೆ ಮಾರುಕಟ್ಟೆಯಲ್ಲಿ ಬೆಲೆ ದೊರಕದೆ ಹೋಗಬಹುದು. ಹೀಗೆ ರೈತರು ಮಳೆಯೊಂದಿಗೆ ಆಡುವ ಜೂಜಾಟವಷ್ಟೇ ಅಲ್ಲದೆ, ಮಾರುಕಟ್ಟೆಯಲ್ಲಿ ಹುಟ್ಟುವಳಿಗಳಿಗೆ ಬೆಲೆ ಸಿಗದೆ ಪರದಾಟ ಎನ್ನುವಂತಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇಲ್ಲಿ ಒಬ್ಬ ತಜ್ಞರ ಅಭಿಪ್ರಾಯವನ್ನು ಸ್ಮರಿಸಿಕೊಳ್ಳಬೇಕು.

ದಿನಾಂಕ 26/05/13ರಂದು ಬಿಜಾಪುರದಲ್ಲಿಯ ಕೃಷಿ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪ್ರೊ.ಅರ್.ಸುನಂದಮ್ಮ ಅವರನ್ನು ಸಂದರ್ಶಿಸಿದಾಗ, ಅವರು ರೈತರು ಬೆಳೆದ ಬೆಳೆಗಳಿಗೆ ತಕ್ಕ ಬೆಲೆಗಳನ್ನು ಪಡೆಯುತ್ತಿಲ್ಲ ಎನ್ನುವುದನ್ನು ಉದಾಹರಣೆ ಮೂಲಕ ಅರ್ಥೈಸಿದರು(ಏಕೆಂದರೆ ನಾನು ಮೂಲತಃ ಕೃಷಿ ಮಹಿಳೆ ಎಂದು ತಿಳಿಸುತ್ತಾ). ಉದಾಹರಣೆಗೆ ಒಂದು ಕಂಪನಿಯು ಒಂದು ವಸ್ತುವನ್ನು ಉತ್ಪಾದಿಸಿದಾಗ ಮಾರುಕಟ್ಟೆಗೆ ಬಿಡುವ ಮುನ್ನ ಉತ್ಪಾದಕರೇ ಅ ವಸ್ತುವಿನ ಬೆಲೆಯನ್ನು ನಿರ್ಧರಿಸುತ್ತಾರೆ. ಆದರೆ ರೈತರು ಬೆಳೆದ ಬೆಳೆಗಳಿಗೆ ಅವರೇ ಉತ್ಪಾದಕರಾಗಿದ್ದು, ಅದರ ಸಾಧಕ ಬಾಧಕಗಳನ್ನು ಬಲ್ಲವರಾಗಿದ್ದರೂ ಮೂಕಪ್ರೇಕ್ಷಕರಂತೆ ಮಾರುಕಟ್ಟೆಯಲ್ಲಿರುವ ದಲ್ಲಾಳಿಗಳು, ಏಜೆಂಟರು, ರೈತರು ಬೆಳೆದ ಬೆಳೆಗಳಿಗೆ ಬೆಲೆಯನ್ನು ನಿರ್ಧರಿಸುತ್ತಾರೆ ಅರ್.ಸುನಂದಮ್ಮ ಅವರು, ಕಮರ್ಶಿಯಲ್ ಪ್ರೊಡಕ್ಟ್‌ನಲ್ಲಿ ಬೆಲೆಯನ್ನು ನಿರ್ಧರಿಸುವಾಗ ಉತ್ಪಾದಕರು ಎಲ್ಲ ರೀತಿಯ ಖರ್ಚುಗಳನ್ನು, ಅಂದರೆ ಕಚ್ಚಾವಸ್ತುಗಳನ್ನು ಕೊಂಡುಕೊಳ್ಳುವಲ್ಲಿಂದ ಹಿಡಿದು ಉತ್ಪನ್ನವನ್ನು ಮಾರುಕಟ್ಟೆಗೆ ತರುವ ವರೆಗೆ ತಗಲುವ ಖರ್ಚುವೆಚ್ಚಗಳ ಸಹಿತ ದರಗಳನ್ನು ನಿಗದಿಪಡಿಸುತ್ತಾರೆ. ಆದರೆ ಈ ರೀತಿಯ ವ್ಯವಸ್ಥೆಯನ್ನು ನಾವು ಕೃಷಿ ಉತ್ಪನ್ನಗಳ ಬೆಲೆ ನಿರ್ಧರಿಸುವಲ್ಲಿ, ಕೃಷಿ ಮಾರುಕಟ್ಟೆಯಲ್ಲಿ ಕಾಣುತ್ತಿಲ್ಲ.

ಇಂತಹ ಮೇಲಿನ ಎಲ್ಲ ವ್ಯವಸ್ಥೆಯಿಂದ ರೈತರು ಮನನೊಂದು ಹೇಡಿಗಳಂತೆ ಆತ್ಮಹತ್ಯೆ ಗೊಳಗಾಗದೆ ಬೇಸಿಗೆಯ ದಿನಗಳಲ್ಲಿ ಕಡುಬಿಸಿಲಿಗೆ ಬೇವಿನ ಮರವು ಚಿಗುರೊಡೆದು ಶಾಂತಿಯ ನೆರಳನ್ನು ನೀಡುವಂತೆ ರೈತರು ಮಾರುಕಟ್ಟೆಯ ಅವ್ಯವಸ್ಥೆಯ ರೀತಿಗೆ ಎದೆಗುಂದದೆ ಪ್ರಾಮಾಣಿಕತೆ ಯಿಂದ ಫಲಾಪೇಕ್ಷೆ ನಿರೀಕ್ಷಿಸದೆ ಕೃಷಿಯಲ್ಲಿ ತೊಡಗಿ ಸಾವಿರಾರು ಜನರಿಗೆ ಆಹಾರ ದಾಹವನ್ನು ನೀಗಿಸುವ ದೈಹಿಕ ಶಕ್ತಿಯನ್ನು ಕೊಡುವ ಬೆಳೆಗಳನ್ನು ಬೆಳೆಯುವುದರಲ್ಲಿ ಅನ್ನದಾತರಿಗೆ ನೆರಳನ್ನು ನೀಡಬೇಕು. ಈ ಪ್ರಸ್ತುತ ವಿಚಾರದಲ್ಲಿ, ಅಧ್ಯಯನಕ್ಕೆ ಒದಗುವ ಮುಖ್ಯ ಅಂಶವೆಂದರೆ, ರೈತರು ಬೆಳೆದ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ, ಕೇವಲ ಉತ್ಪನ್ನಗಳ ಆಧಾರದ ಮೇಲೆ ಬೆಲೆ

ನಿರ್ಧಾರವಾಗುತ್ತದೆ ಹೊರತು, ಉತ್ಪನ್ನಗಳನ್ನು ಬೆಳೆಯಲು ತಗಲುವ ಖರ್ಚುವೆಚ್ಚಗಳ ಪರಿಗಣಿಸಲಾಗಿರುವುದಿಲ್ಲ.

ಕೆಳಗಿನ ಕೋಷ್ಟಕ-63ರಲ್ಲಿ ಕೃಷಿಗಾಗಿ ಯಾವ ಮೂಲಗಳಿಂದ ಸಾಲವನ್ನು ಪಡೆದಿರುತ್ತೀರಿ ಎಂದರೆ ಹೊಸಹಳ್ಳಿ ಗ್ರಾಮದ ರೈತರು ಶೇ.91.67ರಷ್ಟು ಬ್ಯಾಂಕ್‌ಗಳಲ್ಲಿ, ಇತರೆ ಶೇ.8.33 ರಷ್ಟು ರೈತರು ಸಾಲ ಪಡೆದಿರುತ್ತಾರೆ ಹಾಗೂ ಸ್ಥಳೀಯ ಲೇವಾದೇವಿಗಾರರಲ್ಲಿ ಯಾವುದೇ ರೈತರು ಸಾಲ ಪಡೆದಿರುವುದಿಲ್ಲ. ಬ್ಯಾಂಕ್‌ಗಳಿಂದ ಸಾಲ ಪಡೆದಿದ್ದರೆ ಯಾವ ಬ್ಯಾಂಕ್‌ಗಳಿಂದ ಪಡೆದಿದ್ದೀರಿ ಎನ್ನುವ ಪ್ರಶ್ನೆಗೆ ರಾಷ್ಟ್ರೀಕೃತ ಬ್ಯಾಂಕ್ ಎಂದು ಶೇ.8.33ರಷ್ಟು, ರಾಜ್ಯ ಬ್ಯಾಂಕ್‌ಗಳೆಂದು ಶೇ.83.33ರಷ್ಟು ಮತ್ತು ಸ್ಥಳೀಯ ಬ್ಯಾಂಕ್‌ಗಳಿಂದ ಶೇ.8.33ರಷ್ಟು ರೈತರು ಸಾಲವನ್ನು ಪಡೆದಿರುತ್ತಾರೆ. ಬ್ಯಾಂಕ್‌ಗಳಿಂದ ಕೃಷಿ ಸಾಲ ಪಡೆದಿದ್ದರೆ ಸಾಲದ ಮೇಲೆ ಬಡ್ಡಿ ಇದೆಯೇ ಮತ್ತು ಸಾಲವನ್ನು ಯಾವುದಕ್ಕಾಗಿ ಎಂದಾಗ ಶೇ.86.67ರಷ್ಟು ರೈತರು ಬಡ್ಡಿ ಸಹಿತ, ಮತ್ತು ಶೇ.13.33ರಷ್ಟು ರೈತರು ಬಡ್ಡಿ ರಹಿತ ಸಾಲವನ್ನು ನೇರ ಕೃಷಿಗಾಗಿ ಶೇ.75ರಷ್ಟು ರೈತರು ಮತ್ತು ಇತರೆ ಕೃಷಿ ಚಟುವಟಿಕೆಗಳಿಗೆ, ಶೇ.25ರಷ್ಟು ರೈತರು ಸಾಲವನ್ನು ತೆಗೆದುಕೊಂಡರೆ, ಸಣ್ಣ ಮತ್ತು ಗುಡಿ ಕೈಗಾರಿಕೆಗೆ ಹಾಗೂ ಕೃಷಿ ಚಟುವಟಿಕೆಗಳಿಗೆ ಹೊಸಹಳ್ಳಿ ಗ್ರಾಮದಲ್ಲಿ ಯಾವುದೇ ರೈತರು ಸಾಲವನ್ನು ತೆಗೆದುಕೊಂಡಿರುವುದಿಲ್ಲ. ಹಾಗೆಯೇ ಕೋಷ್ಟಕ 65ರಲ್ಲಿ ಬ್ಯಾಂಕ್‌ನಲ್ಲಿ ಸಾಲ ತೆಗೆದುಕೊಂಡಿದ್ದರೆ ಕೃಷಿಸಾಲದ ಮೇಲೆ ಬಡ್ಡಿ ಎಷ್ಟು ಎನ್ನುವ ಸಂಗತಿಗೆ ಶೇ.91.67 ರಷ್ಟು ರೈತರು 0–5% ಎಂದು, ಶೇ.3.33ರಷ್ಟು ರೈತರು 5–10% ಎಂದು, ಶೇ.5ರಷ್ಟು ರೈತರು 10–15% ಎಂದು, 15%ಕ್ಕಿಂತ ಹೆಚ್ಚಿನ ಬಡ್ಡಿಗೆ ಯಾವುದೇ ರೈತರು ಸಾಲವನ್ನು ಸಂಡೂರಿನ ಹೊಸಹಳ್ಳಿಯಲ್ಲಿ ತೆಗೆದುಕೊಂಡಿಲ್ಲ ಎನ್ನುವ ಅಂಕಿ–ಅಂಶಗಳು ದೊರೆತಿರುತ್ತವೆ.

ಹಾಗೆಯೇ ಕೋಷ್ಟಕ-63ರಲ್ಲಿ ಮೇಲಿನ ಎಲ್ಲ ಪ್ರಶ್ನೆಗಳಿಗೆ ಬಳ್ಳಾರಿ ತಾಲೂಕಿನ ಹೊನ್ನಳ್ಳಿ ಗ್ರಾಮದಲ್ಲಿನ ರೈತರನ್ನು ಕೇಳಿದಾಗ ಈ ಕೆಳಗಿನಂತೆ ಅಂಕಿ–ಅಂಶಗಳು ದೊರೆತಿವೆ. ಕೃಷಿಗಾಗಿ ಯಾವ ಮೂಲಗಳಿಂದ ಸಾಲವನ್ನು ಪಡೆದಿರುತ್ತೀರಿ ಎಂದಾಗ ಗ್ರಾಮದ ರೈತರು ಶೇ.83.33 ರಷ್ಟು ಬ್ಯಾಂಕ್‌ಗಳಲ್ಲಿ, ಶೇ.8.33ರಷ್ಟು ಸ್ಥಳೀಯ ಲೇವಾದೇವಿಗಾರರಲ್ಲಿ ರೈತರು ಸಾಲ ಪಡೆದಿರುತ್ತಾರೆ. ಇತರೆ ಶೇ.8.33ರಷ್ಟು ರೈತರು ಸಾಲವನ್ನು ಕೃಷಿಗಾಗಿ ತೆಗೆದುಕೊಂಡಿರುತ್ತಾರೆ. ಮೇಲಿನ ಪ್ರಶ್ನೆಗೆ ಪೂರಕವಾದ ಮಾಹಿತಿಗಾಗಿ ರೈತರನ್ನು ಬ್ಯಾಂಕುಗಳ ಕುರಿತು ಈ ರೀತಿಯಾಗಿ ಪ್ರಶ್ನಿಸಲಾಯಿತು. ಬ್ಯಾಂಕ್‌ಗಳಿಂದ ಸಾಲ ಪಡೆದಿದ್ದರೆ ಯಾವ ಬ್ಯಾಂಕ್‌ಗಳಿಂದ ಪಡೆದಿದ್ದೀರಿ ಎಂದಾಗ ರಾಷ್ಟ್ರೀಕೃತ ಬ್ಯಾಂಕ್ ಎಂದು ಶೇ.11.67ರಷ್ಟು, ರಾಜ್ಯ ಬ್ಯಾಂಕ್‌ಗಳೆಂದು ಶೇ.58.33ರಷ್ಟು ಮತ್ತು ಸ್ಥಳೀಯ

ಬ್ಯಾಂಕ್‌ಗಳಿಂದ ಶೇ.30ರಷ್ಟು ರೈತರು ಸಾಲವನ್ನು ಪಡೆದುಕೊಂಡಿದ್ದಾರೆ. ಬ್ಯಾಂಕ್‌ಗಳಿಂದ ಕೃಷಿ ಸಾಲ ಪಡೆದಿದ್ದರೆ ಸಾಲದ ಮೇಲೆ ಬಡ್ಡಿ ಇದೆಯೇ ಮತ್ತು ಸಾಲವನ್ನು ಯಾವುದಕ್ಕಾಗಿ ಎಂದಾಗ ಶೇ.83.33ರಷ್ಟು ರೈತರು ಬಡ್ಡಿ ಸಹಿತ, ಮತ್ತು ಶೇ.16.67ರಷ್ಟು ರೈತರು ಬಡ್ಡಿ ರಹಿತ ಸಾಲವನ್ನು ನೇರ ಕೃಷಿಗಾಗಿ ಶೇ.91.67ರಷ್ಟು ರೈತರು ಮತ್ತು ಇತರೆ ಕೃಷಿ ಚಟುವಟಿಕೆಗಳಿಗೆ ಶೇ.8.33ರಷ್ಟು ರೈತರು ಸಾಲವನ್ನು ತೆಗೆದುಕೊಂಡರೆ, ಸಣ್ಣ ಮತ್ತು ಗುಡಿ ಕೈಗಾರಿಕೆಗೆ, ಹಾಗೂ ಕೃಷಿ ಚಟುವಟಿಕೆಗಳಿಗೆ ಹೊನ್ನಹಳ್ಳಿ ಗ್ರಾಮದಲ್ಲಿ ಯಾವೂದೇ ರೈತರು ಸಾಲವನ್ನು ತೆಗುದುಕೊಂಡಿ ರುವುದಿಲ್ಲ ಎನ್ನುವ ಸಂಗತಿ ಬೆಳಕಿಗೆ ಬಂದಿದೆ. ಇನ್ನು ಬ್ಯಾಂಕ್‌ನಲ್ಲಿ ಸಾಲ ತೆಗೆದುಕೊಂಡಿದ್ದರೆ ಕೃಷಿ ಸಾಲದ ಮೇಲೆ ಬಡ್ಡಿ ಎಷ್ಟು ಎನ್ನುವ ಸಂಗತಿಗೆ ಶೇ.75ರಷ್ಟು ರೈತರು 0–5% ಎಂದು, ಶೇ.5ರಷ್ಟು ರೈತರು 5–10% ಎಂದು, ಶೇ.16.67ರಷ್ಟು ರೈತರು 10–15% ಎಂದು, ಶೇ.3.33 ರಷ್ಟು ರೈತರು 15%ಕ್ಕಿಂತ ಹೆಚ್ಚಿನ ಬಡ್ಡಿಗೆ ಸಾಲವನ್ನು ಹೊನ್ನಳ್ಳಿಯಲ್ಲಿ ತೆಗೆದುಕೊಂಡಿರುತ್ತಾರೆ.

**ಕೋಷ್ಟಕ–63**

**ರೈತರು ಕೃಷಿಗಾಗಿ ತೆಗೆದುಕೊಂಡ ಸಾಲದ ವಿವರ**

| ಕ್ರ. ಸಂ. | ಸಾಲದ ಮೂಲಗಳು | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1 | ಬ್ಯಾಂಕ್ | 55 | 91.67 | 50 | 83.33 |
| 2 | ಸ್ಥಳೀಯ ಲೇವಾದೇವಿಗಾರರು | 00 | 00 | 05 | 08.33 |
| 3 | ಇತರೆ | 05 | 08.33 | 05 | 08.33 |
| | ಒಟ್ಟು | 60 | 100 | 60 | 100 |
| | ಸಾಲದ ಬಡ್ಡಿ | | | | |
| 1 | 0–5%. | 55 | 91.67 | 45 | 75.00 |
| 2 | 5–10% | 2 | 3.33 | 3 | 05.00 |
| 3 | 10–15% | 3 | 05.00 | 10 | 16.67 |
| 4 | 15%ಕ್ಕಿಂತ ಹೆಚ್ಚು | 00 | 00 | 2 | 3.33 |
| | ಒಟ್ಟು | 60 | 100 | 60 | 100 |
| | ಸಾಲದ ಕಾರಣ | | | | |

| | | | | | |
|---|---|---|---|---|---|
| 1. | ನೇರವಾಗಿ ಕೃಷಿಗಾಗಿ | 45 | 75.00 | 55 | 91.67 |
| 2. | ಇತರೆ ಕೃಷಿ ಚಟುವಟಿಕೆ ಗಳಿಗೆ | 15 | 25.00 | 05 | 8.33 |
| 3. | ಸಣ್ಣ ಮತ್ತು ಗುಡಿ ಕೈಗಾರಿಕೆಗಾಗಿ | 00 | 00 | 00 | 00 |
| 4 | ಕೃಷಿಯೇತರ ಚಟುವಟಿಕೆ ಗಳಿಗಾಗಿ. | 00 | 00 | 00 | 00 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಕೋಷ್ಟಕ–64ರಲ್ಲಿ ಎಷ್ಟು ಕೃಷಿ ಸಾಲವನ್ನು ತೆಗೆದುಕೊಂಡಿರುತ್ತೀರಿ ಎಂದಾಗ, ಹೊಸಹಳ್ಳಿಯಲ್ಲಿ ಶೇ.58.33ರಷ್ಟು ರೈತರು 0–3 ಲಕ್ಷವೆಂದು, ಶೇ.33.33ರಷ್ಟು ರೈತರು 3–6 ಲಕ್ಷವೆಂದು ಶೇ.83.3ರಷ್ಟು ರೈತರು 6–9ಲಕ್ಷವೆಂದು, 9 ಲಕ್ಷಕ್ಕಿಂತ ಹೆಚ್ಚಿನ ಸಾಲವನ್ನು ಯಾರೂ ಪಡೆದಿಲ್ಲ. ಹೊನ್ನಳ್ಳಿ ಗ್ರಾಮದಲ್ಲಿ ಶೇ.75.00ರಷ್ಟು ರೈತರು 0–3 ಲಕ್ಷವೆಂದು, ಶೇ.16.67ರಷ್ಟು ರೈತರು 3–6 ಲಕ್ಷವೆಂದು ಶೇ.833ರಷ್ಟು ರೈತರು 6–9 ಲಕ್ಷವೆಂದು, 9 ಲಕ್ಷಕ್ಕಿಂತ ಹೆಚ್ಚಿನ ಸಾಲವನ್ನು ಈ ಗ್ರಾಮದಲಿ ಯಾರೂ ಪಡೆದಿಲ್ಲ. ಕೃಷಿ ಸಾಲಕ್ಕಾಗಿ ಏನನ್ನು ಅಡಮಾನವಾಗಿ ಇಟ್ಟಿದ್ದೀರಿ ಎಂದರೆ ಹೊಸಹಳ್ಳಿಯಲ್ಲಿ ಕೃಷಿಸಾಲಕ್ಕಾಗಿ ಶೇ.80.00 ರಷ್ಟು ರೈತರು ಜಮೀನನ್ನು ಅಡಮಾನವಾಗಿ ಇರಿಸಿದ್ದಾರೆ. ಮನೆಯನ್ನು ಹಾಗೂ ಟ್ರ್ಯಾಕ್ಟರ್‌ಗಳನ್ನು ಸಮನಾಗಿ ಶೇ.8.33ರಷ್ಟು ರೈತರು ಸಾಲಕ್ಕಾಗಿ ಅಡಮಾನವನ್ನು ಇಟ್ಟಿದ್ದಾರೆ. ಅಲ್ಲದೆ ಶೇ.3.34ರಷ್ಟು ರೈತರು ಇತರೆ ಆಸ್ತಿಯನ್ನು ಅಡಮಾನವಾಗಿಟ್ಟು ಸಾಲವನ್ನು ಪಡೆದಿದ್ದಾರೆ. ಹೆಚ್ಚೇನೂ ಭಿನ್ನವಿಲ್ಲದ ಅಂಕಿ–ಅಂಶಗಳು ಹೊನ್ನಳ್ಳಿ ಗ್ರಾಮದಲ್ಲಿ ಕಂಡುಬಂದಿವೆ. ಕ್ರಮವಾಗಿ ಶೇ.85.00ರಷ್ಟು ರೈತರು ಜಮೀನನ್ನು ಮತ್ತು ಮನೆಯನ್ನು ಹಾಗೂ ಟ್ರ್ಯಾಕ್ಟರ್‌ಗಳನ್ನು ಸಮನಾಗಿ ಅಂದರೆ ಶೇ.6.67ರಷ್ಟು ರೈತರು ಸಾಲಕ್ಕಾಗಿ ಅಡಮಾನವನ್ನು ಇಟ್ಟಿರುತ್ತಾರೆ. ಅಲ್ಲದೆ ಶೇ.1.67ರಷ್ಟು ರೈತರು ಇತರೆ ಆಸ್ತಿಯನ್ನು ಅಡಮಾನವಾಗಿಟ್ಟು ಹೊನ್ನಳ್ಳಿಯ ರೈತರು ಸಾಲವನ್ನು ಪಡೆದಿರುತ್ತಾರೆ.

### ಕೋಷ್ಟಕ–64

### ರೈತರು ಸಾಲಕ್ಕಾಗಿ ಆಸ್ತಿಗಳ ಅಡಮಾನವಿರಿಸಿರುವ ವಿವರ

| ಕ್ರ ಸಂ. | ಸಾಲದ ಮೊತ್ತ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | 0–3ಲಕ್ಷ | 35 | 58.33 | 45 | 75.00 |
| 2. | 3–6ಲಕ್ಷ | 20 | 33.33 | 10 | 16.67 |
| 3. | 6–9ಲಕ್ಷ | 5 | 8.33 | 5 | 8.33 |
| 4. | 9ಲಕ್ಷಕ್ಕೂ ಹೆಚ್ಚು. | 00 | 00 | 00 | 00 |
| | ಒಟ್ಟು | 60 | 100 | 60 | 100 |
| | ಅಡಮಾನವಾಗಿ | | | | |
| 1. | ಜಮೀನು | 48 | 80.00 | 51 | 85.00 |
| 2. | ಮನೆ | 05 | 8.33 | 4 | 6.67 |
| 3. | ಟ್ರ್ಯಾಕ್ಟರ್ | 05 | 8.33 | 4 | 6.67 |
| 4. | ಇತರೆ | 02 | 3.33 | 1 | 1.66 |
| | ಒಟ್ಟು | 60 | 100 | 60 | 100 |

**ಮಾಹಿತಿ ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಸಾಲವನ್ನು ಮರುಪಾವತಿಸುವ ವಿಧಾನದ ವಿಷಯವನ್ನು ಪ್ರಸ್ತಾಪಿಸಿದಾಗ ರೈತರು, ಭಿತ್ತಿದ ಬೀಜ ಬೆಳೆಯಾಗಿ ಸರಿಯಾಗಿ ಬಂದು ಕೈ ಸೇರಿ, ಬೆಳೆದ ಉತ್ಪನ್ನಗಳಿಗೆ ಬೆಲೆ ಸರಿಯಾಗಿ ದೊರೆತರೆ, ನಾವೇಕೆ ಸರ್ಕಾರದ ಹಣವನ್ನು ಇಟ್ಟುಕೊಳ್ಳುತ್ತೇವೆ ಮೇಡಂ ಮತ್ತು ದೇಶದೆಲ್ಲೆಡೆ ಯಾಕೆ ರೈತರ ಆತ್ಮಹತ್ಯೆಯಂತ ಕೃತ್ಯಗಳು ಆಗುತ್ತವೆ ಎನ್ನುವ ತಮ್ಮ ಮನದಾಳದ ಮಾತುಗಳನ್ನು ರೈತರು ತುಂಬಾ ಬೇಸರದಿಂದ ನುಡಿದರು. ಹೊಸಹಳ್ಳಿಯ ರೈತರಲ್ಲಿ, ಕೋಷ್ಟಕ–65ರಲ್ಲಿ ರೈತರು ಹೆಚ್ಚಾಗಿ ಬೆಳೆ ಬಂದ ನಂತರ ಶೇ.50ರಷ್ಟು, ಆರು ತಿಂಗಳಿಗೊಮ್ಮೆ ಶೇ.33.33ರಷ್ಟು, ಮತ್ತು ವರ್ಷಕ್ಕೊಂದು ಸಲ ಶೇ.8.33ರಷ್ಟು ರೈತರು ಸಾಲವನ್ನು ಮರುಪಾವತಿಸಿದ್ದಾರೆ. ಹಾಗೆಯೇ ಶೇ.8.33ರಷ್ಟು ರೈತರಿಗೆ ಇದುವರೆಗೂ ಸಾಲವನ್ನು ಹಿಂತಿರುಗಿಸಲು ಆಗಿರುವುದಿಲ್ಲ ಎನ್ನುವ ವಿಚಾರವು ತಿಳಿದುಬರುತ್ತದೆ. ಹೊನ್ನಹಳ್ಳಿಯ ರೈತರಲ್ಲಿ, ಹೆಚ್ಚಾಗಿ ಬೆಳೆ ಬಂದ ನಂತರ ಶೇ.46.66ರಷ್ಟು, ಆರು ತಿಂಗಳಿಗೊಮ್ಮೆ ಶೇ.35.00ರಷ್ಟು, ಮತ್ತು ವರ್ಷಕ್ಕೊಂದು ಸಲ ಶೇ.15

ರಷ್ಟು ಹಾಗೆಯೇ ಶೇ.3.33ರಷ್ಟು ಹೊನ್ನಳ್ಳಿಯ ರೈತರಿಗೆ ಇದುವರೆಗೆ ಸಾಲವನ್ನು ಹಿಂತಿರುಗಿಸಲು ಆಗಿರುವುದಿಲ್ಲ ಇನ್ನುವ ವಿಚಾರವು ಅಧ್ಯಯನದ ಕಾರ್ಯಕ್ಷೇತ್ರದಿಂದ ತಿಳಿದುಬಂದಿದೆ. ಕೋಷ್ಟಕದಲ್ಲಿ ಕೃಷಿ ಸಾಲದಿಂದ ನಿಮ್ಮ ಕುಟುಂಬದಲ್ಲಿ ಯಾರಾದರೂ ಆತ್ಮಹತ್ಯೆ ಮಾಡಿಕೊಂಡಿರುವಿರಾ ಎಂದರೆ ಎರಡು ಗ್ರಾಮಗಳಲ್ಲಿ ಅಂತಹ ಉದಾಹರಣೆಗಳು ಇರುವುದಿಲ್ಲ ಎನ್ನುವ ವಿಚಾರ ಕ್ಷೇತ್ರ ಕಾರ್ಯದಿಂದ ತಿಳಿದುಬಂದಿದೆ.

**ಕೋಷ್ಟಕ–65**

**ರೈತರು ಸಾಲ ಮರುಪಾವತಿಸುವ ಮತ್ತು ರೈತರ ಆತ್ಮಹತ್ಯೆಯ ವಿವರಗಳು**

| ಕ್ರ. ಸಂ. | ಸಾಲ ಮರುಪಾವತಿ ಮಾಹಿತಿ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ಬೆಳೆ ಬಂದ ನಂತರ | 30 | 50.00 | 28 | 46.66 |
| 2. | ಆರು ತಿಂಗಳಿಗೊಮ್ಮೆ | 20 | 33.33 | 21 | 35.00 |
| 3. | ವರ್ಷಕ್ಕೊಂದು ಸಲ | 05 | 8.33 | 9 | 15.00 |
| 4. | ಹಿಂತಿರುಗಿಸಿಲ್ಲ | 05 | 8.33 | 2 | 3.33 |
| | ಒಟ್ಟು | 60 | 100 | 60 | 100 |
| | ರೈತರ ಆತ್ಮಹತ್ಯೆ | | | | |
| 1. | ಹೌದು | 00 | 00 | 00 | 00 |
| 2. | ಇಲ್ಲ | 60 | 100 | 60 | 100 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:** ಕ್ಷೇತ್ರಕಾರ್ಯದಿಂದ

ಮುಂದಿನ ಪ್ರಶ್ನೆಯೂ ಬೆಳೆ ನಷ್ಟವಾದ ಸಂದರ್ಭದಲ್ಲಿ ರೈತರಿಗೆ ಬರಪರಿಹಾರದ ಮೊತ್ತದ ಕುರಿತು, ಇದಕ್ಕೆ ಸಂಬಂಧಿಸಿದಂತೆ ತಾಲೂಕು ಕಛೇರಿಯ ಅಧಿಕಾರಿಯನ್ನು ಕೇಳಿದಾಗ ಈ ಕೆಳಗಿನಂತೆ ಮಾಹಿತಿ ದೊರೆತಿದೆ. ಸಂಡೂರು ತಾಲೂಕಿನ, ತಾಲೂಕು ಸರ್ವೇಯರ್, ಬಸವರಾಜ ರೋಣದ ಅವರು ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುವರು. ಇವರನ್ನು ಅಧ್ಯಯನದ ವಿಷಯವಾಗಿ ದಿನಾಂಕ: 25/10/2013 ರಂದು ಮಾತನಾಡಿಸಿದಾಗ ಅವರು ಅಧ್ಯಯನಕ್ಕೆ ಪೂರಕವಾದ ಕೆಲವು ಮಾಹಿತಿಯನ್ನು ನೀಡಿದರು. ಅವರನ್ನು ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಸಿದ್ಧಪಡಿಸಿಕೊಂಡಿದ್ದ ಪ್ರಶ್ನೆಗಳನ್ನು ಕೇಳಿದೆ. ಅವುಗಳು ಇಂತಿವೆ.

ಮೊದಲನೆಯದಾಗಿ, ಕಂದಾಯ ಇಲಾಖೆ ಎಂದರೇನು, ಎರಡನೆಯದಾಗಿ, ಕಂದಾಯ ಇಲಾಖೆಯಲ್ಲಿ ಕೃಷಿಕನ ಪಾತ್ರವೇನು, ಮೂರನೆಯದಾಗಿ ಕಂದಾಯ ಇಲಾಖೆಯಲ್ಲಿರುವ ಭೂಮಾಪನ ಶಾಖೆಗೂ ಮತ್ತು ಕೃಷಿಕನಿಗೂ ಇರುವ ಸಂಬಂಧವೇನು ಎನ್ನುವ ಅಧ್ಯಯನದ ಪ್ರಶ್ನೆಗಳಿಗೆ ಈ ಕೆಳಗಿನಂತೆ ಉತ್ತರಿಸಿದ್ದಾರೆ. ಮೊದಲನೆಯದಾಗಿ,

ಕಂದಾಯ ಇಲಾಖೆ ಎಂದರೆ ಏನೆಂದು ಅವರು ಒಂದು ಉದಾಹರಣೆ ಸಮೇತ ವಿವರಿಸಿದರು. ಅದು ಎಸ್.ರಾಧಕೃಷ್ಣರವರ ಹೇಳಿಕೆ ಹೇಳುತ್ತಾ ಹೇಗೆ ಬಾಲಕರು ದೇಶದ ಬೆನ್ನಲಬು. ಹಾಗೆಯೇ ಕಂದಾಯ ಇಲಾಖೆಯೂ ರೈತರ ಬೆನ್ನಲುಬು ಎನ್ನುವುದರ ಜೊತೆಗೆ ಕಂದಾಯ ಇಲಾಖೆಯ ಕಾರ್ಯವೈಖರಿಗಳನ್ನು ಮತ್ತು ಅದರ ಯೋಜನೆಗಳನ್ನು ಹೇಳಿದರು. ಮೊದಲನೆಯದು, ಮೋಜಣಿ ಇಲಾಖೆಯು ಎಲ್ಲೆಗಳನ್ನು ಗುರುತಿಸುವುದು ಹಾಗೂ ಎಲ್ಲೆಗಳ ನಡುವಿನ ತೊಡಕುಗಳನ್ನು ಬಗೆಹರಿಸಿಕೊಡುವುದು. ಎರಡನೆಯದು, ಮೋಜಣಿ ಇಲಾಖೆಯು ಮಣ್ಣಿನ ಗುಣಮಟ್ಟವನ್ನು ಭೂಮಿಯ ವರ್ಗೀಕರಣದಿಂದ ತಿಳಿದುಕೊಳ್ಳುವುದು. ಮೂರನೆಯದು, ಇಲಾಖೆಯು ಕೇವಲ ಭೂಮಿಯಲ್ಲಿಯ ಮಣ್ಣಿನ ಮೇಲೆ ಅದರ ಆಕಾರ ನಿರ್ಧಾರವಾಗುತ್ತದೆ. ಹಾಗಾಗಿ ಮಣ್ಣಿನ ನಮೂನೆಯ ದಾಖಲೆಗಳನ್ನು ಅರಿತುಕೊಳ್ಳುವುದು. ನಾಲ್ಕನೆಯದು, ಕೃಷಿಕನ ಹಕ್ಕನ್ನು ತಿಳಿಸಿಕೊಡುಸುವುದು. ಅಂದರೆ ಕೃಷಿಕ್ಷೇತ್ರ ಸಾಗುವಳಿಗೆ ಯೋಗ್ಯವಾದ(ಕರಾಬುವಿನ) ಕ್ಷೇತ್ರ ಅಂದರೆ ಒಕ್ಕಲು ಭೂಮಿಯಲ್ಲಿ ರಸ್ತೆ, ಹರಳುಗಳು, ಸವಳು ಭೂಮಿ ಇತರೇ ಗುರುತಿಸುವುದು. ಐದನೆಯದು ಇತರರ ಋಣಗಳನ್ನು ತಿಳಿದುಕೊಳ್ಳುವುದು. ಅಂದರೆ, *ಆಯ್ಕೆ, *ಗುತ್ತಿಗೆ, *ಸಾಲ. ಆರನೆಯದು, ಸರ್ಕಾರದಿಂದ ಅನೂಕೂಲ ಪಡೆದ ಎಲ್ಲ ವಿವರಗಳ ಪರಿಶೀಲನೆ. ಏಳನೆಯದು ಭೂಮಿ ವಿಚಾರ(ಕೃಷಿಕನ ಸಂಪೂರ್ಣ ವಿವರ) ಹಾಗೆಯೇ ಇವರು ಹಳೆಯ ಕಾಲದ ಕಂದಾಯ/ಮೋಜಣಿ ಮತ್ತು ನವೀನ ಮೋಜಣಿ ವಿಷಯವನ್ನು ಪ್ರಸ್ತಾಪಿಸಿದಾಗ, ಕಂದಾಯವು ಷೇರ್-ಷಹಾ ಕಾಲದಿಂದಲೂ ಇದೆ. ಆಗಿನ ಕಾಲದಲ್ಲಿ ಮೋಜಣಿಗೆ ಆಘಾತ ಎಂದು ಕರೆಯುತ್ತಿದ್ದರು. ಇವೆರಡರ ನಡುವೆ ಇರುವ ವ್ಯತ್ಯಾಸವನ್ನು ಈ ರೀತಿಯಾಗಿ ವಿವರಿಸಿದರು. ಇಂದಿನ ಮೋಜಣಿಯೂ ಗುಣೋತ್ತರ ಶ್ರೇಣಿಯಲ್ಲಿಯೂ, ಹಳೆಯ ಕಾಲದ ಶ್ರೇಣಿಯೂ ಅಂಕಗಣಿತದ ಶ್ರೇಣಿಯಲ್ಲಿಯೂ ಇರುವುದು. ಅದಕ್ಕೆ ಉದಾಹರಣೆ ನೀಡಿದರು. ಅದು ಹಳೆಯ ಕಾಲದ ಮೋಜಣಿಯೂ ಆಹಾರದಲ್ಲಿ ದುಪ್ಪಟ್ಟು ಅಂದರೆ 2+2=4, 4+2=6. ಇಂದಿನ ಮೋಜಣಿಯೂ ಜನಸಂಖ್ಯೆಯಲ್ಲಿ 2*2=4, 4*2=8. ಹಾಗೆಯೇ ಇತ್ತೀಚಿನ ದಿನಗಳಲ್ಲಿ ಆದಾಯ ಇಲಾಖೆಯಲ್ಲಿ ಆಧುನಿಕ ತಾಂತ್ರಿಕತೆಯನ್ನು ಅಳವಡಿಸಿರುವ ಸರ್ಕಾರವು,

ರೈತರ ಪಹಣಿ ಪತ್ರಿಕೆಗಳನ್ನು ಕಂಪ್ಯೂಟರೀಕರಣದ ಮೂಲಕ ಮುದ್ರಿಸಿಕೊಡುವುದಲ್ಲದೆ ರೈತರ ಭೂಮಿಯ ಸಂಪೂರ್ಣ ನಕಾಶೆಯನ್ನು ಅದರ ಹಿಂಬದಿಯಲ್ಲಿ ಮುದ್ರಿಸುವಲ್ಲಿ ಮುಂದಾಗಿದೆ.

ಮುಂದಿನ ನನ್ನ ಪ್ರಶ್ನೆಯು, ಕಂದಾಯ ಇಲಾಖೆಗೆ ಯಾವ ವರ್ಗದ ರೈತರು ಹೆಚ್ಚಾಗಿ ಭೇಟಿ ನೀಡುತ್ತಾರೆ ಎಂದಾಗ: ಬಸವರಾಜ ಅವರು, servy section is the main foundation of the revenue department, ಹಾಗಾಗಿ ಹಕ್ಕು ಬದಲಾವಣೆಗೆ ಸಂಬಂಧಿಸಿದಂತೆ, ಕ್ಷೇತ್ರಗಳ ಅಳತೆ ವಿಚಾರವಾಗಿ, ಇತ್ಯಾದಿ ವಿಷಯಗಳಿಗೆ ಎಲ್ಲ ವರ್ಗದ ರೈತರು, ಅಂದರೆ ದೊಡ್ಡ ಹಿಡುವಳಿದಾರರು, ಮಧ್ಯಮ ಹಿಡುವಳಿದಾರರು, ಚಿಕ್ಕ ಹಿಡುವಳಿದಾರರು(Middle, small, large scale formers) ಬರುತ್ತಾರೆ ಎನ್ನುವ ಸಂಗತಿಯನ್ನು ವಿವರಿಸಿದರು. ಕಂದಾಯ ಇಲಾಖೆಯಿಂದ ರೈತರಿಗೆ ದೊರೆಯುವ ಪಹಣಿ ವಿಚಾರವಾಗಿ ಪ್ರಶ್ನಿಸಿದಾಗ, ರೈತರಿಗೆ ಪ್ರತ್ಯೇಕ ಪಹಣಿಯನ್ನು ವಿತರಿಸುತ್ತಿದ್ದು, ಅದಕ್ಕೆ ಕಾರಣವನ್ನು ಈ ರೀತಿಯಾಗಿ ಹೇಳಿದರು. ಒಂದು ಕುಟುಂಬದಲ್ಲಿ ಹತ್ತು ಜನರಿದ್ದು ಅವರೆಲ್ಲರ ಪಾಲಿನ ಹಿಡುವಳಿ ಭೂಮಿಯು ಒಬ್ಬರ ಹೆಸರಲ್ಲಿದ್ದರೆ, ಅಂತಹ ಸಂದರ್ಭದಲ್ಲಿ ಪ್ರತ್ಯೇಕ ಪಹಣಿಯ ಆಧಾರದ ಮೇಲೆ ಸರ್ಕಾರವು ಕೊಡುವ ಯೋಜನೆಗಳು ಎಲ್ಲ ಭೂ ಹಿಡುವಳಿದಾರರಿಗೆ ದೊರೆಯುವುದಿಲ್ಲ. ಹೀಗಾಗಿ ರೈತರು ಯೋಜನೆಗಳ ಪ್ರಯೋಜನೆಯನ್ನು ಪಡೆಯಲು, ಪ್ರತ್ಯೇಕ ಪಹಣಿಯನ್ನು ಕಂದಾಯ ಇಲಾಖೆಯಲ್ಲಿ ಪಡೆದು, ಸರಕಾರದಿಂದ ದೊರೆಯುವ ಯೋಜನೆಗಳನ್ನು ತಿಳಿದು ಉಪಯೋಗ ಪಡೆದುಕೊಳ್ಳಬೇಕು. ಹಾಗೆಯೇ ಪ್ರತ್ಯೇಕ ಪಹಣಿಯಿಂದ ರೈತರು ಸಾಲವನ್ನು ಪಡೆಯಬಹುದು ಎಂದು ತಿಳಿಸಿದರು. ಪ್ರತ್ಯೇಕ ಪಹಣಿಯ ಪ್ರಯೋಜನಗಳು ಇಂತಿವೆ.

- ಪ್ರತ್ಯಕ ಪಹಣಿ ಪತ್ರಿಕೆ ವಿತರಣೆಯಿಂದ, ರೈತರು ಸುಲಭವಾಗಿ ಬ್ಯಾಂಕ್ ಸಾಲವನ್ನು ಪಡೆಯಬಹುದು.
- ಸರ್ಕಾರವು ರೈತರಿಗೆ ಕೊಡುವ ಪರಿಹಾರಧನವನ್ನು ರೈತರ ಪಹಣಿ ಆಧಾರದ ಮೇಲೆಯೇ ನೀಡುತ್ತಾರೆ. ಹೀಗಾಗಿ ಪ್ರತ್ಯೇಕ ಪಹಣಿ ರೈತರಿಗೆ ಅನುಕೂಲವಾಗುತ್ತದೆ.
- ಬಹುಸಂಖ್ಯಾತ ಹಿಡುವಳಿದಾರರ ಪಹಣಿ ಪತ್ರಿಕೆಯ ರೈತರು ಸರ್ಕಾರದ ಯೋಜನೆಯ ಪ್ರಯೋಜನ ಪಡೆಯಲು ರೈತರೆಲ್ಲರ ಮನೆಯವರ, ಒಪ್ಪಿಗೆಯ ಅವಶ್ಯಕವಾಗಿರುತ್ತದೆ. ಇದರಿಂದ ಪ್ರತ್ಯೇಕ ಪಹಣಿ ಪತ್ರಿಕೆಯಿಂದ ದೊರೆಯುವ ಸರ್ಕಾರದ ಯೋಜನೆಯ ಪ್ರಯೋಜನಗಳು ಮತ್ತು ಸಣ್ಣ ರೈತರಿಗೆ ದೊರೆಯುವ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

ಬರಪರಿಹಾರದ ವಿಷಯವಾಗಿ ಚರ್ಚಿಸಿದಾಗ, ಸರ್ಕಾರವು ರೈತರಿಗೆ ಬೆಳೆ ನಾಶವಾದಂತ ಸಂದರ್ಭದಲ್ಲಿ, ವಿತರಿಸುವ ಹಣಕಾಸಿಗೆ ಬರಪರಿಹಾರ ಎನ್ನುವರು. ರೈತರು ಭೂಮಿಗೆ ಬೀಜ ಬಿತ್ತಿ, ಗೊಬ್ಬರ ಹಾಕಿದ ಸಂದರ್ಭದಲ್ಲಿ ಕೆಲವು ಸಲ ಬೆಳೆಯನ್ನು ಪಡೆಯುವುದಿಲ್ಲ. ಅಂತಹ ಸಂದರ್ಭದಲ್ಲಿ ಸರ್ಕಾರವು, ರೈತರಿಗೆ ಆದ ನಷ್ಟದ ಅಂದಾಜು ಮಾಡಿ ಬರಪರಿಹಾರವನ್ನು ನೀಡುತ್ತದೆ. ಈ ಯೋಜನೆಯ ಬಾಧಕವನ್ನು ಹೀಗೆ ವಿವರಿಸಿದರು. ಅನೇಕ ಸಲ ಬೆಳೆ ನಾಶವಾದ ರೈತರ ಜೊತೆಗೆ, ಕೃಷಿ ಭೂಮಿಯಲ್ಲಿ ಕೃಷಿಯನ್ನು ಮಾಡದೆ(ಬೀಳುಬಿಟ್ಟ) ರೈತರು ಬರಪರಿಹಾರವನ್ನು ಪಡೆಯುತ್ತಾರೆ.ಬರಪರಿಹಾರವು ಸಣ್ಣ ಮತ್ತು ದೊಡ್ಡ ರೈತರಿಗೆ ಪ್ರತ್ಯೇಕವಾದ ಯೋಜನೆಗಳನ್ನು ಕಾಲಕಾಲಕ್ಕೆ ನವೀನ ಯೋಜನೆಗಳನ್ನು ನಿಯೋಜಿಸುತ್ತದೆ.

ಈ ಕೆಳಗಿನಂತೆ ಬೆಳೆನಾಶದ ನಷ್ಟವನ್ನು ಸರ್ಕಾರವು ತುಂಬುತ್ತದೆ

1. ಶೇಕಡಾ 25ಕ್ಕಿಂತ ಕಡಿಮೆ ಹಾನಿ ಹೊಂದಿದ್ದರೆ ಬೆಳೆ ವಿಮಾ ಯೋಜನೆಯಿಂದ ಪರಿಹಾರ ದೊರೆಯುತ್ತದೆ.
2. ಶೇಕಡಾ 10ಕ್ಕಿಂತ ಕಡಿಮೆ ಹಾನಿ ಹೊಂದಿದರೆ ಕಂದಾಯ ತೆರಿಗೆ ಮನ್ನಾ ಆಗುತ್ತದೆ.
3. ಶೇಕಡಾ 50ಕ್ಕಿಂತ ಜಾಸ್ತಿಯಾಗಿದ್ದರೆ ಕಂದಾಯ ಇಲಾಖೆ ಪರಿಹಾರ ಕೊಡುತ್ತದೆ.

ಹೆಸರು ಹೇಳಲು ಇಚ್ಛಿಸದ ಸಂಡೂರು ತಾಲೂಕಿನ, ತಾಲೂಕು ಆಫೀಸಿನ (contrct basis) ಅಧಿಕಾರಿಯೊಬ್ಬರು, ಬರ ಪರಿಹಾರದ ಕುರಿತು ದಿನಾಂಕ 21/11/2013ರಂದು ಕೇಳಿದ ಪ್ರಶ್ನೆಗೆ, ಬರಪರಿಹಾರಕ್ಕೆಂದು ಸರ್ಕಾರವು ಬಿಡುಗಡೆ ಮಾಡಿದ ಹಣವನ್ನು ಕೇವಲ ಕೆಲವೇ ರೈತರು ಪಡೆಯುತ್ತಾರೆ ಎನ್ನುತ್ತಾ ಇದಕ್ಕೆ ಕಾರಣವನ್ನು ಹೀಗೆ ಹೇಳುತ್ತಾರೆ. ಕೆಲವು ಅಧಿಕಾರಿಗಳು ರೈತರ ಹೆಸರಲ್ಲಿ ತಾವೇ ಹಣವನ್ನು ತೆಗೆದುಕೊಳ್ಳುವುದು, ಇಲ್ಲವೇ ಬಂದತಹ ಹಣವನ್ನು (ಚೆಕ್) ವಿತರಿಸುವಾಗ ರೈತರಿಂದ ಇಂತಿಷ್ಟು ಎಂದು ಹಣವನ್ನು ವಸೂಲಿ ಮಾಡುವುದು, ಹಾಗೂ ಇದಕ್ಕೆ ಕೆಲವು ಸಲ ರೈತರು ಕಾರಣವೆಂದು, ರೈತರ ಅವಿದ್ಯಾವಂತಿಕೆ, ಅಲ್ಲದೆ ಬರಪರಿಹಾರದ ಮಾಹಿತಿಯು ತಿಳಿಯದೇ ಇರುವುದು ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಕೆಳಗಿನ ಕೋಷ್ಟಕ–66ರಲ್ಲಿ ಬರಪರಿಹಾರದ ಕುರಿತು ಚರ್ಚಿಸಲಾಗಿದೆ. ಸರ್ಕಾರವು ರೈತರಿಗೆ ಬೆಳೆ ನಷ್ಟವಾದ ಸಂದರ್ಭದಲ್ಲಿ ವಿವಿಧ ಮೂಲಗಳಿಂದ ಧನಸಹಾಯ ಮಾಡವ ವಿಶ್ವಾಸವನ್ನು ರೈತರಿಗೆ ನೀಡುತ್ತದೆ. ಅದರ ಕುರಿತು ಯಾವ ಮೂಲಗಳಿಂದ ರೈತರಿಗೆ ಪರಿಹಾರ ನೀಡಲಾಗುತ್ತದೆ ಎಂದು ಹೊಸಹಳ್ಳಿ ಗ್ರಾಮದಲ್ಲಿ ರೈತರನ್ನು ಕೇಳಿದಾಗ, ಶೇ.75

ರಷ್ಟು ರಾಜ್ಯ ಸರ್ಕಾರದಿಂದ, ಶೇ.25.00ರಷ್ಟು ಕೇಂದ್ರ ಸರ್ಕಾರದಿಂದ ಪರಿಹಾರ ದೊರೆಯುತ್ತದೆ ಎಂದರು. ಇನ್ನು ಹೊನ್ನಳ್ಳಿ ಗ್ರಾಮದಲ್ಲಿ ಶೇ.66.66ರಷ್ಟು ರಾಜ್ಯ ಸರ್ಕಾರದಿಂದ, ಶೇ.33.34 ರಷ್ಟು ಕೇಂದ್ರ ಸರ್ಕಾರದಿಂದ ಪರಿಹಾರ ದೊರೆಯುತ್ತದೆ ಎಂದು ರೈತರು ತಿಳಿಸಿದರು. ಇದಕ್ಕೆ ಪೂರಕವಾದ ಬೆಳೆ ನಷ್ಟವಾದ ಸಂದರ್ಭದಲ್ಲಿ ಪರಿಹಾರವನ್ನು ಯಾವ ರೂಪದಲ್ಲಿ ನೀಡುತ್ತಾರೆ ಎಂದು ರೈತರನ್ನು ಪ್ರಶ್ನಿಸಿದಾಗ, ಮೊದಲೆಲ್ಲ ನಗದು ರೂಪದಲ್ಲಿ ಸರ್ಕಾರದಿಂದ ಹಣವನ್ನು ನೀಡುತ್ತಿದ್ದರು. ಆದರೆ ಈಗ ಹಾಗಲ್ಲ. ಹಣವನ್ನು ನೇರವಾಗಿ ರೈತರ ಖಾತೆಗಳಿಗೆ ಜಮಾ ಮಾಡಲಾಗುತ್ತದೆ ಎಂದು ಹಳ್ಳಿಯಲ್ಲಿ ತಿಳಿಸಿದರು. ಪರಿಹಾರವು ಎಕರೆಗೆ ಇಂತಿಷ್ಟು ಎಂದು ನೀಡುತ್ತಾರೆ ಎನ್ನುವ ಅಂಶವನ್ನು ಹೊಸಹಳ್ಳಿಯಲ್ಲಿ ಮತ್ತು ಹೊನ್ನಳ್ಳಿಯಲ್ಲಿ ರೈತರು ಅಭಿಪ್ರಾಯ ವ್ಯಕ್ತಪಡಿಸಿದರು.

ಕೃಷಿ ಪರಿಹಾರವನ್ನು ಇಲಾಖೆಗಳಿಂದ ಪಡೆಯಲು ಎಷ್ಟು ದಿನಗಳು ಬೇಕಾಗುವುದು ಎನ್ನುವ ಪ್ರಶ್ನೆಗೆ, ರೈತರ ಉತ್ತರವು, ಪರಿಹಾರದ ಸಮಯವು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುವ ಅಧಿಕಾರಿಗಳ ಮೇಲೆ ನಿಗದಿಯಾಗುತ್ತದೆಯಾದರೂ ಸರ್ಕಾರದ ನಿಯಮದ ಪ್ರಕಾರ ಸಮೀಕ್ಷಾ ತಂಡ ವಿಎ ಮತ್ತು ಆರ್‌ಎ ರಿಪೋರ್ಟ್ ಅಧಾರದ ಮೇಲೆ ರೈತರ ಹೊಲಗಳಿಗೆ ಬೇಟಿ ನೀಡಿದ 2ರಿಂದ 3 ತಿಂಗಳಗಳೊಳಗೆ ಪರಿಹಾರ ನೀಡಬೇಕು. ಕ್ರಮವಾಗಿ ಹೊಸಹಳ್ಳಿ ಗ್ರಾಮದಲಿ ಮತ್ತು ಹೊನ್ನಳ್ಳಿ ಗ್ರಾಮದಲ್ಲಿ ಶೇ.75 ಮತ್ತು ಶೇ.91.67 ರಷ್ಟು ರೈತರು 6 ತಿಂಗಳಿನಿಂದ 12 ತಿಂಗಳೊಳಗೆ ನೀಡುತ್ತಾರೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಕೋಷ್ಟಕ-66

ರೈತರಿಗೆ ಬರ ಪರಿಹಾರ ನೀಡುವುದರ ವಿವರ

| ಕ್ರ. ಸಂ. | ಕೇಂದ್ರ ಯೋಜನೆಗಳ ಪ್ರಯೋಜನೆ | ಹೊಸಳ್ಳಿ ಗ್ರಾಮ | | ಹೊನ್ನಳ್ಳಿ ಗ್ರಾಮ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| 1. | ರಾಜ್ಯ ಸರ್ಕಾರ | 45 | 75.00 | 40 | 66.66 |
| 2. | ಕೇಂದ್ರ ಸರ್ಕಾರ | 15 | 25.00 | 20 | 33.34 |
| 3. | ಖಾಸಗಿ | 00 | 00 | 00 | 00 |
| | ಒಟ್ಟು | 60 | 100 | 60 | 100 |
| | ಪರಿಹಾರ ರೂಪ | | | | |
| 1. | ನಗದು | 00 | 00 | 00 | 00 |
| 2. | ಡೈರೆಕ್ಟ್ ಅಕೌಂಟ್ ಪೇಮೆಂಟ್ | 56 | 93.33 | 60 | 100 |
| 3. | ಸಾಲ ಮನ್ನದ ರೂಪ/ಚೆಕ್ | 04 | 6.67 | 00 | 00 |
| 4 | ಇತರೆ | 00 | 00 | 00 | 00 |
| | ಒಟ್ಟು | 60 | 100 | 60 | 100 |
| | ರೈತರಿಗೆ ಪರಿಹಾರ ನೀಡಿದ ಮೊತ್ತ | | | | |
| 1. | 1–3 ಎಕರೆಗೆ | 35 | 58.33 | 27 | 45.00 |
| 2. | 3–6 ಎಕರೆಗೆ | 15 | 25.00 | 25 | 41.67 |
| 3. | 6 ಎಕರೆಗಿಂತ ಹೆಚ್ಚು ಭೂಮಿಗೆ | 10 | 16.67 | 03 | 05.00 |
| | ಒಟ್ಟು | 60 | 100 | 60 | 100 |
| | ಪರಿಹಾರ ಪಡೆಯಲು ಬೇಕಾದ ಅವಧಿ | | | | |
| 1. | 1–6 ತಿಂಗಳು | 05 | 8.33 | 03 | 5.00 |
| 2. | 6–12 ತಿಂಗಳು | 45 | 75.00 | 55 | 91.67 |
| 3. | 12 ತಿಂಗಳಗಿಂತ ಹೆಚ್ಚು. | 10 | 16.67 | 02 | 3.33 |
| | ಒಟ್ಟು | 60 | 100 | 60 | 100 |

**ಮಾಹಿತಿಯ ಮೂಲ:**ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

## ಉಪಸಂಹಾರ

ಮೇಲಿನ ಅಧ್ಯಾಯದಲ್ಲಿ ತೋಟಗಾರಿಕೆ ಕೃಷಿಯಿಂದ ರೈತರಿಗಾಗಿ ಇರುವ ಅನೇಕ ಯೋಜನೆಗಳನ್ನು ಸಿದ್ಧಪಡಿಸಿದ ಪ್ರಶ್ನಾವಳಿಯಿಂದ, ಕ್ಷೇತ್ರಕಾರ್ಯ ಮಾಡಿ ಬಂದ ಅಂಕಿ–ಅಂಶಗಳಿಂದ ವಿಶ್ಲೇಷಣೆಯನ್ನು ಮಾಡಲಾಗಿದೆ, ಎರಡು ಗ್ರಾಮಗಳಲ್ಲಿ ನೋಡುವುದಾದರೆ, ಹೊಸಹಳ್ಳಿ ಗ್ರಾಮದಲ್ಲಿ ಹೆಚ್ಚಿನ ರೈತರು ತೋಟಗಾರಿಕೆ ಕೃಷಿಯ ಯೋಜನೆಗಳ ಕುರಿತು ಹೆಚ್ಚು ತಿಳಿದುಕೊಂಡಿದ್ದಾರೆ ಮತ್ತು ವಿವಿಧ ಯೋಜನೆಗಳ ಫಲಾನುಭವಿಗಳೂ ಆಗಿದ್ದಾರೆ. ರೈತರು ಹಣ್ಣಿನ ಬೆಳೆಗಳಿಗೆ ಸಮಗ್ರ ಕೃಷಿ ಯೋಜನೆಯಡಿ ಪ್ರಯೋಜನವನ್ನು ಪಡೆದುಕೊಂಡರೆ, ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿಯಲ್ಲಿ ಹನಿ ನೀರಾವರಿಗೆ, ಧನಸಹಾಯವನ್ನು ಪಡೆದ ರೈತರು ತರಕಾರಿ, ಹೂವುಗಳನ್ನು ಬೆಳೆಯುತ್ತಿದ್ದಾರೆ. ಹೊನ್ನಳ್ಳಿ ಗ್ರಾಮದಲ್ಲಿಯೂ ಹೆಚ್ಚಾಗಿ ಹಿಂದುಳಿದ ವರ್ಗದ ರೈತರಿದ್ದು ಹೆಚ್ಚಾಗಿ ಹನಿ ನೀರಾವರಿಗೆ ಪ್ರಯೋಜನೆಯನ್ನು ಪಡೆದು, ಅತಿ ಹೆಚ್ಚು ತರಕಾರಿ ಮತ್ತು ಸೊಪ್ಪುಗಳನ್ನು ಬೆಳೆಯುತ್ತಿದ್ದಾರೆ. ಎರಡು ಗ್ರಾಮಗಳಲ್ಲಿ ನೋಡುವುದಾದರೆ, ಹೊಸಳ್ಳಿ ಗ್ರಾಮದ ರೈತರು ಹೆಚ್ಚಾಗಿ ತೋಟಗಾರಿಕೆ ಇಲಾಖೆಯಲ್ಲಿರುವ ಯೋಜನೆಗಳ ಮಾಹಿತಿಯನ್ನು ತಿಳಿದುಕೊಂಡಿದ್ದಾರೆ. ಅದರೊಂದಿಗೆ ಇಲಾಖೆಯಡಿಯಲ್ಲಿ ಸರ್ಕಾರದ ಹಲವು ಯೋಜನೆಗಳ ಪ್ರಯೋಜನೆಯನ್ನು ಪಡೆದುಕೊಂಡಿದ್ದಾರೆ.

## ಕೊನೆ ಟಿಪ್ಪಣಿಗಳು

1. ಕಿರಣ್ ಎಂ. ಗಾಜೂನೂರ್, *ಪ್ರಜಾವಾಣಿ, ಕೃಷಿಯನ್ನು ಕಾರ್ಪೊರೇಟ್ ಹಿಡಿತದಿಂದ ಬಿಡಿಸುವುದೇ ದಾರಿ,* 2016, ಪು.ಸಂ–7
2. ಶರಣಪ್ಪ ಎಸ್., *ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು,* ಪ್ರಕಟಣೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿ, ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳು, 2013, ಬಳ್ಳಾರಿ, ಪು.ಸಂ.88–97
3. ಅದೇ, 2011ರ ಜನಗಣತಿಯ ವಿವರ ಪು.ಸಂ.1–38.
4. ಅದೇ, ಕೃಷಿ ಇಲಾಖೆಯ ಅಂಕಿ ಅಂಶಗಳ ವಿವರ ಪು.ಸಂ.48–87.
5. ಸಂಡೂರು ತಾಲೂಕು ಕಛೇರಿಯಲ್ಲಿ ರೈತರಿಗಿರುವ ಅನುಕೂಲಗಳ ಮಾಹಿತಿ, ತಾಲೂಕು ಕಛೇರಿಯ ಅಧಿಕಾರಿಗಳಿಂದ ಸರ್ಕಾರದ ಯೋಜನೆಗಳ ಮಾಹಿತಿಯನ್ನು ಕಲೆ ಹಾಕಲಾಗಿದೆ.
6. ಬಳ್ಳಾರಿ ತಾಲೂಕು ಕಛೇರಿಯಲ್ಲಿಯೂ ರೈತರಿಗಿರುವ ಜಿಲ್ಲಾ ಮಟ್ಟದಲ್ಲಿರುವ ಯೋಜನೆಗಳ ಮಾಹಿತಿ, ಜಿಲ್ಲಾ ತಾಲೂಕು ಕಛೇರಿಯಿಂದ ಮಾಹಿತಿಯನ್ನು ಪಡೆದುಕೊಂಡಿರುತ್ತೇನೆ.

